## ಬಾಡದ ಹೂವುಗಳು

ಶ್ರೀ ರಾಮಚಂದ್ರರ ಈ ಲೇಖನಗಳು ನಮ್ಮ ಜನರಿಗೆ ಇಪ್ಪತ್ತೈದು ಮಂದಿ ಉನ್ನತಮಟ್ಟದ ಲೇಖಕರ ಒಂದೊಂದು ಕಥೆಯ ಪರಿಚಯವನ್ನು ಮಾಡಿಕೊಡುತ್ತವೆ. ಇಂಥ ಲೇಖನ ಸಾಹಿತ್ಯ ವಿಮರ್ಶೆಯಲ್ಲಿ ಒಂದು ಪ್ರಕಾರ. ಕ್ರಮವಾದ ವಿಮರ್ಶೆಯಲ್ಲಿ ತಕ್ಕಷ್ಟು ವಿಶಾಲವಾದ ವಿಷಯ ಪರಿಶೀಲನ ಇರುತ್ತದೆ. ಅವಲೋಕನ ಇಷ್ಟು ಪರಿಶೀಲನಕ್ಕೆ ಅವಕಾಶ ಇಲ್ಲದ ಕಾರಣ, ಸ್ಥೂಲವಾಗಿ ಕೃತಿಯ ವಿಷಯವನ್ನು ತಿಳಿಸಿ ಅದರ ಗುಣ ಏನು, ಕುಂದೇನು ಎಂದು ಸ್ವಲ್ಪದರಲ್ಲಿ ತಿಳಿಸುವ ಉದ್ಯಮ; ಪುಸ್ತಕ ಪರಿಚಯ ಪುಸ್ತಕದ ವಿಷಯದ ಸಂಗ್ರಹವನ್ನು ಕೊಟ್ಟು ಅದರ ವಿಷಯವನ್ನು ತಿಳಿಸುವ ಪ್ರಯತ್ನ; ಈ ಪುಸ್ತಕದಲ್ಲಿ ಈ ಮೂರು ರೀತಿಯ ವಿಮರ್ಶೆಯಿಂದ ಬೇರೆಯಾದ ಇನ್ನೊಂದು ಕಿರಿಯ ರೂಪ ನಮಗೆ ದೊರೆಯುತ್ತದೆ. ಇದರ ವಿಷಯ ಒಂದು ರೀತಿಯ ಪ್ರಶಂಸೆ ಅಥವಾ ಪೂಜನ. ಆಕಾರದಲ್ಲಿ ಇದು ಒಂದು ವಿಸ್ತಾರವಾದ ಟಿಪ್ಪಣಿ.

–ಮಾಸ್ತಿ ವೆಂಕಟೇಶಯ್ಯಂಗಾರ್

(ಪ್ರಸ್ತಾವನೆಯಿಂದ)

---

# ಬಾಡದ ಹೂವುಗಳು

(ಮರೆಯಬಾರದ ಕೆಲವು ಪುಸ್ತಕಗಳು)

ಎಮ್. ರಾಮಚಂದ್ರ, ಎಂ. ಎ.



ಮೈಸೂರು

1977

BADADA HUVUGALU-Appreciation of twentyfiveKannada books by M. Ramachandra, first published in 1977 by Aparna Prakashana, L-15, Manasagangotri, Mysore 570006, Demy Octavo pp. xvi + 128, Price : Rs. 10-00, Calico 18-00.



ಮಾರಾಟದ ಹಕ್ಕುಗಳು : ಶ್ರೀನಿಧಿ ಎಂಟರ್‌ಪ್ರೈಸಸ್
692, ಚಾಮರಾಜಮೊಹಲ್ಲಾ, ಮೈಸೂರು–570 004

ಮೊದಲನೆಯ ಮುದ್ರಣ 1977

ಬೆಲೆ : ಸಾಧಾರಣ ರೂ. 10-00 ಕ್ಯಾಲಿಕೊ ರೂ. 18-00

ಪ್ರಕಾಶಕರು : ಅನೂರಾಧಾ, ಅಪರ್ಣಾ ಪ್ರಕಾಶನ, ಎಲ್–15, ಮಾನಸಗಂಗೋತ್ರಿ
ಮೈಸೂರು 570 006

ಮುದ್ರಕರು : ಹರ್ಷ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು 570 008

## ಅರ್ಪಣೆ

ನನ್ನ ಗುರು ಸೇಡಿಯಾಪು ಕೃಷ್ಣಭಟ್ಟರಿಗೆ

# ಅರಿಕೆ

'ಬಾಡದ ಹೂವುಗಳು' ಕನ್ನಡದ ವಿಮರ್ಶನ ಸಾಹಿತ್ಯದಲ್ಲಿ ಹೊಸ ಬಗೆಯೊಂದನ್ನು ಪರಿಚಯ ಮಾಡಿ ಕೊಡುತ್ತದೆ. ದೀರ್ಘವಾದ ಸಮಗ್ರ ವಿಮರ್ಶೆಯಲ್ಲದ, ಸಂಕ್ಷಿಪ್ತ ಪರಿಚಯ ಮಾತ್ರವಲ್ಲದ, ಸ್ಥೂಲವಾಗಿ ಒಂದು ಕೃತಿಯ ಗುಣದೋಷಗಳ ಪಟ್ಟಿ ಮಾಡಿ ಕೊಡದ ಬೇರೊಂದು ಬಗೆ ಈ ಲೇಖನಗಳಲ್ಲಿ ವ್ಯಕ್ತವಾಗಿದೆ. ಕನ್ನಡಿಗರು ಎಂದಿಗೂ ಮರೆಯಲಾಗದ ಇಪ್ಪತ್ತೈದು ಕೃತಿಗಳನ್ನು ಶ್ರೀ ರಾಮಚಂದ್ರ ಇಲ್ಲಿ ಸಹೃದಯಾವಲೋಕನ ಮಾಡಿಕೊಟ್ಟಿದ್ದಾರೆ.

ಶ್ರೀ ರಾಮಚಂದ್ರ ಅವರಿಗೂ, ಸುಂದರವಾಗಿ ಅಚ್ಚುಮಾಡಿರುವ ಹರ್ಷ ಪ್ರಿಂಟಿಂಗ್ಸ್ ಅವರಿಗೂ, ಕಲಾವಿದ ಮಿತ್ರ ಶ್ರೀ ಕೆ. ಎಲ್. ವೆಂಕಟೇಶ್ ಅವರಿಗೂ ಕೃತಜ್ಞತೆಗಳು.

—ಪ್ರಕಾಶಕರು

# ಪ್ರಸ್ತಾವನೆ

ಪ್ರಿಯಮಿತ್ರರು ಶ್ರೀ ರಾಮಚಂದ್ರರು ಕವಿ–ಕಾವ್ಯ ಪರಿಚಯದ ತಮ್ಮ ಲೇಖನಗಳ ಈ ಸಂಗ್ರಹಕ್ಕೆ ನನ್ನಿಂದ ಹರಕೆಯ ನಾಲ್ಕು ಮಾತು ಇರಬೇಕು ಎಂದು ಅಪೇಕ್ಷಿಸಿದ್ದಾರೆ. ಐವತ್ತು ವರ್ಷದ ಹಿಂದೆ ನಮ್ಮ ಹೊಸ ಸಾಹಿತ್ಯ ಸ್ಪಷ್ಟವಾದ ರೂಪುಗೊಂಡು ಬಹು ತೆರನಾಗಿ ಬೆಳೆದಾಗ ಗೆಳೆಯರು ಇಂಥ ಅಪೇಕ್ಷೆಯನ್ನು ತಿಳಿಸಿ ನಾನು ಮುನ್ನುಡಿಗಳನ್ನು ಬರೆದದ್ದುಂಟು. ಇಂಥ ಮುನ್ನುಡಿಗಳಲ್ಲಿ ಬಹು ಸಣ್ಣ ಎಂದು ಕಂಡ ಕೆಲವನ್ನು ಬಿಟ್ಟು ಉಳಿದವನ್ನು ಸೇರಿಸಿ, ನಾನು 1951ರಲ್ಲಿ 'ಪೂಜನ' ಎಂಬ ಹೆಸರಿನ ಒಂದು ಲೇಖನ ಸಂಕಲನವನ್ನು ಪ್ರಕಟಿಸಿದೆನು. ಸಾಹಿತ್ಯದ ಮುಂಬರಿವಿನಲ್ಲಿ ಅಂದಿನ ಹೊಸ ರೂಪಗಳು ಹೊಸವಾಗಿ ಉಳಿಯದೆ ಪರಿಚಿತ ರೂಪಗಳಾದ ಮೇಲೆ ನಾನು ಅಂದಿನ ರೀತಿಯ ಮುನ್ನುಡಿಗಳನ್ನು ಬರೆಯುವುದನ್ನು ನಿಲ್ಲಿಸಿದೆನು. ಇದಕ್ಕೆ ಕಾರಣ ಕೃತಿಯ ರೂಪ ಹೊಸದೇನೂ ಅಲ್ಲ ಆಗಿ ಅದರ ಸ್ವರೂಪವನ್ನು ವಿವರಿಸಿ ತಿಳಿಸುವ ಆವಶ್ಯಕತೆ ಇರಲಿಲ್ಲ ಎನ್ನುವುದು. ಈಚೆಗೆ ತರುಣ ಲೇಖಕ–ಲೇಖಕಿಯರು ಮುನ್ನುಡಿಗಳನ್ನು ಕೇಳಿದಾಗ ನಾನು ಅಂದಿನ ರೀತಿಯ ಬರಹದಲ್ಲಿ ತೊಡಗದೆ 'ಸೇಸೆನುಡಿ' ಎಂದು ಕೆಲವು ವಾಕ್ಯಗಳನ್ನಷ್ಟೇ ಬರೆದುಕೊಟ್ಟಿದ್ದೇನೆ. ಈ ಪುಸ್ತಕಕ್ಕೆ ಶ್ರೀ ರಾಮಚಂದ್ರರು ಮುನ್ನುಡಿಯನ್ನು ಕೇಳಿಲ್ಲ. ಹರಕೆಯ ನಾಲ್ಕು ಮಾತು ಬೇಕು ಎಂದಿದ್ದಾರೆ. ಆ ನಾಲ್ಕು ಮಾತನ್ನು ತುಂಬ ಸಂತೋಷದಿಂದ ಈಗ ಬರೆಯುತ್ತಿದ್ದೇನೆ.

ಶ್ರೀ ರಾಮಚಂದ್ರರ ಈ ಲೇಖನಗಳು ನಮ್ಮ ಜನರಿಗೆ ಇಪ್ಪತ್ತೈದು ಮಂದಿ ಉನ್ನತ ಮಟ್ಟದ ಲೇಖಕರ ಒಂದೊಂದು ಕಥೆಯ ಪರಿಚಯವನ್ನು ಮಾಡಿಕೊಡುತ್ತವೆ. ಇಂಥ ಲೇಖನ ಸಾಹಿತ್ಯವಿಮರ್ಶೆಯಲ್ಲಿ ಒಂದು ಪ್ರಕಾರ. ಕ್ರಮವಾದ ವಿಮರ್ಶೆಯಲ್ಲಿ ತಕ್ಕಷ್ಟು ವಿಶಾಲವಾದ ವಿಷಯ ಪರಿಶೀಲನ ಇರುತ್ತದೆ. ಅವಲೋಕನ ಇಷ್ಟು ಪರಿಶೀಲನಕ್ಕೆ ಅವಕಾಶ ಇಲ್ಲದ ಕಾರಣ, ಸ್ಥೂಲವಾಗಿ ಕೃತಿಯ ವಿಷಯವನ್ನು ತಿಳಿಸಿ ಅದರ ಗುಣ ಏನು, ಕುಂದೇನು ಎಂದು ಸ್ವಲ್ಪದರಲ್ಲಿ ತಿಳಿಸುವ ಉದ್ಯಮ ; ಪುಸ್ತಕ ಪರಿಚಯ. ಪುಸ್ತಕದ ವಿಷಯದ ಸಂಗ್ರಹವನ್ನು ಕೊಟ್ಟು ಅದರ ವಿಷಯವನ್ನು ತಿಳಿಸುವ ಪ್ರಯತ್ನ ; ಈ ಪುಸ್ತಕದಲ್ಲಿ ಈ ಮೂರು ರೀತಿಯ ವಿಮರ್ಶೆಯಿಂದ ಬೇರೆಯಾದ ಇನ್ನೊಂದು ಕಿರಿಯ ರೂಪ ನಮಗೆ ದೊರೆಯುತ್ತದೆ. ಇದರ ವಿಷಯ ಒಂದು ರೀತಿಯ ಪ್ರಶಂಸೆ ಅಥವಾ ಪೂಜನ. ಆಕಾರದಲ್ಲಿ ಇದು ಒಂದು ವಿಸ್ತಾರವಾದ ಟಿಪ್ಪಣಿ.

ಸಾಹಿತ್ಯ ಬೆಳೆದಂತೆ ಅದರ ಜೊತೆಗೆ ವಿಮರ್ಶೆಯೂ ಬೆಳೆಯಬೇಕು. ನಮ್ಮ ಹೊಸ ಸಾಹಿತ್ಯದಲ್ಲಿ ಒಂದು ದೊಡ್ಡ ಕೊರತೆ ಸಾಹಿತ್ಯದ ಜೊತೆಗೆ ವಿಮರ್ಶೆ ಬೆಳೆಯದೆ ನಿಂತಿರುವುದು. ದಕ್ಷವಾದ ವಿಮರ್ಶೆ ಇಲ್ಲದಿರುವುದು ಸಾಹಿತ್ಯಲೋಕದಲ್ಲಿ ಒಂದು ದುರ್ಭಾಗ್ಯ., ಬಲ್ಲ ಲೇಖಕನಿಗೆ ಬಲ್ಲ ವಾಚಕ 'ನಿನ್ನ ಕೃತಿಯನ್ನು ಕುರಿತು ನನಗೆ ಹೀಗೆ ತೋರುತ್ತಿದೆ

ಎಂದು ಹೇಳಬೇಕು. ಬಲ್ಲ ಲೇಖಕ ಇವನ ಮಾತನ್ನು ಕೇಳಿ, ಗುಣ ಇದೆ ಎಂದದ್ದಕ್ಕೆ ಸಂತೋಷಪಟ್ಟು, ಕುಂದು ಇದೆ ಎಂಬ ಮಾತನ್ನು ತಾಳ್ಮೆಯಿಂದ ಗಮನಿಸಿ, ವಾಚಕನನ್ನು ತನ್ನ ಬೆಳವಣಿಗೆಗೆ ಸಹಾಯ ಮಾಡುತ್ತಿರುವ ಮಿತ್ರ ಎಂದು ಕಾಣಬೇಕು. ಈ ಸ್ಥಿತಿ ನಮ್ಮಲ್ಲಿ ಮುಂದೆ ಬರಬೇಕಾಗಿದೆ. ಸದ್ಯದಲ್ಲಿ ನಮ್ಮ ಸಾಹಿತ್ಯದ ಒಳ್ಳೆಯ ಕೃತಿಗಳನ್ನು ಯಾವ ದೃಷ್ಟಿಯಿಂದ ನೋಡಬೇಕು ಎನ್ನುವುದನ್ನು ಸಾಹಿತ್ಯಲೋಕವನ್ನು ಪ್ರವೇಶಿಸುತ್ತಿರುವ ಸಾಹಿತ್ಯ ಪ್ರೇಮಿಗಳಿಗೆ ತೋರಿಸಿಕೊಡುವ ಕೆಲಸ ಅಷ್ಟೇ ಮುಖ್ಯವಾದದ್ದು. ಇದು ಶ್ರೀ ರಾಮಚಂದ್ರರವರು ಬರೆದಿರುವ ವಿಸ್ತಾರವಾದ ಟಿಪ್ಪಣಿಗಳಿಂದ ಆಗುವ ಕೆಲಸ. ಈ ಕಾರಣಗಳಿಂದ ನಾನು ಮಿತ್ರರು ಈ ಲೇಖನಗಳನ್ನು ಶೇಖರಿಸಿ ಪ್ರಕಟಿಸುತ್ತಿರುವುದು ಒಳ್ಳಿತಾಯಿತು ಎಂದು ಭಾವಿಸುತ್ತೇನೆ.

ಪುಸ್ತಕದ ಇಪ್ಪತ್ತೈದು ಲೇಖನಗಳ ವಸ್ತು ಆದ ಕೃತಿಗಳು ಈ ಶತಮಾನದ ಆರಂಭದಲ್ಲಿ ಪ್ರಕಟವಾದ ಕೃತಿಗಳಿಂದ ಹೊರಟು ಈಚೆಗೆ ಪ್ರಕಟವಾದ ಹಲವು ಕೃತಿಗಳ ವರೆಗೆ ಬಹು ತೆರನ ಸಾಹಿತ್ಯ ಆಗಿವೆ. ಶ್ರೀ ಎಂ. ಎಸ್. ಪುಟ್ಟಣ್ಣನವರು, ಶ್ರೀ ಚ. ವಾಸುದೇವಯ್ಯನವರು ನನಗೆ ಬಾಲ್ಯದಲ್ಲಿ ಪರಿಚಯಕ್ಕೆ ಬಂದ ಹಿರಿಯರು. ಪುಟ್ಟಣ್ಣನವರ 'ನೀತಿ ಚಿಂತಾಮಣಿ'ಯ ಮೊದಲ ಭಾಗ ನನಗೆ ಒಂದು ತರಗತಿಯಲ್ಲಿ ಪಾಠಪುಸ್ತಕವಾಗಿತ್ತು. ಎರಡನೆಯ ಭಾಗವೂ ಪಾಠ ಪುಸ್ತಕ ಆಗಿತ್ತೋ ಏನೋ ನೆನಪಿಲ್ಲ. ಮೂರನೆಯ ಭಾಗ ಪಾಠಪುಸ್ತಕ ಆಗಿರಲಿಲ್ಲ, ದೊರೆಯುತ್ತಲೂ ಇರಲಿಲ್ಲ. ಅದೃಷ್ಟದಿಂದ ಆಮೇಲೆ ಈ ಪುಸ್ತಕ ನನ್ನ ಕೈಗೆ ದೊರೆತಾಗ ನಾನು ಅದನ್ನು ಎಷ್ಟು ಆತುರದಿಂದ ಓದಿದೆ ಎನ್ನುವುದು ನನಗೆ ಇನ್ನೂ ನೆನಪಿದೆ. ಶ್ರೀ ವಾಸುದೇವಯ್ಯನವರ 'ಆರ್ಯಕೀರ್ತಿ' ಇದೇ ದಿನಗಳಲ್ಲಿ ನನ್ನ ಮನಸ್ಸನ್ನು ತಿದ್ದಿದ ಪುಸ್ತಕ. ರಾಜಪುತ್ರರ ಇತಿಹಾಸ, ಶಿವಾಜಿಯ ಇತಿಹಾಸ ನನ್ನ ತಲೆಮಾರಿನ ಜನಕ್ಕೆ ದೇಶಪ್ರೇಮವನ್ನು ಕಲಿಸಿದುವು. ಎರಡು ಪುಸ್ತಕವೂ ನಮ್ಮ ತಲೆಮಾರಿಗೆ ಬರಹದ ಶೈಲಿಗೆ ಮೇಲುಪಂಕ್ತಿ ಆದವು.

ಆ ಮೇಲಿನ ದಿನಗಳ ಹಿರಿಯ ಲೇಖಕರಾದ ಶ್ರೀ ಆಲೂರ ವೆಂಕಟ್ರಾಯರು, ಶ್ರೀ ಪಂಜೆ ಮಂಗೇಶರಾಯರು, ಶ್ರೀ ಗುಂಡಪ್ಪನವರು, ಶ್ರೀ ರಮಾನಂದರು, ಶ್ರೀಯುತರಾದ ವಿ. ಸೀತಾರಾಮಯ್ಯ, ದೇವುಡು, ಶ್ರೀನಿವಾಸಮೂರ್ತಿಗಳು ಶ್ರೀಮತಿ ತಿರುಮಲೆ ರಾಜಮ್ಮ (ಭಾರತಿ), ಶ್ರೀ ರಾಜರತ್ನಂ ಇವರ ಕೃತಿಗಳನ್ನು ಅವು ಪ್ರಕಟವಾದ ತರುಣದಲ್ಲಿ ನೋಡಿ ನಾನು ಹಿಗ್ಗಿದೆನು. ನಮ್ಮ ಸಾಹಿತ್ಯವೃಕ್ಷ ಜೀವಂತವಾಗಿದೆ, ಅದು ಕೊಂಬೆ ತಳೆಯುತ್ತದೆ ಬೆಳೆಯುತ್ತದೆ ಎಂಬ ವಿಶ್ವಾಸವನ್ನು ಅನುಭವಿಸಿ ಸುಖಿಸಿದೆನು. ಮುಂದಿನ ತಲೆಮಾರಿನ ಲೇಖಕರು ಶ್ರೀಯುತರು ಸಿದ್ದವನಹಳ್ಳಿ ಕೃಷ್ಣಶರ್ಮ, ಪಾಂಡೇಶ್ವರ ಗಣಪತಿರಾವ್, ತೀ. ನಂ. ಶ್ರೀಕಂಠಯ್ಯ, ಮೂರ್ತಿರಾವ್, ಕೆ. ವಿ. ಅಯ್ಯರ್ ಇವರ ಕೃತಿಗಳನ್ನು ನೋಡಿ ತುಂಬ ತೃಪ್ತಿಯನ್ನು ಪಡೆದೆನು. ಶ್ರೀ ರಾಮಚಂದ್ರರ ಲೇಖನ ಸಂಗ್ರಹದಲ್ಲಿ ಈ ಲೇಖಕ ಮಹನೀಯರನ್ನೂ ಇವರಿಗೆ ಸಮಾನರಾದ ಇತರ ಹಿರಿಯ ಲೇಖಕರನ್ನೂ ಕುರಿತ ಪೂಜನದ ಮಾತುಗಳನ್ನು ಓದಿ ನಾನು ಹಿಂದೆ ಪಟ್ಟ ಸಂತೋಷವನ್ನು

ಮತ್ತೆ ಪಟ್ಟಿದ್ದೇನೆ. ರಾಮಚಂದ್ರರು ಲೇಖಕರನ್ನು ಮೆಚ್ಚಿಕೊಂಡಿರುವ ರೀತಿಯನ್ನು ತುಂಬ ಮೆಚ್ಚಿಕೊಂಡು ಆನಂದಿಸಿದ್ದೇನೆ.

ಕನ್ನಡದ ಗದ್ಯಶೈಲಿ ಶತಮಾನದ ಆರಂಭದಿಂದ ಇಂದಿನವರೆಗೆ ಬಹುರೂಪವಾಗಿ ಬೆಳೆದು ತಿದ್ದಿಕೊಂಡು ಇದೀಗ ಒಂದು ಪರಿಣತ ಸ್ಥಿತಿಯನ್ನು ಮುಟ್ಟಿದೆ. ಶ್ರೀ ರಾಮಚಂದ್ರರ ಶೈಲಿ ಇದಕ್ಕೆ ಒಂದು ಸಾಕ್ಷಿ. ವಯಸ್ಸಿನಿಂದ ಹಿರಿಯ, ಬಹುಕಾಲ ಬರೆದಿರುವ ಲೇಖಕ ಎಂದು ಶ್ರೀಯುತರು ನನ್ನಿಂದ ಹರಕೆಯನ್ನು ಬಯಸಿದ್ದಾರೆ. ಹರಸುತ್ತೇನೆ ಎನ್ನುವುದು ತಪ್ಪಾದೀತೇನೋ ಶುಭವನ್ನು ಬಯಸುತ್ತೇನೆ ಎಂದರೆ ಮಾತು ತಪ್ಪಾಗುವುದಿಲ್ಲ. ಶ್ರೀ ರಾಮಚಂದ್ರರ ಈ ಪುಸ್ತಕ ಅವರು ಪೂಜಿಸಿರುವ ಲೇಖಕರ ಪರಿಚಯವನ್ನು ಮಾಡಿ ಕೊಡುವುದರೊಂದಿಗೆ ನಮ್ಮ ಎಳೆಯ ಪೀಳಿಗೆಗೆ ಒಳ್ಳೆಯ ಪುಸ್ತಕವನ್ನು ಗುರುತಿಸುವ, ಮೆಚ್ಚಿಕೊಳ್ಳುವ, ತಿಳುವಳಿಕೆಯನ್ನು ನೀಡಲಿ ಎಂದು ನಾನು ಹಾರೈಸುತ್ತೇನೆ. ಶ್ರೀ ರಾಮಚಂದ್ರರು ಇಂಥ ಕೃತಿ, ಇತರ ರೀತಿಯ ಇತರ ಕೃತಿ ಹಲವನ್ನು ರಚಿಸಿ ಸಾಹಿತ್ಯ ಸೇವೆಯಲ್ಲಿ ಮೇಲೆ ಮೇಲೆ ಏರಿ, ಹೆಚ್ಚು ಹೆಚ್ಚು ಜಯವನ್ನು ಪಡೆಯುವಂತೆ ದೈವ ಅನುಗ್ರಹಿಸಲಿ ಎಂದು ಬೇಡುತ್ತೇನೆ.

ಬೆಂಗಳೂರು
ಪಿಂಗಳ ಅಧಿಕ ಆಷಾಢ
ಶುದ್ಧ ಪಂಚಮಿ
20–6–77

ಮಾಸ್ತಿ ವೆಂಕಟೇಶ ಅಯ್ಯಂಗಾರ್

# ವಿಜ್ಞಾಪನೆ

'ಉದಯವಾಣಿ' ದೈನಿಕದಲ್ಲಿ 1973ರ ಜನವರಿಯಿಂದ 1977ರ ಜನವರಿಯ ವರೆಗಿನ ಅವಧಿಯಲ್ಲಿ 'ಮರೆಯಬಾರದ ಪುಸ್ತಕ'ವೆಂಬ ಸ್ಥಿರ ಶೀರ್ಷಿಕೆಯಲ್ಲಿ ನಾನು ಬರೆದ ಇಪ್ಪತ್ತೈದು ಪರಿಚಯ ಪ್ರಬಂಧಗಳು ಈಗ ಒಂದು ಮೊತ್ತವಾಗಿ ಓದುಗರ ಕೈಸೇರುತ್ತಿವೆ. ಈ ಲೇಖನಮಾಲೆ ಪೂರ್ವನಿಯೋಜಿತವಾದದ್ದಲ್ಲ, ಪ್ರಾತಿನಿಧಿಕವೂ ಅಲ್ಲ; ಪಕ್ಷಪಾತ ದೃಷ್ಟಿಯೂ ಇಲ್ಲಿಲ್ಲ. ಪಂಜೆಯವರ ಜನ್ಮ ಶತಮಾನೋತ್ಸವ ನಿಮಿತ್ತವಾಗಿ ಏನಾದರೂ ಬರೆಯಬೇಕೆಂಬ ಹಂಬಲದಿಂದ 'ಕೋಟಿ-ಚೆನ್ನಯ'ದ ಪರಿಚಯ ಮಾಡಿದೆ. ಆ ಲೇಖನ ಮುಂದಿನವಕ್ಕೆ ಪ್ರೇರಕವಾಯಿತು. ನಾನು ಓದಿ ಮೆಚ್ಚಿದ, ಪ್ರಚಾರ ಸಾಲದೆಂದು ನನಗೆ ತೋರಿದ ಕೆಲವು ಪುಸ್ತಕಗಳನ್ನು ಮತ್ತೆ ಓದುಗರ ಕಣ್ಣೆದುರು ಹಿಡಿಯುವುದಷ್ಟೇ ನನ್ನ ಉದ್ದೇಶ. ಸಂತೋಷದ ಸಂಗತಿಯೆಂದರೆ ಲೇಖನಗಳು ಪ್ರಕಟವಾಗುತ್ತಿರುವಂತೆ ಅಲಭ್ಯವಾಗಿದ್ದ ಕೆಲವು ಪುಸ್ತಕಗಳು ಪುನರ್ಮುದ್ರಿತವಾದುವು, ಕೆಲವು ಪಠ್ಯವಾದುವು, ಮತ್ತೆ ಕೆಲವು ಚಲಚ್ಚಿತ್ರವಾಗಿ ರಂಜಿಸಿದುವು.

ಈ ಲೇಖನಗಳನ್ನು 'ಉದಯವಾಣಿ'ಯಲ್ಲಿ ಪ್ರಕಟಿಸಿದ ಶ್ರೀಯುತ ಬನ್ನಂಜೆ ರಾಮಾಚಾರ್ಯ, ಗೋವಿಂದಾಚಾರ್ಯಸೋದರರ ಉಪಕಾರವನ್ನು ಸ್ಮರಿಸುತ್ತಿದ್ದೇನೆ. ಅವು ಪ್ರಕಟವಾದಂತೆ ಮೆಚ್ಚಿ ಕೆಲವರು, ಪುಸ್ತಕ ಎಲ್ಲಿದೆ ಎಂದು ಕೇಳಿ ಕೆಲವರು ಪತ್ರ ಬರೆದದ್ದುಂಟು. ಆ ಮಟ್ಟಿಗೆ ಪ್ರಯತ್ನ ಸಫಲವಾಯಿತೆಂದು ನಂಬಿದ್ದೇನೆ. ಬರೆಹಗಳನ್ನು ಒಟ್ಟು ಸೇರಿಸಿ ಕಟ್ಟಿದರೆ ಆದೀತು ಎಂಬ ನನ್ನ ಆಸೆಗೆ ಆಸರೆಯಾಗಿ ನಿಂತವರು ಡಾ. ಪ್ರಭುಶಂಕರ ಅವರು. ಅವರಿಗೆ ನಾನು ಋಣಿಯಾಗಿದ್ದೇನೆ. ಪುಸ್ತಕ ಪ್ರಕಾಶನದಲ್ಲಿ ಸಹಕರಿಸಿದ ಶ್ರೀ ಆರ್. ಎಲ್. ಅನಂತರಾಮಯ್ಯನವರು ನನ್ನ ಬಹುಕಾಲದ ಮಿತ್ರರು, ಸಹೋದ್ಯೋಗಿಯಾಗಿಯೂ ಇದ್ದವರು. ಅವರ ಆತ್ಮೀಯತೆ–ಉದಾರತೆಗಳಿಗೆ ಕೃತಜ್ಞನಾಗಿದ್ದೇನೆ.

ನನ್ನ ಜೀವನ–ಸಾಹಿತ್ಯ ಎರಡಲ್ಲರೂ ಆಸಕ್ತರಾಗಿ ನನಗೆ ಆಲಂಬನವಾಗಿ ಇರುವವರು ಗುರು ಸೇಡಿಯಾಪು ಕೃಷ್ಣಭಟ್ಟರು. ನಾನು ಬರೆದುದನ್ನೆಲ್ಲ ಓದಿಸಿ, ಕೇಳಿ, ಉಚಿತ ಸಲಹೆಗಳನ್ನು ನೀಡುತ್ತಿರುವವರು ಅವರು. "ನೀವು 'ಮುನ್ನುಡಿಯ ಕುಂಕುಮವನ್ನಿಟ್ಟರೆ ಕಾವ್ಯ ಕನ್ಯೆ ದೀರ್ಘಸುಮಂಗಲಿಯಾಗುತ್ತಾಳೆ,'" ಎಂದು ಸಿದ್ದವನಹಳ್ಳಿ ಕೃಷ್ಣಶರ್ಮರನ್ನು ಉದ್ಧರಿಸಿ, ಆಧರಿಸಿ ಕೋರಿದಾಗ, "ಮುನ್ನುಡಿಯನ್ನಲ್ಲ, 'ಪ್ರಸ್ತಾವನೆ' ಎಂಬುದಾಗಿ ಬರೆದು ಕೊಡುತ್ತೇನೆ" ಎಂದರೂ ಮುನ್ನುಡಿಗಿಂತ ಮಿಗಿಲಾದ ಹೊನ್ನುಡಿಯನ್ನು ಬರೆದವರು ಪೂಜ್ಯ ಮಾಸ್ತಿ ವೆಂಕಟೇಶ ಅಯ್ಯಂಗಾರರು. ಈ ಇಬ್ಬರು ಗುರು, ಗುರುಸ್ವರೂಪಿಗಳಿಗೆ ನನ್ನ ಅನಂತ ಪ್ರಣಾಮ.

ಈ ಪುಸ್ತಕದ ಗಾತ್ರಕ್ಕೆ ಕೊನೆಯಲ್ಲಿರುವ ತಿದ್ದುಪಡಿ ದೊಡ್ಡದಾಯಿತೆಂಬುದನ್ನು ಬಲ್ಲೆ. 'ಪುಸ್ತಕ ಸೌಂದರ್ಯವಿರುವುದು ಅಸ್ಖಲಿತವಾದ ಮುದ್ರಣದಲ್ಲಿ' ಎಂಬುದನ್ನು ನಾನೂ ಒಪ್ಪುವವನೇ. ಆದರೂ ಲೇಖಕ ಕಾರ್ಕಳದಲ್ಲಾದರೆ ಪ್ರಕಾಶಕರು ಮೈಸೂರಿನ ಒಂದು ಕೊನೆಯಲ್ಲಿ, ಮುದ್ರಕರು ಮತ್ತೊಂದರಲ್ಲಿ ಹೀಗಾಗಿ ತಪ್ಪುಗಳೆಷ್ಟೋ ನುಸುಳಿಕೊಂಡುವು, ಉಳಿದುಕೊಂಡುವು. ಅದಕ್ಕಾಗಿ ವಿಷಾದಿಸುತ್ತೇನೆ.

ಇಷ್ಟನ್ನು ಬಿನ್ನವಿಸಿ ಕೃತಿಯನ್ನು ಸಹೃದಯರಿಗೊಪ್ಪಿಸುತ್ತಿದ್ದೇನೆ. "ಭಾಗ್ಯಾಯತ್ತಮತಃ ಪರಂ ನ ಖಲು ತದ್ವಾಚ್ಯಂ" ಎಂದು ಕಾಳಿದಾಸನೊಂದಿಗೆ ದನಿಗೂಡಿಸುತ್ತಿದ್ದೇನೆ.

ಆಗೋಸ್ತು ೮, ೧೯೭೭ — ಎಮ್. ರಾಮಚಂದ್ರ

ಕಾರ್ಕಳ-ದ.ಕ.

# ಪರಿವಿಡಿ

# ೧. ಸಿದ್ದವನಹಳ್ಳಿ ಕೃಷ್ಣಶರ್ಮರ ' ಪರ್ಣಕುಟಿ '

ಕನ್ನಡದಲ್ಲಿ ಗಾಂಧೀ ಸಾಹಿತ್ಯವು ವಿಪುಲವಾಗಿಯೇ ಇದೆ. ಗಾಂಧಿ ಜಯಂತಿ, ಗಾಂಧೀ ತಿಥಿ, ಸ್ವಾತಂತ್ರ್ಯ ದಿನ ಹೀಗೆ ವಿವಿಧ ಸಂದರ್ಭಗಳಲ್ಲಿ ಸಮಯ ಸ್ಫೂರ್ತಿಯಿಂದ, ಸಾರ್ವಜನಿಕ ವೇದಿಕೆಗಳಿಂದಲೋ, ಆಕಾಶವಾಣಿ ಕೇಂದ್ರಗಳಿಂದಲೋ, ಗಾಂಧೀಜಿಯನ್ನು ಹಾಡಿ ಕೊಂಡಾಡುವವರಿದ್ದಾರೆ. ಅಂತಹವರ ಭಾಷಣ ಬರವಣಿಗೆಗಳಲ್ಲಿ ಅವರವರ ರುಚಿ, ಗ್ರಹಿಕೆ, ಪ್ರಾಮಾಣಿಕತೆಗಳಿಗೆ ಅನುಗುಣವಾಗಿ ತಾರತಮ್ಯವಿರುವುದು ಸಹಜ. ಗುಳ್ಳೆಯಂತೆ ಎದ್ದದ್ದು ಅದಾಗಿಯೇ ಒಡೆಯುತ್ತದೆ. ಮುತ್ತಿನಂತೆ ಹುಟ್ಟಿದ್ದು ನೂರು ಕಾಲ ಉಳಿಯುತ್ತದೆ, ಬೆಳಗುತ್ತದೆ, ಬೆಲೆಬಾಳುತ್ತದೆ. ಈವರೆಗೆ ಕನ್ನಡದಲ್ಲಿ ಬಂದ ಗಾಂಧೀ ಸಾಹಿತ್ಯದಲ್ಲಿ ಎವಡನೆಯ ಗುಂಪಿಗೆ ಸೇರಿದ ಅದ್ವಿತೀಯ ಗ್ರಂಥತ್ರಯಗಳೆಂದರೆ ಸಿದ್ದವನಹಳ್ಳಿ ಕೃಷ್ಣಶರ್ಮರ ವರ್ಧಾಯಾತ್ರೆ, ದೀಪಮಾಲೆ ಮತ್ತು ಪರ್ಣಕುಟಿ. ನಡುವಿನದ್ದು ಗಾಂಧೀಜಿಗೆ ಪರೋಕ್ಷವಾಗಿ ಸಂಬಂಧಿಸಿದ್ದಾದರೆ ಉಳಿದೆರಡು ಗಾಂಧೀ ವ್ಯಕ್ತಿತ್ವವನ್ನು ನೇರವಾಗಿ ಪ್ರತಿಬಿಂಬಿಸುವ ರನ್ನಗನ್ನಡಿಗಳು. ಈ ಎರಡರಲ್ಲಿ ' ಪರ್ಣಕುಟಿ 'ಯ ಮೊದಲ ಮುದ್ರಣ 1941ರಲ್ಲಿ. ಅದರದ್ದು ಅಸಾಧಾರಣ ಸೌಂದರ್ಯ, ಅನನ್ಯವಾದ ವರ್ಚಸ್ಸು. ಕೃಷ್ಣಶರ್ಮರ ಕೃತಿಗಳಿಗೆ ಇಂತಹ ಅನನ್ಯ ಸಾಧಾರಣತೆ ಪ್ರಾಪ್ತಿಯಾಗಲು ಗ್ರಂಥ ವಿಷಯವು ಎಷ್ಟು ಕಾರಣವೋ ಅವರ ಭಾಷಾ ಸೌಂದರ್ಯವೂ ಅಷ್ಟೇ ಕಾರಣ. ಕನ್ನಡದಲ್ಲಿ ' ಗದ್ಯ ಶಿಲ್ಪಿ ' ಎಂಬ ಬಿರುದು ಅಕ್ಷರಶಃ ಯಾರಿಗಾದರೂ ಅನ್ವಯಿಸುವುದಾದರೆ ಅಂಥವರಲ್ಲಿ ಕೃಷ್ಣಶರ್ಮರು ಒಬ್ಬರು.

ಗಾಂಧೀಜಿಯ ವ್ಯಕ್ತಿತ್ವ ವರ್ಣನೆ ಸುಲಭದ ಕಾರ್ಯವಲ್ಲ. ಗಾಂಧೀಜಿ ಬಿಳಿಯ ಬೆಳಕಿನ ಹಾಗೆ; ಅಷ್ಟೇ ಸರಳ, ಅಷ್ಟೇ ಸಂಕೀರ್ಣ. ಮೇಲು ನೋಟಕ್ಕೆ ಒಂದು ಬಣ್ಣ, ಒಡೆದು ನೋಡಿದರೆ ಸಪ್ತವರ್ಣ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಅಧಿನಾಯಕ ನೆಂದು ಗಾಂಧೀಜಿ ಸರ್ವಸಾಮಾನ್ಯ, ಜಗತ್ಪ್ರಸಿದ್ಧ. ಆದರೆ ಅದೊಂದೇ ಅಲ್ಲ ಅವರ ಮುಖ. ಕಲೆ, ಸಾಹಿತ್ಯ, ನಗೆ, ಗೀತೆ—ಹೀಗೆ ಗಾಂಧೀಜಿ ಬಹುಮುಖಿ. ದೇಶದ ಸಮುನ್ನತಿಗಾಗಿ ಖಾದಿಪ್ರಚಾರ, ಹರಿಜನೋದ್ಧಾರ, ದೀನ ದಲಿತರ ಸೇವೆ, ಪಾನ ನಿಷೇಧ, ಹಿಂದೂ–ಮುಸ್ಲಿಂ ಐಕ್ಯವೇ ಮೊದಲಾಗಿ ಗಾಂಧೀಜಿ ಹಿಡಿದ ದಾರಿಗಳು ಹಲವು. ಆದರೆ ಎಲ್ಲದರಲ್ಲೂ ಸತ್ಯ, ಅಹಿಂಸೆಗಳೇ ಅವರಿಗೆ ದಾರಿದೀಪ, ಊರುಗೋಲು. ಅವರಿಗೆ ಜೀವನವು ಸತ್ಯ ಶೋಧನ. ಇಂತಹ ಮಹಾತ್ಮನ ಪ್ರಭಾವಲಯದಲ್ಲಿ ಬಹುಕಾಲ ಸುಳಿದಾಡಿ, ಬೆಳಕುಂಡು ಬೆಳೆದವರು ಕೃಷ್ಣಶರ್ಮರು. ಆದುದರಿಂದಲೇ ಗಾಂಧೀ ವ್ಯಕ್ತಿತ್ವವನ್ನು ಮನಸ್ಸಿನ ಬಿಂಬಗ್ರಾಹಕದಲ್ಲಿ ಹಿಡಿದು ಮಾತಿನ ಬಣ್ಣದಿಂದ ಕಾಲದ ಪಟದಲ್ಲಿ ಎಂದಿಗೂ ಮಾಸದಂತೆ ಚಿತ್ರಿಸಲು ಅವರಿಗೆ ಸಾಧ್ಯವಾದದ್ದು.

ಗಾಂಧೀಜಿಯ ಜೀವನ ಋಷಿಸದೃಶವಾದ ಜೀವನ. ಆತ್ಮೋದ್ಧಾರವೊಂದೇ ಅಲ್ಲ ಅವರ ಬದುಕಿನ ಗುರಿ. ' ಮಂಕುತಿಮ್ಮ 'ನು ಹಾಡಿದಂತೆ " ಜಗದ ಕಲ್ಯಾಣದೊಳಗಾತ್ಮ

ಕಲ್ಯಾಣವನು, ಜಗದ ಬೀದಿಗಳೊಳು ನಿಜಾತ್ಮ ಯಾತ್ರೆಯನು, ಜಗದ ಜೀವಿತದಿ ನಿಜ ಜೀವಿತದ ಮೂರ್ತಿಯನು" ಬಗೆದು ಅರಿತ ಸುಖೀ ಜೀವನ ಅವರದ್ದು. ಸೇವಾಗ್ರಾಮದ 'ಪರ್ಣಕುಟಿ' ಗಾಂಧೀಜಿಯ ಕರ್ಮ-ಧರ್ಮ ಕ್ಷೇತ್ರಗಳ ಕೇಂದ್ರಬಿಂದು. ಅವರ ಋಷಿ ಜೀವನಕ್ಕೆ 'ಪರ್ಣಕುಟಿ'ಯೇ ಯೋಗ್ಯ ನಿವೇಶನ. ಇದನ್ನು ಮನಗಂಡೇ ಕೃಷ್ಣಶರ್ಮರು ತಮ್ಮ ಗ್ರಂಥಕ್ಕೂ ಅದೇ ಹೆಸರನ್ನು ಕೊಟ್ಟಿದ್ದಾರೆ. ಇದು 'ಬರೀ ಹೆಸರಲ್ಲ'; ಒಂದು ಸಂಕೇತ. ಲೇಖಕನ ರುಚಿಶುದ್ಧಿ, ಉನ್ನತ ದೃಷ್ಟಿಗಳಿಗೂ ಒಂದು ನಿದರ್ಶನ.

ಇನ್ನು 'ಪರ್ಣಕುಟಿ'ಯ ಒಳಗೇನಿದೆ ಎಂಬುದನ್ನು ನೋಡೋಣ. 'ಪರ್ಣಕುಟಿ'ಯೆಂಬುವೇ ಮೊದಲ ಪರಿಚ್ಛೇದ. ತಳಹದಿ, ಧರ್ಮಸಾರಥಿ, ಗಾಂಧೀಜಿ -ಕಲೆ, ಸಾಹಿತಿ ಗಾಂಧಿ, ನಗೆಗಾರ ಗಾಂಧಿ, ಚಿಕ್ಕೆಗಳ ಚಂದ್ರನು, ಅಹಿಂಸೆಯ ಅವತಾರ, ಕಸ್ತೂರಬಾ, ವಿಶ್ವಕುಟುಂಬಿ, ಅನಾಸಕ್ತಿಯ ಕನಸು, ಕರುಣಾಳು ಬಾ ಬೆಳಕೆ -ಇವು ಮತ್ತಿನವು. ಗ್ರಂಥ ಶೀರ್ಷಿಕೆಯಲ್ಲಿ ಹೇಗೋ ಹಾಗೆಯೇ ಅಧ್ಯಾಯಗಳ ಅನುಕ್ರಮಣಿಕೆಯಲ್ಲೂ ಶರ್ಮರ ದೃಷ್ಟಿವಿಶೇಷವು ಸೂಚಿತವಾಗುತ್ತದೆ. ಪ್ರಕೃತ ಗ್ರಂಥವು ಲೇಖಕನ ಒಂದು ಪ್ರವಾಸ ಚಿತ್ರಣವಲ್ಲ. ಅನುಭವ ಕಥನವೂ ಅಲ್ಲ. ಅಥವಾ ಲೇಖಕನೇ ಹೇಳುವಂತೆ, "ಓದಿ ಮುಗಿಸಿದ ಮೇಲೆ ಇದು ಗಾಂಧೀ ವಿಚಾರ ವಿಮರ್ಶೆಯೂ ಅಲ್ಲ. ಅದರ ದೋಹನವೂ ಅಲ್ಲ ಎನಿಸಬಹುದು. ಹಾಗೆ ಎನಿಸಿದರೆ ಅದು ಸರಿ... 'ಪರ್ಣಕುಟಿ' ....ನನ್ನ ಮನಸ್ಸಿನಲ್ಲಿ ಮೂಡಿದ ಭಾವಗಳ, ಭಾವನೆಗೆ ಬಂದ ಬಣ್ಣಗಳ ಚಿತ್ರ". ಇದೊಂದು 'ಮಸುಕು ಚಿತ್ರ'ವೆಂದು ಅವರು ಹೇಳಿದ್ದು ಕೇವಲ ಸೌಜನ್ಯ. ಅದು ಮಸುಕಲ್ಲ ಸಮುಜ್ವಲವೆಂಬುದು ಓದಿದಾಗ ಕಾಣುತ್ತದೆ.

ಗ್ರಂಥದ ಆರಂಭವೇ ಅತ್ಯಂತ ಮೋಹಕವಾಗಿದೆ. "ಗಾಂಧೀಜಿ ಎಂದರೆ ಒಬ್ಬ ವ್ಯಕ್ತಿಯಲ್ಲ, ಅದು ಒಂದು ಪಂಥ; ಶಿಲ್ಪದಲ್ಲಿ ಜಕಣಾಚಾರಿ ಇದ್ದಹಾಗೆ...." ಹೀಗೆ ಶರ್ಮರು ಓದುಗನನ್ನು ತಮ್ಮೆಡೆಯೊಳಕ್ಕೆ ಬರಮಾಡಿಕೊಳ್ಳುತ್ತಾರೆ. ಆರಂಭದ ಈ ಆಕರ್ಷಣೆಯು ಪುಟ ಪುಟಕ್ಕೂ ಹೆಚ್ಚುತ್ತದೆ. ಗ್ರಂಥದ ಅಂತ್ಯದಲ್ಲಿ ನ್ಯೂಮನ್ ಕವಿಯ ಪ್ರಾರ್ಥನಾ ಗೀತವನ್ನು ಪಠಿಸುವುದರೊಂದಿಗೆ ವಾಚಕನು ರಸಪರವಶನಾಗುತ್ತಾನೆ. ಗಾಂಧೀಜಿ 'ಒಂದು ಪಂಥ' ಎಂಬ ತಮ್ಮ ಅಭಿಪ್ರಾಯವನ್ನು ಶರ್ಮರು ಹನ್ನೆರಡು ಆಶ್ವಾಸಗಳ ನೂರೆಪ್ಪತ್ತು ಪುಟಗಳಲ್ಲಿ ವಿವರಿಸಿದ್ದಾರೆ; ಸಮರ್ಥಿಸಿದ್ದಾರೆ. ಅವೆಲ್ಲವನ್ನೂ ಒಂದೊಂದಾಗಿ ಬಿಡಿಸುತ್ತಾ ಹೋದಂತೆ ಕಾಣುತ್ತದೆ, ಗಾಂಧೀಜಿಯ ಲೋಹಚುಂಬಕ ವ್ಯಕ್ತಿತ್ವ. ಪಾರದರ್ಶಕ ಹೃದಯವಂತಿಕೆ, ವಿಶ್ವವ್ಯಾಪಿ ಮನೋಭಾವ, ಆಗ ಗೊತ್ತಾಗುತ್ತದೆ, ಗಾಂಧೀಜಿ ವ್ಯಕ್ತಿಯಲ್ಲ ಪಂಥ, ಸಮ್ಮೋಹಿನೀ ಮಂತ್ರ.

ಗಾಂಧೀಜಿ ಮಾಡಿದ ಖಾದಿಪ್ರಚಾರ, ಅಸ್ಪೃಶ್ಯತಾ ನಿವಾರಣೆ, ಅಸಹಕಾರ ಆಂದೋಲನ, ಉಪವಾಸ ಸತ್ಯಾಗ್ರಹ, ಅವರ ನಿತ್ಯವಿಧಿಗಳಾದ ಪ್ರಾರ್ಥನೆ, ತಿರುಗಾಟ ಮುಂತಾದ ಸ್ಥೂಲ ಸಂಗತಿಗಳನ್ನು ಬಲ್ಲವರು ಹಲವರಿದ್ದಾರೆ. ಆದರೆ ಗಾಂಧೀ ಜೀವನದಲ್ಲಿ ಹಲವರು ನೋಡದ ಅಥವಾ ಕಾಣದ ಕೆಲವು ವಿಶಿಷ್ಟ ರಸಸ್ಥಾನಗಳನ್ನು

ಶರ್ಮರು ಗುರುತಿಸಿ ಸುಂದರವಾಗಿ ಚಿತ್ರಿಸಿದ್ದಾರೆ. ಅವುಗಳಲ್ಲಿ ಗಾಂಧೀಜಿ ಮತ್ತು ಕಲೆ, ಗಾಂಧೀಜಿಯ ಸಾಹಿತ್ಯ, ಗಾಂಧೀಜಿಯ ನಗೆಗಾರಿಕೆ ಕೆಲವು. ಗಾಂಧೀಜಿಯ 'ಮಾನಸ ಪುತ್ರ'ರೆಂದು ಪ್ರಖ್ಯಾತರಾದ ವೆರಿಯರ್ ಎಲ್ವಿನ್ ತಮ್ಮ 'ಗಿರಿಜನ ಪ್ರಪಂಚ' ಎಂಬ ಗ್ರಂಥದಲ್ಲಿ ಒಂದು ಕಡೆ ಗಾಂಧೀಜಿಯನ್ನು ಕುರಿತು "ಸೌಂದರ್ಯದ ದೃಷ್ಟಿಯಿಂದ ಅವರು ಅಶಕ್ತರಾಗಿದ್ದರು....ಕಲಾಭಿವೃದ್ಧಿಗೆ ಅವರು ಏನೇನೂ ಮಾಡಲಿಲ್ಲ" ಎಂದಿದ್ದಾರೆ. (ಅನುವಾದ–ಶ್ರೀ ನಾಗೇಗೌಡ. ಪುಟ: 179). ಇನ್ನೂ ಹಲವರು ಹಾಗೇ ಭಾವಿಸಿದ್ದಾರೆ ಅಥವಾ ಭ್ರಮಿಸಿದ್ದಾರೆ. ಕೃಷ್ಣಶರ್ಮರಾದರೋ ಗಾಂಧೀಜಿಯಲ್ಲಿ ಕಲಾ ಪ್ರಜ್ಞೆ ಯಾವ ವಿಧದಲ್ಲಿ ಯಾವ ಹದದಲ್ಲಿ ಇತ್ತು ಎಂಬುದನ್ನು ಎತ್ತಿ ತೋರಿಸಿದ್ದಾರೆ. 'ಅಂತರಂಗ ಹೇಗಾದರೂ ಇರಲಿ, ಬಹಿರಂಗ ಅಂದವಾಗಿದ್ದರೆ ಸಾಕು' ಎಂಬ ಕಲಾ ರಸಿಕರಲ್ಲ ಗಾಂಧೀಜಿ. 'ಮಾನವನ ಕಲಾಕೃತಿಗೆ ಬೆಲೆ ಸಿಕ್ಕ ಬೇಕಾದರೆ ಇವು ಆತ್ಮ ವಿಕಾಸಕ್ಕೆ ಸಹಾಯನಾಗಬೇಕು...ಸಮಷ್ಟಿ ವಿಕಾಸಕ್ಕೆ ಹಾದಿಯಿರಬೇಕು' ಗಾಂಧೀಜಿಯ ಈ ವಿಚಾರ ದೃಷ್ಟಿಗೆ ವಿಪುಲ ಉದಾಹರಣೆಗಳನ್ನು ಕೊಡುತ್ತಾ ಕೃಷ್ಣಶರ್ಮರು, ಅವರು ಮೈಸೂರಿನ ವೆಂಕಟಪ್ಪನವರ ಕಲಾಕೃತಿಗಳನ್ನು ಮೆಚ್ಚಿದುದನ್ನು ಉಲ್ಲೇಖಿಸಿ ದ್ದಾರೆ. "...ಇದೇ ರೀತಿ ಬೆಳೆದು ಬರಲಿ ನಿಮ್ಮ ಕಲೆ, ಆದರೆ ಒಂದು ಮಾತು; ರಾಟೆ ನಿಮಗೆ ಹಿಡಿಸಿದರೆ ಅದಕ್ಕೆ ಜನಜೀವನದಲ್ಲಿ ಎಂಥ ಸ್ಥಾನವಿದೆಯೆಂಬುದನ್ನು ಚಿತ್ರಿಸಿದರೆ ತುಂಬಾ ಸಂತೋಷ. ನಿಮಗೆ ರಾಟೆ ಹಿಡಿಸಿದರೆ ಆ ಮಾತು" ಎಂದು ಗಾಂಧೀಜಿ ಕೋರಿದ ರಂತೆ. "ಎಲ್ಲಿ ಹೋದರೂ ತನ್ನ ಶಂಖವನ್ನೇ ಊದುವ ದಾಸಯ್ಯನಂತೆ ಗಾಂಧೀಜಿ" ಎಂಬುದು ಕೃಷ್ಣಶರ್ಮರ ಗೌರವ ಮಿಶ್ರಿತ ಮೃದು ಹಾಸ್ಯದ ವ್ಯಾಖ್ಯಾನ!

ನಮ್ಮವರು ದೇವರನ್ನು 'ಸತ್ಯಂ ಶಿವಂ ಸುಂದರಂ' ಎಂದು ವರ್ಣಿಸಿದರು. ಇವುಗಳಲ್ಲಿ ಒಂದೊಂದಕ್ಕೂ ಹತ್ತಾರು ಕವಲುಗಳು. ಗಾಂಧೀಜಿ ಸತ್ಯಾರ್ಥಿ; ಸತ್ಯವೇ ದೇವರು ಎಂದು ನಂಬಿದವನು. ಈ ಸತ್ಯ ಶೋಧನೆಗೆ, ಪ್ರತಿಪಾದನೆಗೆ ಅವನು ಸಾಹಿತ್ಯ ದಾರಿ ಹಿಡಿದದ್ದೂ ಇದೆ. 'ಗಾಂಧೀಜಿ ಉತ್ತಮ ಸಾಹಿತಿ ಎಂದರೆ ಜಗತ್ತು ಬೆರಗಾಗುತ್ತದೆ' ಎಂದು ಶರ್ಮರು ಹೇಳುತ್ತಾರೆ. ಆದರೂ ಗಾಂಧೀಜಿಯ ಬದುಕಿನಲ್ಲಿ, ಬರವಣಿಗೆಯಲ್ಲಿ ಸಾಹಿತ್ಯ ದೃಷ್ಟಿ, ರಸಿಕತೆ ಹೇಗೆ ಗುಪ್ತಗಾಮಿನಿಯಾಗಿ ಪ್ರವಹಿಸಿದೆ ಎಂಬುದನ್ನು 'ಸಾಹಿತಿ ಗಾಂಧಿ' ಎಂಬ ಪ್ರಕರಣದಲ್ಲಿ ರಸವತ್ತಾಗಿ ನಿರೂಪಿಸಿದ್ದಾರೆ. ಗಾಂಧೀಜಿಯ ಸಾಹಿತ್ಯ ಸೃಷ್ಟಿ ಪ್ರಯತ್ನ ಸಿದ್ಧವಾದದ್ದಲ್ಲ, ಅಪ್ರಯತ್ನ ಸೃಷ್ಟಿ. ಅಕೃತಕವೂ, ಅವ್ಯಾಜ ಮನೋಹರವೂ ಆದದ್ದು. 'ನವಜೀವನ' 'ಯಂಗ್ ಇಂಡಿಯಾ' 'ಹರಿಜನ' ಮುಂತಾದ ಪತ್ರಿಕೆಗಳಲ್ಲಿ ಗಾಂಧೀಜಿ ಬರೆದ ಸಾಮಯಿಕ ಲೇಖನ ಗಳಲ್ಲಿ, ಅವರ ಆತ್ಮಕಥೆಯಲ್ಲಿ ಇದು ಸುಸ್ಪಷ್ಟವೆಂಬುದನ್ನು ಶರ್ಮರು ಸಾಧಿಸಿದ್ದಾರೆ. ಗೋಮಾತೆಯನ್ನು The cow is a poem on pity, ತಾನು ದೇವರ ಕೈಯ ಕೈದು ಎಂಬುದನ್ನು I can no longer hide the light under a bushel, ಮಿಸ್ ಮೇಯೋ ಬರೆದ ಪುಸ್ತಕವನ್ನು Drain inspectors' report ಸ್ವಚ್ಛಂದ ಪ್ರೇಮ

ವನ್ನು Free love is dog's love, ನವನಾಗರಿಕ ತರುಣಿಯನ್ನು Juliet to half a dozen Romeos, ಪುಣ್ಯಪಾಪಗಳನ್ನು Good is a snail, evil has wings ಇತ್ಯಾದಿಯಾಗಿ ಗಾಂಧೀಜಿ ವರ್ಣಿಸಿದಾಗ ಅದರಲ್ಲಿ ಸಾಹಿತ್ಯದ ಸೌಗಂಧಸೂಸುವುದಿಲ್ಲವೆ ? Snares of Satan, great, sentinel, Himalayan blunder, fallen sisters ಮುಂತಾದವು ನಮ್ಮ ನುಡಿಯ ಕೋಶಕ್ಕೆನೀಡಿದ ಕೊಡುಗೆಗಳು.—ಶರ್ಮರು ಹೀಗೆ ವಿವರಿಸುತ್ತ, ಗಾಂಧೀಜಿಯ ಸಾಹಿತ್ಯ ಲಕ್ಷಣವನ್ನು, 'ಚಿಟಿಕೆ ಹಾಕುವುದರೊಳಗಾಗಿ ಮುಗಿಸಬಹುದಾದ ಚಿಕ್ಕ ನುಡಿ, ಗುಂಡಿನೇಟಿನಂತೆ ಗುರಿತಪ್ಪದ ತಿಳಿಯಾದ ಮೊನೆಯಾದ ಮಾತು' ಎಂದು ವರ್ಣಿಸಿದ್ದಾರೆ. ಇದು ಉತ್ತಮ ಸಾಹಿತ್ಯದ ಲಕ್ಷಣವೂ ಹೌದು. ಕವಿ ರಾಜಮಾರ್ಗಕಾರ ಹೇಳಿದ್ದೂ ಇದನ್ನೇ.

ಹಾಸ್ಯ ಪ್ರವೃತ್ತಿ ಗಾಂಧೀಜಿಯ ಮತ್ತೊಂದು ಮುಖವೆಂಬುದನ್ನು 'ನಗೆಗಾರ ಗಾಂಧೀ' ಪ್ರಕರಣದಲ್ಲಿ ಕಾಣಬಹುದು.: 'ನಿಮಗೆ ನಗು ಸೇರುತ್ತದೆಯೇ ?' ಎಂದು ಗಾಂಧೀಜಿಯನ್ನು ಯಾರೋ ಕೇಳಿದಾಗ 'ನನಗೆ ನಕ್ಕು ನಗಿಸುವುದು ಸೇರದಿದ್ದರೆ ಬಹಳ ದಿನದ ಕೆಳಗೆಯೇ ನಾನು ಊರ ಮುಂದಿನ ಹೊಳೆಯೊಳಗೆ ಹಾರಿಕೊಳ್ಳುತ್ತಿದ್ದೆ' ಎಂದು ನಗುನಗುತ್ತಲೇ ಉತ್ತರಿಸಿದರಂತೆ. 'ಹೂವಿಗೆ ಕಂಪು ಇದ್ದ ಹಾಗೆ ಗಾಂಧೀಜಿಗೆ ನಗೆ' ಎಂದು ಶರ್ಮರು ಹೇಳುವಲ್ಲಿ ಗಾಂಧೀಜಿಯ ನಗುವಿನ ರೂಪ ಎಂಥದ್ದು, ಮಟ್ಟ ಎಷ್ಟು ಎತ್ತರದ್ದು ಎಂಬುದು ಸುವೇದ್ಯ. 'ನಗುವ ನಗಿಸುವ,' ಗಾಂಧೀ ಮನೋಧರ್ಮಕ್ಕೆ ಸಾಕಷ್ಟು ಉದಾಹರಣೆಗಳನ್ನು ಕೊಡುತ್ತಾ ಕೃಷ್ಣ ಶರ್ಮರು "ಗಾಂಧೀಜಿಯ ಹಾಸ್ಯ ಪ್ರವೃತ್ತಿ ಅವರ 'ವಾಙ್ಮಯ ತಪ'ದ ಜೀವಾಳವೋ ಏನೋ" ಎಂದು ಪ್ರಕರಣವನ್ನು ಸೊಗಸಾಗಿ ಕೊನೆಗೊಳಿಸಿದ್ದಾರೆ.

'ಪರ್ಣ ಕುಟಿ'ಯಲ್ಲಿ ಹೆಸರಿಸಲೇಬೇಕಾದ (ಯಾವುದನ್ನೂ ಮರೆಯುವಂತಿಲ್ಲ) ಇನ್ನೊಂದೆರಡು ಅಧ್ಯಾಯಗಳೆಂದರೆ 'ಚಿಕ್ಕೆಗಳ ಚಂದ್ರಾಮ,' 'ಅಹಿಂಸೆಯ ಅವತಾರ' ಮತ್ತು 'ಕಸ್ತೂರ ಬಾ' ಗಾಂಧೀಜಿ ತಮ್ಮ ಬಚ್ಚ ಬಾಯಿ ತೆರೆದು ಎಳೆ ಮಗುವಿನ ಗದ್ದ ಹಿಡಿದು ಮುದ್ದಾಡುವ ಚಿತ್ರವನ್ನು ಯಾರು ತಾನೇ ಕಂಡಿಲ್ಲ. ಅದಕ್ಕೆ ಯಾರು ತಾನೇ ಮನ ಸೋತಿಲ್ಲ. 'ಗಾಂಧೀಜಿಗೆ ಮಕ್ಕಳನ್ನು ಕಂಡರೆ ಬಹಳ ಪ್ರೀತಿ.' 'ಗಾಂಧೀಜಿ ಮಕ್ಕಳ ಮೋರೆಯಲ್ಲಿ ಸತ್ಯದ ಹೊಳಪನ್ನು ನೋಡಿರಬೇಕು'–ಎನ್ನುತ್ತಾರೆ ಶರ್ಮರು. ಗಾಂಧೀಜಿ ಯರವಡಾ ಸೆರೆಮನೆಯಿಂದ ಆಶ್ರಮದ ಮಕ್ಕಳನ್ನು 'ಮುದ್ದು ಹಕ್ಕಿಗಳೇ' ಎಂದು ಕರೆದು ಬರೆದ ಪತ್ರ ಒಂದು ಗದ್ಯ ಕವನದಂತೆ ಹೃದ್ಯವಾದದ್ದು. 'ಮಕ್ಕಳ ನಡುವೆ ಬಾಪೂನನ್ನು ನೋಡಿದರೆ ಚಿಕ್ಕೆಗಳ ನಡುವೆ ಚಂದ್ರಮನನ್ನು ಕಂಡಂತೆ ಅನಿಸುತ್ತದೆ'–ಎಂಬ ವಾಕ್ಯ ಒಂದು ಚಿತ್ರವನ್ನೇ ಕಣ್ಣಿಗೆ ಕಟ್ಟುತ್ತದೆ. 'ಅಹಿಂಸೆಯ ಅವತಾರ'ದಲ್ಲಿ ಯುಗ ಯುಗಗಳಿಂದ ಗಂಡಿನ ಕಾಲ್ತುಳಿತಕ್ಕೆ ಪಕ್ಕಾದ ಹೆಣ್ಣಿಗಾಗಿ ಗಾಂಧೀಜಿಯ ಕರುಳು ಮಿಡಿದ, ಅವರು ಕಣ್ಣೀರು ಸುರಿದ ಹೃದಯಸ್ಪರ್ಶಿ ನಿರೂಪಣೆ ಇದೆ. 'ಕಸ್ತೂರ ಬಾ' ಎಂಬುದು ಗಾಂಧೀಜಿಯ ಕಷ್ಟನಿಷ್ಠುರಗಳಲ್ಲಿ ಪಾಲು ಗಾರ್ತಿಯಾಗಿ,

ತನ್ನನ್ನು ಎದುರಿಸಿದ ವಿವಿಧ ಪರೀಕ್ಷೆಗಳಲ್ಲಿ ಉತ್ತೀರ್ಣೆಯಾಗಿ ಗಾಂಧೀಜಿಯಿಂದಲೇ 'ಧೀರ ಸತಿ' ಎನ್ನಿಸಿಕೊಂಡ ಆ ಮಹಾತಾಯಿಯ ಭವ್ಯ ವ್ಯಕ್ತಿತ್ವದ ಚಿತ್ರಣ. ಗಾಂಧೀಜಿಯ ಬದುಕಿಗೆ ಬುನಾದಿಯಂತಿದ್ದ ಪ್ರಾರ್ಥನೆ, ಅವರ 'ವಸುಧೈವ ಕುಟುಂಬ' ಪ್ರಜ್ಞೆ. ಗೀತೆ ಯಲ್ಲಿ ಅವರು ಕಂಡ ಅನಾಸಕ್ತಿಯ ಕನಸು, 'ನಿರ್ಬಲಕೆ ಬಲರಾಮ' ಎಂಬ ಪ್ರಪತ್ತಿ– ಇವನ್ನೆಲ್ಲ ಶರ್ಮರ ಸರಸ ಲೇಖನಿ ಚಿತ್ರಿಸುವುದನ್ನು ಕಾಣುವಾಗ "ಹಸಿರೆಲೆಯ ಮೇಲಿರುವ ಶಿಶಿರ ಬಿಂದು"ವನ್ನು ಮುಟ್ಟಿದಂತಾಗುತ್ತದೆ.

'ಪರ್ಣ ಕುಟಿ'ಯಲ್ಲಿ ವರ್ಣಿತ ವ್ಯಕ್ತಿ ಒಂದು ತೂಕವಾದರೆ ಶರ್ಮರ ಭಾಷಾ ಶೈಲಿ ಮತ್ತೊಂದು ತೂಕ. ಶರ್ಮರ ಗದ್ಯವು–ಏಕೆ, ಕನ್ನಡ ಗದ್ಯವೆಂದರೂ ಸರಿ–ತನ್ನ ಶ್ರೀಮಂತಿಕೆಯ ತುತ್ತತುದಿಗೇರಿದುದನ್ನು ಇಲ್ಲಿ ಕಾಣುತ್ತೇವೆ. ಕನ್ನಡದಲ್ಲಿ ಚಿಕ್ಕ ವಾಕ್ಯದ ಚೊಕ್ಕ ಶೈಲಿ ಶರ್ಮರದ್ದೇ ಆಗಿರುವ ವಿಶಿಷ್ಟ ಶೈಲಿ. ವಾಕ್ಯವು ಸಣ್ಣದಾದರೂ, ತ್ರಿಭುವನ ಗಳನ್ನು ಹಬ್ಬಿಕೊಂಡ ವಾಮನ ಪಾದದಂತೆ, ಅದರ ಅರ್ಥವ್ಯಂಜಕ ಶಕ್ತಿ ದೊಡ್ಡದು. ಭಾಷೆಯನ್ನು ಅವರು ನಡೆಸಿದ, ನುಡಿಸಿದ ರೀತಿ ಅನುಸರಣೀಯ, ಅಭಿನಂದನೀಯ. ಒಂದು ಮಾತು ಹೆಚ್ಚಿಲ್ಲ, ಒಂದು ಮಾತು ಕಡಿಮೆಯಿಲ್ಲ. The right word in the right place' ಎಂಬ ಹಾಗೆ ಅವರ ಬರವಣಿಗೆ. ಕವಿ ರತ್ನಾಕರನಂತೆ, 'ಉಚಿತಕೆ ತಕ್ಕಂತೆ ಪೇಳ್ವ' ಪೂಣ್ಕೆಯನ್ನು ಶರ್ಮರೂ ಹೊತ್ತಂತೆ ತೋರುತ್ತದೆ. ಪುಟ್ಟ ವಾಕ್ಯಗಳ ಈ ಮಣಿದರ್ಪಣದಲ್ಲಿ ಗಾಂಧೀಜಿಯ ಭೂಮವ್ಯಕ್ತಿತ್ವ ಅದೆಷ್ಟು ಖಚಿತವಾಗಿ ಪ್ರತಿಬಿಂಬಿ ಸುತ್ತಿದೆ. ಒಂದೆರಡು ಉದಾಹರಣೆಗಳನ್ನು ನೋಡಿರಿ: "ಹಿಂದೂಸ್ಥಾನದ ಜನಕ್ಕೆ ಗಾಂಧೀಜಿ ಒಂದು ಸಮ್ಮೋಹನ ಮಂತ್ರ. ಅವರು ನಡೆದ ದಾರಿಯ ಧೂಳನ್ನು ಜನ ಹಣೆಗೆ ಹಚ್ಚುತ್ತಾರೆ. ಸಾವಿರಾರು ಹರದಾರಿಯಿಂದ ಅವರ ದರ್ಶನಕ್ಕೆ ಬರುತ್ತಾರೆ. ಆ ದರ್ಶನ ದಿಂದ ತಮ್ಮ ಸಕಲ ಪಾಪವೂ ಹರಿಯಿತೆಂದು ತಿಳಿಯುತ್ತಾರೆ. ಬುದ್ಧ ದೇವನ ಹಾಗೆ ಗಾಂಧೀಜಿಗೆ ಪೂಜೆ ಸಲ್ಲುತ್ತದೆ. ಶ್ರೀ ರಾಮಚಂದ್ರನ ಹಾಗೆ ಗಾಂಧೀಜಿ ಒಂದು ಅವತಾರ ಎಂದು ತಿಳಿಯುತ್ತಾರೆ. ಮಿದುವಾದ ಕಪ್ಪುಗಣ್ಣಿನ ಈ ಬಡಕಲು ಬೈರಾಗಿಯ ಹೆಸರು ಜಗತ್ತಿನ ಮೂಲೆ ಮೂಲೆಗೂ ತಿಳಿದಿದೆ"...."ಅವರು ಆಡುವ ಯಾವ ಮಾತಿನಲ್ಲಿಯೂ ಕುದಿ ಇಲ್ಲ, ಕಾವು ಇಲ್ಲ. ಶಾಂತವಾಗಿ ಗಂಭೀರವಾಗಿ ಸಂಭಾಷಣೆಯನ್ನು ನಿರ್ಮಲವಾಗಿ ನಡೆಸುತ್ತಾರೆ. ಚರ್ಚೆ ಮಾಡಿದರೂ ಅಷ್ಟೆ. ಅದಕ್ಕೊಂದು ಮಟ್ಟವಿದೆ. ಅದರಿಂದ ಕೆಳಗೆ ಇಳಿಯುವುದಿಲ್ಲ. ಮಾತಾಡುವಾಗ ಹಾವಭಾವ ಪ್ರದರ್ಶನವಿಲ್ಲ. ಕೈ, ಬೆರಳು ಯಾವುದೂ ಆಡಿಸುವುದಿಲ್ಲ....ಮಾತು ಸ್ಫುಲಿಂಗಗಳಂತೆ ಸಿಡಿದು ಬರುತ್ತವೆ. ತಡೆಯಿಲ್ಲ, ತೊದಲಿಲ್ಲ. ಉತ್ತರಕ್ಕಾಗಿ ಯೋಚಿಸಬೇಕಾಗಿಲ್ಲ. ಅದೊಂದು ಅಖಂಡ ಸ್ರೋತಸ್ಸು. ಆ ನೀರಿನ ಸವಿ ತಿಳಿಯಾದ ಹಾಸ್ಯದ ರುಚಿ." ಗ್ರಂಥದ ಎಷ್ಟೋ ವಾಕ್ಯಗಳು ಸೂಕ್ತಿ ಯಂತೆ ಮಿಂಚುತ್ತವೆ. ಮನಸ್ಸನ್ನು ಮುಟ್ಟುತ್ತವೆ. 'ಅಳ್ಳೆದೆಯವರಿಗೆ ಆತ್ಮ ಸಿದ್ಧಿ ಆದೀತೆ? ಧೀರರದು ದೇವರ ದಾರಿ.' 'ಗಾಂಧೀ ಮೂಕ ಜನ ಜಂಗುಳಿಯ ಪ್ರತಿನಿಧಿ; 'ರಾಟೆ ಬಡವರ ಕಾಮಧೇನು, 'ಭೂಮಿಯು ಉಸಿರಿದ್ದ ಒಡಲು,' 'ಹೆಣ್ಣು ರಸ

ಸೃಷ್ಟಿಯ ಪರಮಾವಧಿ,' 'ಮಾನವನು ಹುಲು ಮರ್ತ್ಯನಲ್ಲ, ಯೋಗ ಭ್ರಷ್ಟನಾದ ದೇವತೆ'–ಇದು ಸ್ಥಾಲೀಪುಲಾಕ ನಿರ್ದೇಶನ, ಅಷ್ಟೆ.

ಕೃಷ್ಣ ಶರ್ಮರ ಗದ್ಯ ಸೌಂದರ್ಯವನ್ನು ಮನಸಾರೆ ಮೆಚ್ಚಿದ ಮಾಸ್ತಿಯವರ ಮುನ್ನುಡಿಯಲ್ಲಿ ಹೀಗಿದೆ: "....ಶ್ರೀ ಕೃಷ್ಣಶರ್ಮರ ಈ ಗ್ರಂಥದ ಲೇಖನದಲ್ಲಿ ಅದು (ಕನ್ನಡ ಗದ್ಯ) ವಿಚಿತ್ರವಾದ ಒಂದು ಸೌಂದರ್ಯವನ್ನು ಪಡೆದಿದೆಯೆಂದು ನನಗೆ ಕಾಣುತ್ತಿದೆ....ಕಥನ, ವರ್ಣನ, ಟೀಕೆ ಇವನ್ನು ಯಾವುದೂ ಅತಿಯಾಗದಂತೆ ಒಂದು ಹದದಲ್ಲಿ ಬೆರಸಿ, ಬರೆದಿರುವ ಈ ಗ್ರಂಥದ ರೀತಿ ಇಂಥ ಕೃತಿಗೆ ಚೆನ್ನಾಗಿ ಒಪ್ಪುವ ಅತ್ಯುತ್ತಮ ರೀತಿ. ಈ ವಿಷಯವನ್ನು ನಾನು ಬರೆಯುವುದಾಗಿದ್ದರೆ ಇಲ್ಲಿ ಅಲ್ಲಿ ಒಂದು ಮಾತು ಹೊರತಾಗಿ ಹೀಗೆ ಬರೆಯಲು ಅಪೇಕ್ಷಿಸಿದ್ದೇನು, ಹೀಗೆ ಬರೆದರೆ ತೃಪ್ತಿಗೊಂಡಿದ್ದೇನು."–ಇದಕ್ಕಿಂತ ಹೆಚ್ಚಿನ ಪ್ರಶಂಸೆ, ಪ್ರಶಸ್ತಿ ಇನ್ನೇನು ಬೇಕು? ಶರ್ಮರ ಇತರ ಗ್ರಂಥಗಳಿಗೆ ಮುನ್ನುಡಿಯ ಕುಂಕುಮವಿಟ್ಟ ತಿ. ತಾ. ಶರ್ಮ, ದ. ರಾ. ಬೇಂದ್ರೆ. ರಂ. ರಾ. ದಿವಾಕರರ ಭಾವವೂ ಇದೇ ಆಗಿದೆ.

ಹೊಸಗನ್ನಡ ಗದ್ಯವನ್ನು ರೂಪಿಸಿದ ರೂವಾರಿಗಳಲ್ಲಿ ಶರ್ಮರು ಒಬ್ಬರು. ಅವರು ಹಾರಿಸಿದ 'ಕನ್ನಡದ ಕಿಡಿಗಳು' ವ್ಯಕ್ತಿ ಚಿತ್ರಣಕ್ಕೆ ಮಾದರಿ, ಅವರು ಕಟ್ಟಿದ 'ಮಾತಿನ ಮಂಟಪ' ಕಾಲಂ ಬರವಣಿಗೆ (column writing)ಗೆ ಆದರ್ಶಪ್ರಾಯ. ಕಳೆದ ನಾಲ್ಕಾರು ವರ್ಷಗಳಿಂದ ಅವರು ಹಾಸಿಗೆ ಹಿಡಿದು ನರಳದೆ ಇರುತ್ತಿದ್ದರೆ ಅಂಥವನ್ನು ನಾವು ಇನ್ನೆಷ್ಟೋ ಕಾಣಬಹುದಿತ್ತು. ಆ ಭಾಗ್ಯವು ಮತ್ತೊಮ್ಮೆ ಕನ್ನಡಿಗರಿಗೆ ಪ್ರಾಪ್ತಿಯಾಗಲಿ; ಕೃಷ್ಣಶರ್ಮ 'ಸಿದ್ಧಹಸ್ತ'ವು ನಿರಾತಂಕವಾಗಿ ನಡೆಯುವಂತೆ ದೇವರ ವರದ ಹಸ್ತವು ಅನುಗ್ರಹಿಸಲಿ.*

*ಆದರೆ ಕನ್ನಡಿಗರ ದುರ್ದೈವ–ಶರ್ಮರು ಇನ್ನಿಲ್ಲ.

## ೨. ಡಿ. ವಿ. ಜಿ. ಯವರ ‘ ಬಾಳಿಗೊಂದು ನಂಬಿಕೆ ’

ಡಿ. ವಿ. ಜಿ. ಎಂಬ ಸಂಕೇತವಾಗಲಿ, ಡಿ. ವಿ. ಗುಂಡಪ್ಪ ಎಂಬ ಪೂರ್ಣರೂಪವಾಗಲಿ ಕನ್ನಡ ನಾಡಲ್ಲಿ ವಿಚಾರ ಸಾಹಿತ್ಯಕ್ಕೆ ಮತ್ತೊಂದು ಹೆಸರು. ಅವರ ‘ ಕಗ್ಗ ’ ಕನ್ನಡಿಗರಿಗೆಲ್ಲ ಸ್ವರ್ಗ ; ಸಂಸ್ಕೃತಿ, ಅಂತಃಪುರ ಗೀತೆ, ಜೀವನ ಸೌಂದರ್ಯ ಮತ್ತು ಸಾಹಿತ್ಯ, ಸಾಹಿತ್ಯಶಕ್ತಿ, ಗೀತಾ ತಾತ್ಪರ್ಯಗಳಾದರೂ ಹಾಗೆಯೇ–ಅಸಾಧಾರಣ ವರ್ಚಸ್ಸಿನ ಅನನ್ಯ ಗದ್ಯ-ಪದ್ಯ ಗ್ರಂಥಗಳು. ಈ ಗ್ರಂಥಗಳಲ್ಲೂ, ಇನ್ನಿತರ ಕೃತಿಗಳಲ್ಲೂ ಡಿ. ವಿ. ಜಿ. ಯವರು ಒಂದೋ ನೇರವಾಗಿ, ಇಲ್ಲವೇ ಪರ್ಯಾಯವಾಗಿ ‘ ಜೀವನ ಸೌಂದರ್ಯ ’ದ ವಿವೇಚನೆ ಮಾಡಿದ್ದಾರೆ. ಪ್ರಾಯಃ ಬದುಕಿನ ದಾರಿ, ಗುರಿಗಳ ಬಗ್ಗೆ ಕನ್ನಡದಲ್ಲಿ ಡಿ. ವಿ. ಜಿ ಯವರಂತೆ ಚಿಂತಿಸಿದವರು ಹಲವರಿಲ್ಲ. ದೀರ್ಘಕಾಲದ ಜೀವನ ಸಮುದ್ರ ಮಥನದಲ್ಲಿ ತಾವು ಪಡೆದ ಅನುಭವ ನವನೀತವನ್ನೆಲ್ಲ ತಮ್ಮ ಹತ್ತಾರು ಕೃತಿಗಳಲ್ಲಿ ಅವರು ಕನ್ನಡಿಗರಿಗೆ ಉಣಿಸಿದ್ದಾರೆ ; ಸೂತ್ರ ರೂಪದ ವಾಕ್ಯ, ವಾಕ್ಯ ಸಂದೋಹಗಳಲ್ಲಿ ಉಳಿಸಿದ್ದಾರೆ.

ಡಿ. ವಿ. ಜಿ. ಯವರ ಲೇಖನಿಯಿಂದ ಒಸರಿ ಘನೀಕರಿಸಿದ ಚಿಂತನ ಧಾರೆಯೇ ‘ ಬಾಳಿಗೊಂದು ನಂಬಿಕೆ ’–ನೂರಿಪ್ಪತ್ತು ಪುಟಗಳ ಸುಂದರ ಗದ್ಯ ಗ್ರಂಥ. ಅವರ ಅನ್ಯ ಗ್ರಂಥಗಳಷ್ಟು ಪ್ರಸಿದ್ಧಿ, ಪ್ರಾಶಸ್ತ್ಯಗಳು ಇದಕ್ಕೆ ಲಭಿಸಿದಂತಿಲ್ಲ. ಆದರೆ ತೂಕದಲ್ಲಿ ಇದು ಅವಕ್ಕೇನೂ ಕಡಿಮೆಯದಲ್ಲ. ‘ ಮಂಕು ತಿಮ್ಮನ ಕಗ್ಗ ’ವೇ ಮುಂತಾದುವನ್ನು ಭಟ್ಟಿಯಿಳಿಸಿದ “ ಒಂದು ಬೊಗಸೆಯಷ್ಟರ ಆಸವ ”ವೇ ಬಾಳಿಗೊಂದು ನಂಬಿಕೆಯೆಂದರೂ ಸಲ್ಲುವುದು. 1950ರಲ್ಲಿ ಮೊದಲ ಬಾರಿಗೆ, ಇದು ಮೈಸೂರು ವಯಸ್ಕರ ಶಿಕ್ಷಣ ಸಮಿತಿಯಿಂದ ಪ್ರಕಟವಾಯಿತು. ಜನಸಾಮಾನ್ಯರಿಗೂ ಬೋಧವಾಗುವಂತೆ ಚೆನ್ನಾದ ‘ ಬದುಕು ’ ಎಂದರೆ ಯಾವುದೆಂಬುದನ್ನು ಡಿ.ವಿ.ಜಿ. ಯವರು ಈ ಗ್ರಂಥದಲ್ಲಿ ತಿಳಿಸಿದ್ದಾರೆ; ಇದರಲ್ಲಿ ತಮ್ಮ ‘ ಸ್ವಂತ ನಂಬಿಕೆಯನ್ನು ಪ್ರಕಟಿಸಿದ್ದೇನೆ ’ಂದು ಅವರು ಹೇಳಿದ್ದರೂ ಆ ನಂಬಿಕೆ ಸ್ವಂತಕ್ಕಾಗಿಯೇ ಉಳಿಯದೆ ಹತ್ತು ಜನರ ಬಾಳಿಗೆ ಬೆಳಕಾಗಬಲ್ಲ ಸತ್ವವನ್ನುಳ್ಳದ್ದಾಗಿದೆ. ಮಡುಗಟ್ಟಿ ನಿಂತ ಈ ವಿಚಾರ ಧಾರೆಯಲ್ಲಿ ಮುಳುಗಿ ಮಿಾಯುವವನು ಅಂತಃ ಶುಚಿಯನ್ನೂ ಆತ್ಮಾನಂದವನ್ನೂ ಪಡೆಯಬಲ್ಲನು.

‘ ಬದುಕು ಏತಕ್ಕೆ ’ ಇದು ಯುಗ ಯುಗಗಳ ಪ್ರಶ್ನೆ ; ಸಾರ್ವತ್ರಿಕವಾದ ಪ್ರಶ್ನೆ–ಬದುಕು ಎಂದರೆ ಆಹಾರ, ನಿದ್ರೆ, ಭಯ, ಮೈಥುನಗಳೇ ? ಅಥವಾ ದೇಹದಂಡನೆಯೇ, ಸಂಸಾರತ್ಯಾಗವೇ, ಸನ್ಯಾಸವೇ ?–ಇವು ಅಲ್ಲವೆಂದಾದರೆ ಬೇರೊಂದು ಉತ್ತರ, ಅರ್ಥ ಬದುಕಿಗೆ ಇದೆಯೇ ?–ಇದೆ ಎಂಬುದು ಡಿ. ವಿ. ಜಿ. ಯವರ ನಂಬಿಕೆ. ಆ ನಂಬಿಕೆಯನ್ನು ಹಲವಾರು ತರ್ಕ, ವಾದ, ಪ್ರಮಾಣ, ಯುಕ್ತಿ, ಉದಾಹರಣೆಗಳ ಮೂಲಕ ಅವರು ಸಮರ್ಥಿಸಿದ್ದಾರೆ. ಬದುಕು ಕೇವಲ ರಸವಲ್ಲ, ವಿರಸವೂ ಅಲ್ಲ–ಸಮರಸ ; ಬದುಕು ಅಧ್ಯಾತ್ಮ–ಕಲೆ–ವಿಜ್ಞಾನಗಳ ಸಮ್ಮಿಳನ. ಹೀಗಿದ್ದರೇ ಬದುಕು ಹಸನಾಗಬಲ್ಲುದು

ಹುಲುಸಾಗಬಲ್ಲುದು–ಇದು ಈ ಗ್ರಂಥದಲ್ಲಿರುವ ಮುಖ್ಯ ವಿಚಾರ ಸರಣಿ.

ಅತಿವಿರಕ್ತಿ, ಅತ್ಯನುರುಕ್ತಿಗಳೆರಡನ್ನೂ ಡಿ. ವಿ. ಜಿ. ಯವರು ಖಂಡಿಸಿದ್ದಾರೆ. 'ಕಾಷಾಯವಂತ ಬಲು ಭಾಗ್ಯವಂತ'ನೆಂದು ಹಾಡಿ ಹರಿಕತೆಯೋ ಪ್ರವಚನವೋ–ಮಾಡಿ ನಮ್ಮ ಸಾಧು–ಸಂತರು ಜನಸಾಮಾನ್ಯರು ನಿಷ್ಕ್ರಿಯರೂ ನಿರ್ವೀರ್ಯರೂ ಆಗುವಂತೆ ಮಾಡಿದರು. ರಾಮನಾಮ, ವಿಭೂತಿಧಾರಣೆ, ತುಳಸೀ ಮಾಲೆ, ಜಪಸರಗಳಿಂದಲೇ ಬದುಕು ಸಾರ್ಥಕವೆನಿಸುವುದಿಲ್ಲ ಅಥವಾ ಒಬ್ಬನಿಗೆ ಇವು ಮೋಕ್ಷಕ್ಕೆ ಸಾಧನಗಳಾದರೆ ಮತ್ತೊಬ್ಬನಿಗೂ ಆಗಬೇಕೆಂದಿಲ್ಲ. "ಕನಕದಾಸನಿಗೆ ಬಂದಿದ್ದ ನಂಬಿಕೆ ಕಬ್ಬಿಣದ ದಾಸನಿಗೆ ಬಾರದೆ ಹೋಗಬಹುದು" ಎನ್ನುತ್ತಾರೆ ಡಿ. ವಿ. ಜಿ. "ಏಕವಾಕ್ಯ ಸಿದ್ಧಾಂತ ನಮ್ಮ ಬಾಳಿಗೆ ಸಾಲಲಾರದು" ಎಂದು ಎಚ್ಚರಿಸುತ್ತಾರೆ ಅವರು. ಏಕೆಂದರೆ ಲೋಕದಲ್ಲಿ, ಒಬ್ಬೊಬ್ಬನಿಗೂ "ತನ್ನ ಕಣ್ಣಿನಂತೆ ತನ್ನ ಗುರಿ; ತನ್ನ ಕಾಲಿನಂತೆ ತನ್ನ ದಾರಿ." ಇದನ್ನು ಒಪ್ಪುವ ವಿಶಾಲ ಬುದ್ಧಿ ಎಲ್ಲವನ್ನೂ ನೋಡುವ ಸಾಕಲ್ಯ ದೃಷ್ಟಿ ನಮಗೆ ಬೇಕಾಗಿದೆ.

ಚತುರ್ವಿಧ ಪುರುಷಾರ್ಥವೆಂದರೇನು ಎಂಬುದನ್ನು ಡಿ. ವಿ. ಜಿ. ಯವರು ಈ ಗ್ರಂಥದಲ್ಲಿ ಸರಳ ಸುಂದರವಾಗಿ ನಿರೂಪಿಸಿದ್ದಾರೆ. ಪುರುಷಾರ್ಥಗಳ ಗುಣಸ್ವರೂಪವನ್ನು ಹೇಳುತ್ತಾ ನಮ್ಮ ಜನರ ಸ್ಥಿತಿ ಉತ್ತಮವಾಗುವುದಕ್ಕೆ ನಮ್ಮ ಮನಸ್ಸಿನಲ್ಲಿ ಕೆಲವು ಬದಲಾವಣೆಗಳು ಅವಶ್ಯವೆಂದೂ ಆ ಬದಲಾವಣೆಗಳು ಮೂರು ಮುಖವಾಗಿ ನಡೆಯಬೇಕೆಂದೂ ವಾದಿಸಿದ್ದಾರೆ: (1) ಜೀವನೋತ್ಸಾಹ (2) ಪುರುಷ ಪ್ರಯತ್ನ (3) ಲೋಕ ಸ್ನೇಹ ಇವು ನಮ್ಮಲ್ಲಿ ಬೆಳೆಯಬೇಕು; ಈ ಬೆಳೆ (1) ಪ್ರಗತಿ (2) ವಿಜ್ಞಾನ (3) ಸೌಜನ್ಯಗಳಾಗಿ ಫಲಿಸಬೇಕು–ಇವುಗಳಲ್ಲಿ "ಮನಃಪೂರ್ವಕವಾದ ನಂಬಿಕೆ ನಮ್ಮ ಜನದ ಉದ್ಧಾರಕ್ಕೆ" ಅತ್ಯವಶ್ಯವೆಂಬುದು ಡಿ. ವಿ. ಜಿ ಯವರ ಅಭಿಪ್ರಾಯ.

ನಮ್ಮದೀಗ ನರಪತ್ತ ಬದುಕು. ಮಾತು ಮಾತಿಗೂ "ದೇವರು, ಧರ್ಮ, ಭಕ್ತಿ, ಕರ್ಮ, ಪರಮಾತ್ಮ, ಸತ್ಯ, ಅಹಿಂಸೆ" ಎಂಬ ಉದ್ಗಾರ. ನಮ್ಮ ದೇಶ ವಿಶಾಲವಾಗಿದ್ದರೂ ಮಣ್ಣು ಹಸನಾಗಿದ್ದರೂ ವ್ಯವಸಾಯಕ್ಕೆ ಅನುಕೂಲ ವಾತಾವರಣವಿದ್ದರೂ ಕೋಟಿಗಟ್ಟಲೆ ಜನರಿದ್ದರೂ ನಾವು ಬಡತನದಲ್ಲಿ ನರಳುತ್ತಿದ್ದೇವೆ. ಹೀಗೇಕಾಯಿತು ಎಂದರೆ ಒಬ್ಬೊಬ್ಬರು ಒಂದೊಂದು ಕಾರಣವನ್ನು ಹೇಳಿ, ಕೊನೆಗೆ "ಇದೆಲ್ಲಾ ದೈವೇಚ್ಛೆ, ವಿಧಿ ಲೀಲೆ, ಹಣೆ ಬರಹ" ಎಂದು ನಿಟ್ಟುಸಿರು ಬಿಡುತ್ತಾರೆ. "ಹಿಂದೆ ಹೀಗಿರಲಿಲ್ಲ, ಈಗ ಹೀಗೇಕೆ" ಎಂದು ಕೇಳುತ್ತಾರೆ, ಡಿ. ವಿ. ಜಿ. ಅವರು ಅಷ್ಟರಲ್ಲೇ ನಿಲ್ಲದೆ ನಮ್ಮಲ್ಲಿ ಈ ಬಗೆಯ ಕಷ್ಟ, ದೌರ್ಬಲ್ಯ, ಸೋಲುಮನಸ್ಸುಗಳು ಬರಲು ಕಾರಣವೇನೆಂಬುದನ್ನು ತಲಸ್ಪರ್ಶಿಯಾಗಿ ಶೋಧಿಸಿದ್ದಾರೆ; ಮಾತು ಮಾತಿಗೂ ನಾವು ಉದಹರಿಸುವ ವೇದೋಪನಿಷತ್ತುಗಳ "ಜೀವಧ್ವನಿ"ಯೇನೆಂಬುದನ್ನು ಕೇಳಿಸಿದ್ದಾರೆ; ಅಗ್ಗದ ವೈರಾಗ್ಯ, ಅನುಕೂಲ ಸಿದ್ಧಾಂತಗಳು ದೂರವಾಗಿ ಜೀವನದ ಮಹತ್ವವನ್ನು ತಿಳಿಯಬೇಕು, ಧೀರಬುದ್ಧಿಯನ್ನು ಗಳಿಸಬೇಕು ಎಂದು ಸಾರಿದ್ದಾರೆ.

ದೈವಭಕ್ತಿ, ಧರ್ಮಶ್ರದ್ಧೆ ಬೇಡ ಎನ್ನುವವರಲ್ಲ ಡಿ. ವಿ. ಜಿ. ಅವು ಬೇಕೇ ಬೇಕು; ಜತೆಯಲ್ಲಿ ಸಮಪ್ರಮಾಣದಲ್ಲಿ ವಿಜ್ಞಾನಾಸಕ್ತಿಯನ್ನೂ ಮೈಯೂಡಿಸಿಕೊಳ್ಳಬೇಕು. ಹಾಗಾದರೆ ನಮ್ಮ ಭಕ್ತಿ ಶ್ರದ್ಧೆಗಳು ಬಲವಾಗಿ ಬಾಳಿಗೆ ತೂಕ ಬರುತ್ತದೆ. ಇದನ್ನು ಈ ಮೊದಲೇ ಡಿ. ವಿ. ಜಿ ಯವರು ತಮ್ಮ 'ಕಗ್ಗ'ದಲ್ಲೂ ಪ್ರತಿಪಾದಿಸಿದ್ದಾರೆ:

ಹೊಸ ಚಿಗುರು, ಹಳೆಬೇರು ಕೂಡಿರಲು ಮರ ಸೊಬಗು
ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ
ಋಷಿ ವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ
ಜಸವು ಜನ ಜೀವನಕೆ—ಮಂಕುತಿಮ್ಮ

'ವಸ್ತು ವಿಜ್ಞಾನದಿಂದ ಜೀವನ ಸಮೃದ್ಧಿಯಾಗಬೇಕು; ದೃಷ್ಟಲೋಕದ ಬೆಡಗು ಅದೃಷ್ಟವನ್ನು ಮರೆಸಬಾರದು'—ಇತ್ಯಾದಿ. ಇತ್ಯಾದಿ. ಹೀಗೆ ಆತ್ಮಜ್ಞಾನದೊಂದಿಗೆ ವಸ್ತು ವಿಜ್ಞಾನವೂ ಅವಶ್ಯವೆಂದು ಸಾಧಿಸಿದವರಲ್ಲಿ ಡಿ. ವಿ. ಜಿ. ಅಗ್ರಗಣ್ಯರೇ ಸರಿ. ಪುರಂದರ, ಕನಕ, ಬಸವಣ್ಣ, ಕಬೀರರಂತೆ ಗೋಖಲೆ, ತಿಲಕ, ಗಾಂಧಿ, ಜೆ. ಸಿ. ಬೋಸ್, ಪಿ. ಸಿ. ರಾಯ್, ಜೆ. ಎನ್. ತಾತಾ, ವಿಶ್ವೇಶ್ವರಯ್ಯ—ಇಂತಹವರ ಆದರ್ಶವೂ ನಮ್ಮ ಕಣ್ಣೆದುರು ಇರಬೇಕು, ಇವರೂ ದೈವಭಕ್ತರೇ ಎಂದು ಹೇಳುತ್ತಾರೆ ಡಿ. ವಿ. ಜಿ.

ಆತ್ಮವಿಕಾಸ ಹೇಗಾಗಬೇಕು, ಅದರ ಮೆಟ್ಟಿಲುಗಳು ಯಾವುವು ಎಂಬುದನ್ನು ವಿವೇಚಿಸುತ್ತಾ, ಲೋಕ ಚಿಂತೆ ಮಾಡುವುದು ತಪ್ಪಲ್ಲ. "ಊರ ಚಿಂತೆ ಕಟ್ಟಿಕೊಂಡು ಈರಶೆಟ್ಟಿ ಬಡವನಾದ" ಎಂಬ ಗಾದೆ ಮಾತಿನಲ್ಲಿ ಅಪಾಯವೂ ಅಡಗಿದೆ ಎಂಬುದನ್ನು ಡಿ. ವಿ. ಜಿ. ಯವರು ತೋರಿಸಿದ್ದಾರೆ. ನೂರಾರು ಮತ, ರುಚಿ, ವರ್ಚಸ್ಸುಗಳ ನಡುವೆ ನಾವು ಬಾಳುತ್ತಿರುವಾಗ ಸಮನ್ವಯ ಚಾತುರ್ಯ, ನೀತಿ, ಸೂಕ್ಷ್ಮಜ್ಞಾನಗಳೂ ಬೇಕಾಗಿವೆ. ದೇಶೀಯವಾದದ್ದೆಲ್ಲ ತುಚ್ಛವೆಂಬ ಕೀಳರಿಮೆಯಾಗಲಿ, ವಿದೇಶವೆಂದರೆ ವೈಕುಂಠವೆಂಬ ಭ್ರಾಂತಿಯಾಗಲೀ ಸಲ್ಲದು. ಎಲ್ಲೆಲ್ಲಿ ಸ್ವೀಕಾರ್ಯವಾದದ್ದು ಇದೆಯೋ ಅದೆಲ್ಲವನ್ನೂ ಹೀರಿಕೊಂಡು ನಾವು ಪುಷ್ಟಕಾಯರೂ ತುಷ್ಟ ಹೃದಯರೂ ಆಗಬೇಕು.

ನೂತನ—ಪುರಾತನಗಳ ಸಮನ್ವಯ, ಅಧ್ಯಾತ್ಮ—ವಿಜ್ಞಾನಗಳ ಸಾಮರಸ್ಯ, ಪುರುಷ ಪ್ರಯತ್ನ—ಲೋಕಸ್ನೇಹ....ಇದು ಡಿ. ವಿ. ಜಿ ಯವರ ನಂಬಿಕೆ. ಬಹು ಮಟ್ಟಿಗೆ ಅವರದ್ದು ವಿವೇಕಾನಂದರ ಮಾರ್ಗವೆನ್ನಬಹುದು. ಈ ಗ್ರಂಥದ ಹಲವು ಪಂಕ್ತಿಗಳನ್ನು ಓದುವಾಗ ವಿವೇಕಾನಂದರ ಗಂಡುದನಿಯೇ ಪಡಿನುಡಿದಂತಾಗುತ್ತದೆ.— "Let not the barks of puppies frighten us, no, not even the thunder bolts of heaven ..What the nation wants is pluck and scientific genius ..The new religion says that he is the athiest who does not believe in himself." ಇತ್ಯಾದಿ. "ಜೀವನವು ದೇವರು ಕೊಟ್ಟ ವರ;

ಜೀವನವನ್ನು ಅಂದಗೊಳಿಸುವುದೇ ನಾವು ದೇವರಿಗೆ ಸಲ್ಲಿಸುವ ಕೃತಜ್ಞತೆ. ಜೀವನ ಸಮೃದ್ಧಿ–ಜೀವನ ಸಂಸ್ಕಾರ–ಜೀವನ ಸೌಂದರ್ಯ–ಇದು ಬರಿಯ ಐಹಿಕಾಸಕ್ತಿಯಲ್ಲ; ಚಾರ್ವಾಕತನವಲ್ಲ, ಭೋಗ ನಿಷ್ಠೆಯಲ್ಲ ಇದು ವೇದ ವೇದಾಂತಗಳ ಸಾರಾಂಶ " ಇದು ಡಿ. ವಿ. ಜಿ ಯವರ ನಿಲುವು.

ಪ್ರಚಲಿತ ಪರಿಸ್ಥಿತಿಯಲ್ಲಿ ನಮಗೆಲ್ಲ ರಾಮಸೇವಕ ಆಂಜನೇಯನು ಆರಾಧ್ಯಮೂರ್ತಿ, ಆದರ್ಶ ವ್ಯಕ್ತಿಯೆಂದು ಡಿ. ವಿ. ಜಿ ಯವರ ನಂಬಿಕೆ. ಆದುದರಿಂದ ಗ್ರಂಥಾರಂಭದಲ್ಲಿ ಹನುಮಂತನ ಚಿತ್ರವನ್ನೂ, ಅಂತ್ಯದಲ್ಲಿ ಅವನನ್ನು ಕುರಿತ ಒಂದು ಗೀತವನ್ನೂ ಕೊಟ್ಟಿದ್ದಾರೆ. ಇವುಗಳಿಂದಲೂ ನಾವು ಗ್ರಹಿಸಬೇಕಾದ್ದು ಎಷ್ಟೋ ಇದೆ. ಡಿ. ವಿ.ಜಿ. ಯವರು ಸೂತ್ರರೂಪದ ಹೇಳಿಕೆಗೆ ಹೆಸರಾದವರು. ಪ್ರಸ್ತುತ ಗ್ರಂಥದಲ್ಲಿ ಅಂತಹ ಹೇಳಿಕೆಗಳು–ಸುಭಾಷಿತಗಳು -ಎಷ್ಟೋ ಇವೆ. ಸಾವಕಾಶವಾಗಿ ಓದಿ, ಮೆಲುಕಾಡುವಾಗ ಅವುಗಳ ರುಚಿ ತಿಳಿಯುತ್ತದೆ. ಡಿ. ವಿ. ಜಿ ಯವರ ಸೂಕ್ತಿಗಳೆಂದರೆ, ಉಂಡೆ ಕಟ್ಟಿದ ಜೀವಾತುಗಳಿದ್ದಂತೆ.–ಎಲ್ಲರೂ ಓದಬೇಕಾದ ಎಲ್ಲರಿಂದಲೂ ಓದಿಸಿಕೊಳ್ಳುವ ಗ್ರಂಥ: ' ಬಾಳಿಗೊಂದು ನಂಬಿಕೆ.'

## ೩. ವಾಸುದೇವಾಚಾರ್ಯರ ' ನೆನಪುಗಳು '

' ಸಂಗೀತಮಪಿ ಸಾಹಿತ್ಯಂ ಸರಸ್ವತ್ಯಾಃ ಸ್ತನದ್ವಯಂ'-ಸಂಗೀತ ಸಾಹಿತ್ಯಗಳೆಂದರೆ ತಾಯಿ ಸರಸ್ವತಿಯ ಎದೆ ಹಾಲಿನಂತೆ; ಅದನ್ನು ಕುಡಿಯುವವರು ಧನ್ಯರು. 'ಸಾಹಿತ್ಯ ರಸ ಮಾಧುರ್ಯಂ ಶಂಕರೋ ವೇತ್ತಿ ವಾ ನವಾ '-ಸಾಹಿತ್ಯ ರಸದ ರುಚಿ ಶಂಕರನಿಗಾದರೂ ಗೊತ್ತಿದೆಯೋ ಇಲ್ಲವೋ. ' ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನ ರಸಂ ಫಣೀ '–ಹಸುಳೆ, ಹಸು, ಹಾವುಗಳು ಸಂಗೀತಕ್ಕೆ ಸೋಲುತ್ತವೆ. –ಹೀಗೆ ಸಾಹಿತ್ಯ ಸಂಗೀತಗಳ ಪ್ರಭಾವವನ್ನು, ಪ್ರಸಾದ ಗುಣವನ್ನು ಜತೆ ಜತೆಯಾಗಿ ಅಥವಾ ಬಿಡಿ ಬಿಡಿಯಾಗಿ ವರ್ಣಿಸುವ ವಾಕ್ಯಗಳೋ ವಾಕ್ಯಖಂಡಗಳೋ ಆಗಾಗ ಕಣ್ಣಿಗೆ ಬೀಳುತ್ತವೆ. ಕಾವ್ಯ ನಿರ್ಮಾಣ-ಗಾಯನಗಳಿಂದಾಗಲೀ ಅಥವಾ ಅವುಗಳ ವಾಚನ ಶ್ರವಣಾನುಭವಗಳಿಂದಾಗಲೀ ಹೃದಯಾನಂದ–ಆತ್ಮ ವಿಕಸನಗಳು ಸಾಧ್ಯವೆಂಬುದು ಉದ್ಧೃತ ಸೂಕ್ತಿಗಳ ಒಟ್ಟು ತಾತ್ಪರ್ಯ. ಎಂದರೆ ಕಲಾ ಪ್ರಪಂಚದಲ್ಲಿ ಕಲಾಕಾರರಂತೆಯೇ ಸಹೃದಯಿ ರಸಿಕರೂ ಭಾಗ್ಯಶಾಲಿಗಳು. ದಿ. ಮೈಸೂರು ಕೆ. ವಾಸುದೇವಾಚಾರ್ಯರು ಅಂತಹ ಧನ್ಯಜೀವಿ–ಸಂಗೀತ ಸಾಹಿತ್ಯಾಮೃತಗಳೆರಡನ್ನೂ ಉಂಡು, ಉಣಿಸಿ ಕೀರ್ತಿಭಾಜನರಾದವರು. ಸಹೃದಯ ರಸಿಕರ ಚಿರ ಕೃತಜ್ಞತೆಗೆ ಪಾತ್ರರು.

ವೀಣೆಯ ಶೇಷಣ್ಣ, ಬಿಡಾರಂ ಕೃಷ್ಣಪ್ಪನವರಂತಹ ದಿಗ್ದಂತಿಗಳ ಸಮಕಾಲೀನರು ವಾಸುದೇವಾಚಾರ್ಯರು. 1865ರಲ್ಲಿ ಮೈಸೂರಿನಲ್ಲಿ ಹುಟ್ಟಿ, 1961ರಲ್ಲಿ ಮದ್ರಾಸಿನಲ್ಲಿ ಸ್ವರ್ಗಸ್ಥರಾದ ಶ್ರೀ ವಾಸುದೇವಾಚಾರ್ಯರದ್ದು ತೊಂಬತ್ತೇಳು ವರ್ಷಗಳ ನಿಡುಬಾಳು. ಮೈಸೂರು ಅರಮನೆಯ ಆಲಂಬನದಲ್ಲಿ ತಮ್ಮ ಸಂಗೀತ ಕಲ್ಪಲತೆಯನ್ನು ಚಿಗುರಿಸಿದವರು. ದೇಶಾದ್ಯಂತ ಸಂಚರಿಸಿ, ಕಚೇರಿಗಳನ್ನು ಮಾಡಿ, ಹೆಸರು ಪಡೆದರು. ನೂರಾರು ಗೇಯ ಕೃತಿಗಳನ್ನು ರಚಿಸಿ, ' ತೃತೀಯ ತ್ಯಾಗರಾಜ' ರೆಂದು ಪ್ರಸಿದ್ಧರಾದರು. ತಮ್ಮ ಸಂಗೀತ ವೈದುಷ್ಯದಿಂದಲೂ, ಸ್ನೇಹಲಹೃದಯದಿಂದಲೂ ಸಾವಿರಾರು ಶಿಷ್ಯ–ಮಿತ್ರರನ್ನು ಸಂಪಾದಿಸಿದವರು ಅ⁻'ರು. ಮದರಾಸಿನ ಕಲಾ ಕ್ಷೇತ್ರದಲ್ಲಿ ಶ್ರೀ ರಾಮಾಯಣ ನೃತ್ಯ ನಾಟಕಕ್ಕೆ ಸಂಗೀತ ಸಂಯೋಜನೆ ಮಾಡುತ್ತಾ ಕಣ್ಮುಚ್ಚಿದ ಸಾರ್ಥಕ ಜೀವ–ವಾಸುದೇವಾಚಾರ್ಯರು.

ವಾಗ್ಗೇಯಕಾರ ವಾಸುದೇವಾಚಾರ್ಯರು ಹುಟ್ಟು ಕನ್ನಡಿಗರು. ಆದರೂ ಅವರ ಕೃತಿಗಳೆಲ್ಲ ಸಂಸ್ಕೃತ ಅಥವಾ ತೆಲುಗಿನಲ್ಲಿ. ಇದು ಆಯಾ ಭಾಷೆಗಳಲ್ಲಿ ಆಚಾರ್ಯರಿಗಿದ್ದ ಪ್ರೇಮ ಪರಿಣತಿಗಳ ಸೂಚಕವಾದರೂ ಕನ್ನಡಕ್ಕೆ ಅದೊಂದು ನಷ್ಟವೆನ್ನದೆ ವಿಧಿಯಿಲ್ಲ. ಆಚಾರ್ಯರ ಹಲವು ಅಭಿಮಾನಿಗಳನ್ನು ಈ ' ಕೊರತೆ ' ಕೊರೆದದ್ದೂ ಇದೆ. ಪ್ರಾಯಃ ತಮ್ಮ ಸೋದರ ಕನ್ನಡಿಗರ ಹೃಚ್ಛಯವಾದ ಬಯಕೆ ಆಚಾರ್ಯರಿಗೆ ಅರ್ಥವಾಗಿಯೋ ಅಥವಾ ಕನ್ನಡಿಗರ ಪುಣ್ಯದಿಂದಲೋ, ಅವರು ತಮ್ಮ ತುಂಬು ಜೀವನದ ಪರಿಪಕ್ವ ಫಲಗಳಂತೆ ಈ ಎರಡು ಕನ್ನಡ ಗ್ರಂಥಗಳನ್ನು ಪ್ರಕಟಿಸಿದರು–ಒಂದು 'ನಾ ಕಂಡ ಕಲಾವಿದರು'

ಇನ್ನೊಂದು 'ನೆನಪುಗಳು'. ಜಿ. ಪಿ. ರಾಜರತ್ನಂ ಒಂದು ಕಡೆ ಬರೆದಂತೆ 'ನಾ ಕಂಡ ಕಲಾವಿದರು' ಚಿನ್ನದ ಕಂಕಣದಂತೆ ಕಂಗೊಳಿಸಿದರೆ, 'ನೆನಪುಗಳು' ವಜ್ರದ ಮಾಲೆಯಲ್ಲಿರುವ ದ್ರವಾಗ್ನಿಯಂತೆ ತಳತಳಿಸುತ್ತದೆ. ಆಚಾರ್ಯರ 'ಕಂಠ' ಸಂಗೀತದಲ್ಲಿ ಹೇಗೋ ಹಾಗೆಯೇ ಸಾಹಿತ್ಯದಲ್ಲೂ 'ಸವ್ಯಸಾಚಿಸ' ಬಲ್ಲುದು ಎಂಬುದನ್ನು ಈ ಗ್ರಂಥದ್ವಯಗಳು ಸಿದ್ಧಪಡಿಸಿವೆ. ಇವುಗಳಲ್ಲಿ ನನಗೆ ಪ್ರಸ್ತುತವಾದುದು 'ನೆನಪುಗಳು.'

'ನೆನಪುಗಳು' ಹೆಸರೇ ಸೂಚಿಸುವಂತೆ ಆಚಾರ್ಯರ ಸ್ಮೃತಿಚಿತ್ರ. ಅಷ್ಟೇ ಅಲ್ಲ ಅದೊಂದು ಚಿತ್ರಶಾಲೆ, ಚಿತ್ರಮಾಲೆ, ಅಲ್ಲಿರುವುದು ಆತ್ಮ ಕಥನದಂತೆ ಕಾಲಾನುಕ್ರಮ ವಿವರಣೆಯಲ್ಲ; ವಿಸ್ತೃತ ಜೀವನ ರಂಗದ ಹಕ್ಕಿನೋಟ. ಈ ನೋಟ ಅವರ ವೃತ್ತಿ-ಆಸಕ್ತಿಗಳಿಗಷ್ಟೇ ಮೀಸಲಲ್ಲ. ಬದುಕಿನಲ್ಲಿ ತಾವೇ ಕಂಡದ್ದು-ಉಂಡದ್ದು, ಹೆರವರು ಹೇಳಿದ್ದು-ಕೇಳಿದ್ದು ಎಲ್ಲವೂ ಇಲ್ಲಿ ಸುರುಳಿ ಬಿಚ್ಚುತ್ತವೆ, ಸಾಲುದೀಪಗಳಂತೆ ಮಿನುಗುತ್ತವೆ, ಎಂಟು ಅಧ್ಯಾಯಗಳ ಅಚ್ಚುಕಟ್ಟಿನಲ್ಲಿ ಹತ್ತು-ನೂರು ಸಣ್ಣ ದೊಡ್ಡ ಚಿತ್ರಗಳು ಕಣ್ಣ ಮುಂದೆ ಸುಳಿಯುತ್ತವೆ, ಮನಸ್ಸಿನ ಆಳಕ್ಕೆ ಇಳಿಯುತ್ತವೆ. ಒಂದೊಂದು ಚಿತ್ರದ್ದೂ ಒಂದೊಂದು ಬಣ್ಣ, ರೇಖೆ, ವಿಲಾಸ. ಒಟ್ಟಿನಲ್ಲಿ ಓದುಗನ ಮುಂದೆ ಒಂದು ಕನಸಿನ ಲೋಕವನ್ನೇ ತೆರೆಯುತ್ತದೆ ಈ ಪುಸ್ತಕ.

'ಅರಮನೆಗೆ ಪ್ರವೇಶ' ವೆಂಬುದು ಪ್ರಥಮ ಪರಿಚ್ಛೇದ. ಇದರಲ್ಲಿ ಆಚಾರ್ಯರು ತಮ್ಮ ಬಾಲ್ಯ-ವಿದ್ಯಾಭ್ಯಾಸಗಳಿಗೊಂದು ಇಣಿಕು ನೋಟವನ್ನು ಬೀರಿದ್ದಾರೆ. ತಮ್ಮ ಹಿರಿಯರ, ಹೆತ್ತವರ, ಹಿರಿಮೆ-ಗರಿಮೆಗಳು, ಪಿತೃವಿಯೋಗಾನಂತರ ತಮ್ಮ ಅಸಹಾಯ ಪರಿಸ್ಥಿತಿ, ಮಾತಾಮಹನ ಧೀರ ವರ್ತನೆಯಿಂದ ತಿಂಗಳಿಗೆ ಹದಿನೈದು ಹಣಗಳ ಮಾಸಾಶನವು ಅರಮನೆಯಿಂದ ದೊರೆತದ್ದು, ಸಂಸ್ಕೃತಾಭ್ಯಾಸ ಕಾಲದಲ್ಲೇ ಸಂಗೀತದ ಹುಚ್ಚು ಹಿಡಿದದ್ದು, ಚಾಮರಾಜ ಒಡೆಯರ ಕೃಪಾದೃಷ್ಟಿಗೆ ಒಳಗಾಗಿ ತಿರುವಯ್ಯಾರಿಗೆ ತೆರಳಿ, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್ ಅವರ ಪಾದಮೂಲದಲ್ಲಿ ಕುಳಿತು ಆರು ವರ್ಷಗಳ ಕಾಲ ಸಂಗೀತಾಭ್ಯಾಸ ಮಾಡಿದ್ದು; ಅನಂತರ ಗುರ್ವನುಗ್ರಹದೊಂದಿಗೆ ಮೈಸೂರಿಗೆ ಹಿಂದಿರುಗಿ ಜೀವನದ ಸುವರ್ಣಾಧ್ಯಾಯವನ್ನು ತೆರೆದದ್ದು- ಈ ಸಂಗತಿಗಳನ್ನು ಅದರಲ್ಲಿ ಕಥಿಸಿದ್ದಾರೆ. ಅಧ್ಯಾಯದ ಆರಂಭವಾಗಲೀ ಅನಂತರದ ನಿರೂಪಣೆಯಾಗಲೀ ಸ್ವಾರಸ್ಯಪೂರ್ಣವೂ ಕುತೂಹಲಕಾರಿಯೂ ಆಗಿದೆ. 'ಫ್ಲಾಶ್‌ಬ್ಯಾಕ್' ತಂತ್ರವನ್ನು ಇಲ್ಲಿ ತುಂಬ ಚತುರತೆಯಿಂದ ಬಳಸಿಕೊಂಡಿದ್ದಾರೆ.

ಎರಡನೆಯ ಅಧ್ಯಾಯ-'ಅರಮನೆಯಲ್ಲಿ'. ಅರಮನೆಯ ಪ್ರವೇಶವು ಸುಲಭಸಾಧ್ಯವಾಗಿ ಪ್ರಭು ಪ್ರೀತಿಯು ಲಭಿಸಿ ಅರಮನೆಯ ತಣ್ಣೆಳಲಲ್ಲಿ ಬಾಳುತ್ತಿದ್ದಾಗಿನ ಹತ್ತಾರು ರಸ ಚಿತ್ರಗಳನ್ನು ಆಚಾರ್ಯರು ಇಲ್ಲಿ ಕಾಣಿಸಿದ್ದಾರೆ. 'ಜನಜೀವನ' ವೆಂಬ ಮೂರನೆಯ ಪರಿಚ್ಛೇದದಲ್ಲಿ ಹಳೆಯ ಮೈಸೂರಿನ ಸುಖ ಸಂತೋಷಗಳ, ವಿಲಾಸ ವೈಭವಗಳ ಹೃದಯಂಗಮ ವರ್ಣನೆಯಿದೆ. ನಾಲ್ಕನೆಯ 'ಆಗಿನ ನಾಟಕ ಕಂಪನಿಗಳು' ಮತ್ತು ಐದನೆಯ 'ಇಬ್ಬರು ನಟವರರು' ಎಂಬ ಎರಡು ಅಧ್ಯಾಯಗಳಿಗೆ ಐತಿಹಾಸಿಕಮೌಲ್ಯ

ಗಳಿವೆ. ನಾಟಕ ಕಲೆಯ ವಿಕಾಸದ ಕೆಲವು ಸುಳುವು—ಹೊಳವುಗಳೂ ಅಲ್ಲಿವೆ. ಮರಾಠಿ ನಾಟಕ ಕಂಪೆನಿಗಳಿಂದ ಪ್ರಚೋದಿತವಾಗಿ ಅರಮನೆಯಲ್ಲಿ ನಾಟಕ ಕಂಪೆನಿ ಹುಟ್ಟಿದ್ದಾಗಲೀ ಆಗಿನ ನಾಟಕಗಳ ಇತಿ-ಮಿತಿಗಳಾಗಲೀ, ನಾಟ್ಯ ಕಲಾವಿದರ ಚೇಷ್ಟೆ ವಿನೋದ ಗಳಾಗಲೀ ಆಚಾರ್ಯರಿಗೆ ಚೆನ್ನಾಗಿ ಬಳಕೆಯಿದ್ದು ಅವರು ಸರಿಯಾಗಿ ತಿಳಿದುಕೊಂಡಿದ್ದ ನಾಟಕ ಪ್ರಭು ಎ.ವಿ. ವರದಾಚಾರ್ ಮತ್ತು ಹಾಸ್ಯ ಮೂರ್ತಿ ಕೃಷ್ಣಮೂರ್ತಿರಾಯರ ಚಿತ್ರಣವಾಗಲೀ, ಈ ಅಧ್ಯಾಯಗಳಿಗೆ ಬಣ್ಣವೇರಿಸಿ ಕಳೆಗೂಡಿಸಿವೆ.

ಆಚಾರ್ಯರು ತಾವು ಕೇಳಿದ ಕೆಲವು ಮನೋರಂಜಕ ಕಥೆಗಳನ್ನೂ, ಕಂಡ ಹಲವು ಸ್ವಾರಸ್ಯ ಪ್ರಸಂಗಗಳನ್ನೂ ಆರು–ಏಳನೆಯ ಅಧ್ಯಾಯಗಳಲ್ಲಿ ನಿರೂಪಿಸಿದ್ದಾರೆ. ಇಲ್ಲಿ ಬರುವ ಕಥೆಗಳಾಗಲೀ, ಪ್ರಸಂಗಗಳಾಗಲೀ ಬಿಡಿಬಿಡಿಯಾಗಿಯೂ ಸ್ವತಂತ್ರ ವಾಗಿಯೂ ಇದ್ದು 'ಮುಕ್ತಕ' ಎಂಬ ವರ್ಗಕ್ಕೆ ಸೇರಲು ಅರ್ಹವೆನಿಸುತ್ತವೆ. ಆಚಾ ರ್ಯರು ಕೇವಲ ಗಾಯಕರಲ್ಲ, ಕೃತಿ ರಚಕರೂ ಹೌದಷ್ಟೆ. ಕೆಲವು 'ರಚನಾ ಪ್ರಸಂಗ ಗಳು' ಎಂಬ ಎಂಟನೆಯ (ಕೊನೆಯ) ಪರಿಚ್ಛೇದವು ಅವರ ಹಲವು ಕೃತಿಗಳ ಹುಟ್ಟಿನ ಗುಟ್ಟನ್ನು ತಿಳಿಸುತ್ತದೆ. ಕೃತಿಪ್ರಸವ ಕಾಲದ ಸುಖಾನುಭವವೋ ಹಿತಕರ ವೇದನೆಯೋ ಹೇಗೆ ಎಷ್ಟು ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದು. ಕಲಾಸೃಷ್ಟಿಯೊಂದು ರಹಸ್ಯ ಕರ್ಮ. ಕೆಲಮಟ್ಟಿಗೆ ಆಚಾರ್ಯರು ಆ ರಹಸ್ಯವನ್ನು ಇಲ್ಲಿ ಸ್ಫೋಟಿಸಿದ್ದಾರೆ.

ತೊಂಬತ್ತಾರು ವಸಂತಗಳನ್ನು ಕಂಡ ವಯೋವೃದ್ಧರ ನೆನಪಿನ ಗೊಂಚಲು ಈ ಗ್ರಂಥವೆಂದರೆ ವಾಚಕರಿಗೆ ಆಶ್ಚರ್ಯವಾಗಬಹುದು; ಆದರ ಅಷ್ಟೇ ಸಂತೋಷವೂ ಆಗು ತ್ತದೆ. ಇಲ್ಲಿರುವ ಯಾವ ನೆನಪೂ ಮಸುಕಲ್ಲ. ಸ್ಪಷ್ಟ 'ಉಜ್ವಲ' ಎಂಟು ಅಧ್ಯಾಯಗಳ ಉದ್ದಕ್ಕೂ ಬರುವ ಕಥೆಗಳೆಲ್ಲ ರೋಚಕವಾಗಿವೆ, ವ್ಯಕ್ತಿ ಚಿತ್ರಣಗಳು ಖಚಿತವಾಗಿವೆ, ಪ್ರಸಂಗಗಳು ರಸವತ್ತಾಗಿವೆ, ಪಳಗಿದ ಸಾಹಿತೀಯನ ಲೆಕ್ಕಣಿಕೆಯಂತೆ ಹರಿದಿದೆ, ಆಚಾರ್ಯರ ಕೈ. ಬಾಯಿ ಮುಗ್ಗರಿಸಿದ್ದಾಗಲೀ, ತಡವರಿಸಿದ್ದಾಗಲೀ ಇಲ್ಲ. ಅನುಭವದ ಕೊಡ ತುಂಬಿದ್ದಾಗ, ಭಾವವು ಚೆನ್ನಾಗಿದ್ದಾಗ, ಆಲೋಚನೆಯು ಸ್ಪಷ್ಟ ವಾಗಿದ್ದಾಗ ಭಾಷೆ ತಾನಾಗಿಯೇ ಬರುತ್ತದೆ ಎಂಬುದಕ್ಕೆ ನಿದರ್ಶನ ಪ್ರಕೃತ ಗ್ರಂಥ.

ನೂರೆಂಟು ಪುಟಗಳ ಗ್ರಂಥದಲ್ಲಿ ನೂರೆಂಟು ಬಗೆಯ ವ್ಯಕ್ತಿಗಳನ್ನು ಚಿತ್ರಿಸಿದ್ದಾರೆ ಆಚಾರ್ಯರು. ದೀರ್ಘ ವರ್ಣನೆಗೆ ಹೋಗದವೆ ಒಂದೆರಡು ಮಾತುಗಳಿಂದಲೇ ಒಬ್ಬ ವ್ಯಕ್ತಿಯ ಅಂತರಂಗ–ಬಹಿರಂಗಗಳನ್ನು ಚಿತ್ರಿಸುವುದು ನಿಜವಾದ ಕಲೆಗಾರಿಕೆ. ಆಚಾ ರ್ಯರಿಗೆ ಆ ಕಲೆ ಸಿದ್ಧಿಸಿದೆ. ಆಶ್ರಯದಾತರೂ, ಕಲಾ ಸಂಸ್ಕೃತಿಗಳ ಮಹಾಪೋಷಕರೂ ಆದ ಮುಮ್ಮಡಿ ಕೃಷ್ಣರಾಜರು, ನಾಲ್ವಡಿ ಕೃಷ್ಣರಾಜರು, ಗುರುಗಳೂ ಗುರು ಸ್ವರೂಪಿಗಳೂ ಆದ ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ಮಹಾ ವೈದ್ಯನಾಥಯ್ಯರ್ ಮುಂತಾದವರು, ಸಮಕಾಲೀನ ಸ್ನೇಹಿತರಾದ ರಾಮನಾಡ್ ಶ್ರೀನಿವಾಸಯ್ಯಂಗಾರ್,. ವೀಣೆ ಶೇಷಣ್ಣ, ಸುಬ್ಬಣ್ಣ, ಗಾನ ವಿಶಾರದ ಬಿಡಾರಂ ಕೃಷ್ಣಪ್ಪ, ಟೈಗರ್ ವರದಾಚಾರ್, ನಟಶ್ರೇಷ್ಠ ವರದಾಚಾರ್, ನಕಲಿ ಕೃಷ್ಣಮೂರ್ತಿರಾಯರೇ ಮೊದಲಾದ ಪ್ರಸಿದ್ಧ ಮಹನೀಯರ

ಮಾತಿರಲಿ, ಅವರ ನೆನಪಿನ ಅಂಗಳದಲ್ಲಿ ಹಾಗೆ ಬಂದು ಹೀಗೆ ಹೋಗುವ ಸಾಮಾನ್ಯ ವ್ಯಕ್ತಿಗಳನ್ನೂ ಕ್ಷಣಕಾಲ ಮಿಂಚಿಸಬಲ್ಲ ಮಾತಿನ ಮೋಡಿಯಿದೆ ಆಚಾರ್ಯರಲ್ಲಿ—'ಯಾವಾಗಲೂ ಕಂಕುಳ ಸಂದಿಯಲ್ಲಿ ಒಂದು ಕಂತೆ ಕಾಗದ, ಸೀಸದ ಕಡ್ಡಿಯ ಕಟ್ಟುಗಳನ್ನು ಸಿಕ್ಕಿಸಿಕೊಂಡೇ ಓಡಾಡುವ ಆಶುಕವಿ ಮರಿ ಪಂಡಿತರು ; ಗಾಡಿಯೆತ್ತಿಗೆ—ಅದು ಸಾಕ್ಷಾತ್ ಬಸವೇಶ್ವರನೆಂದೇ ಭಾವಿಸಿ — ದಿನಕ್ಕೆರಡು ಗೊನೆ ರಸಬಾಳೆ ಹಣ್ಣು ತಿನ್ನಿಸುತ್ತಿದ್ದ ಶಿವಪಾದ ಸ್ವಾಮಿ, 'ಹುಚ್ಚನಲ್ಲವಾದರೂ ಹುಚ್ಚನಂತೆ ತೋರುತ್ತಿದ್ದ ಕಾಲಜ್ಞಾನಿ ಮಹದೇವ ಶಾಸ್ತ್ರಿ', 'ಸ್ವಾಮಿನಿಷ್ಠ, ಸದಾಚಾರ ಸಂಪನ್ನ, ನಿಸ್ಪೃಹ ಚಕ್ರವರ್ತಿ ರಾಮಕೃಷ್ಣಪ್ಪ, ಭಾರೀ ಕಚ್ಚೆ ಪಂಚೆಗಳ ಟೊಪ್ಪ ಕೊಂಡಪುರದ ಅರಸು ; ' ಗಾಳಿಪಟವಾಡಿಸುವವನಿಗೆ ಬೊಗಸೆ ತುಂಬ ವಜ್ರದಾನ ಮಾಡಿದ ಪೇಪಪಾರ್ಥಿವನು ;' 'ಕರುಹಟ್ಟಿ ಮೋಲ್ವಿಚಾರಕ ದರೋಗ ಚೆಲುವಯ್ಯ ; 'ಜಾಪಳಿ' ಹುಚ್ಚಿನ ಜಮೀನ್ದಾರ ವೆಂಕಟಪತಯ್ಯ ; ಇವರು, ಇವರಂತಹ ಇನ್ನೂ ಹಲವರು ಬಿಡಿ ಚಿಕ್ಕೆಗಳಂತೆ ಓದುಗರ ಮನಸ್ಸಿನಲ್ಲಿ ಬೆಳಗುತ್ತಾರೆ.

ಇಲ್ಲಿರುವ ಕಥಾ ಪ್ರಸಂಗಗಳೂ ಹೀಗೆಯೇ. ಒಮ್ಮೆ ಓದಿದರೆ ಸಾಕು, ನೆನಪಿನಲ್ಲಿ ಕೀಲಿಸಿಬಿಡುತ್ತವೆ. ಕತೆಯ ಸಾಸಿವೆ ಕಾಳಿಗೆ ನಗೆಯ ಸಕ್ಕರೆ ಲೇಪ್ಪವನ್ನು ಹಾಕಿ ಧಾರಾಳವಾಗಿ ನೀಡಬಲ್ಲವರು ಆಚಾರ್ಯರು. ರಂಗ ಎಂಬವನು ನಾಯಿಂದನ ವೇಷಹಾಕಿ ರಂಗಮಂಟಪಕ್ಕೆ ಬಂದಾಗ, ಪ್ರೇಕ್ಷಕನೊಬ್ಬ 'ಲೊ ಹಜಾಮ ರಂಗ' ಎಂದು ಕೂಗುವುದಾಗಲೀ, ಅದಕ್ಕೆ ರಂಗನು 'ನಿಮ್ಮಪ್ಪ' ಎಂದು ಅಷ್ಟೇ ಸಮರ್ಪಕ–ಸಭ್ಯ ಭಾಷೆಯಲ್ಲಿ ಉತ್ತರಿಸುವುದಾಗಲೀ ಯಾರಿಗೆ ನಗು ಬರಿಸದು ? ದಿವಾನ್ ಶೇಷಾದ್ರಿ ಅಯ್ಯರ್ ಮನೆಯ ಮದುವೆ ಊಟದಲ್ಲಿ ವೀಣೆ ಸುಬ್ಬಣ್ಣ ಮತ್ತು ಆಚಾರ್ಯರು ಸೇರಿ ಶೇಷಣ್ಣನವರನ್ನು ಉಪವಾಸ ಬೀಳಿಸುವುದು, ಟೈಗರ್ ವರದಾಚಾರ್ಯರೊಂದಿಗೆ ಅವರ ಸಣ್ಣ ಟೋಪಿಯನ್ನು ಭಿಕ್ಷೆಯಾಗಿ ಕೇಳುವುದು ಇವೆಲ್ಲ ಪಕ್ಕೆ ಬಿರಿಯುವಷ್ಟು ನಗು ತರಿಸುತ್ತವೆ. ಉತ್ತರ ದೇಶದ ಜ್ಯೋತಿಷ್ಕನೊಬ್ಬನು ಮುಮ್ಮಡಿ ಕೃಷ್ಣರಾಜರ ಹಸ್ತ ಪರೀಕ್ಷೆ ಮಾಡುವುದು,ವೀಣೆ ಸಾಂಬಯ್ಯನವರ ಮೀಸೆ ತೆಗೆಸುವುದಕ್ಕಾಗಿ ಯಾಗ ಮಾಡಿಸುವುದು, ಬಿಡಾರಂ ಕೃಷ್ಣಪ್ಪನವರ ಕಚೇರಿಯಲ್ಲಿ ರಸಿಕ (ಮೂರ್ಖ) ಶಿಖಾಮಣಿಯೊಬ್ಬನು ಚೀಟಿ ಕಳುಹಿಸುವುದು–ಇಂತಹ ಲಘು–ಗಂಭೀರ ಪ್ರಸಂಗಗಳು ಹಲವಾರಿವೆ. ಅವುಗಳಲ್ಲಿ ವಿಚಾರಯೋಗ್ಯವಾದವು ಕೆಲವಾದರೆ ಹಾಸ್ಯಪೂರ್ಣವಾದುವು ಇನ್ನೂ ಕೆಲವು ; ಕೌತುಕ ಪ್ರಚೋದಕವಾದವು ಮತ್ತೂ ಕೆಲವು.

ಗ್ರಂಥದಲ್ಲಿರುವ ಎಷ್ಟೋ ವಾಕ್ಯಗಳ ವಾಕ್ಯಸಂದೋಹಗಳ ಹಿನ್ನೆಲೆ–ಮುನ್ನೆಲೆಗಳನ್ನು ಅರಿತು ಓದಿದಾಗ ಮಧು ಬಿಂದುಗಳನ್ನು ಚಪ್ಪರಿಸಿದ ಹಾಗಾಗುತ್ತದೆ— "ನಾನು ನನ್ನ ತಾಯಿ ಭಾವಿಸಿಕೊಂಡಷ್ಟು ಸಾಧು ಪ್ರಾಣಿಯಾಗಿರಲಿಲ್ಲ." "ಬೆಳಗಿನ ಬಿರುಗಾಳಿ ಸಂಜೆಯ ತಂಗಾಳಿಯಾಯಿತು." "ನಮ್ಮ ಭಾಗಕ್ಕೆ ಮರಿ ಪಂಡಿತರೇ ಭಯಕೃದ್ಭಯನಾಶಕಃ" "ಹರಳೆಣ್ಣೆಯನ್ನು ಪ್ರತ್ಯಕ್ಷವಾಗಿ ಕುಡಿಸದೆಯೇ ಪ್ರಭುಗಳು ಪಾಠ

ಕಲಿಸಿದ್ದರು." "ಒಬ್ಬ ಅಕ್ಕಸಾಲಿಗ ತನ್ನ ಬಾಚಿಯಿಂದಲೇ ಎಲ್ಲರಿಗೂ ಕ್ಷೌರ ಮಾಡಿಸಿದ ನಂತೆ" "ಕೃಷ್ಣಮೂರ್ತಿರಾಯರ ಪಾತ್ರೆ ಚಪ್ಪರ ವರದಾಚಾರ್ಯರ ಕಂಪನಿಗೆ ಶಾಶ್ವತ ನೆಲೆಯಾಯಿತು." "ಭರ್ಜರಿಯಿಂದಲಿ ಗರ್ಜನೆ ಮಾಳ್ಪದು ದರ್ಜಿಯ ಮನೆಯಲಿ ಮಾರ್ಜಾಲ" "ಬಿಡುಗಡೆ ಹೊಂದಿದ ಆ ಟೋಪಿಗೂ ಪರಮಾನಂದವಾಗಿದ್ದಿರಬೇಕು." ಇತ್ಯಾದಿ ಇತ್ಯಾದಿ.

ಆಚಾರ್ಯರ 'ನೆನಪು' ಗಳನ್ನು ಓದುತ್ತಾ ಹೋದಂತೆ ವಾಚಕ ಶ್ರೀಸಾಮಾನ್ಯ, ಅಕ್ಕಿ–ಸಕ್ಕರೆ-ಸಿಮೆಂಟು-ಸೀಮೆಎಣ್ಣೆಗಳ ಈ ನಿಷ್ಠುರ ಪ್ರಪಂಚವನ್ನು ಮರೆತು ಮೇಲು ಮೇಲಕ್ಕೆ ಏರುತ್ತಾನೆ, ಒಂದು ಯಕ್ಷಲೋಕದಲ್ಲಿ ಬಂದು ಇಳಿಯುತ್ತಾನೆ. ನೂರಾರು ವರ್ಷಗಳ ಹಿಂದಿನ ಮಹಾ ಮೈಸೂರಿನ ವಿಭವಶ್ರೀ ಅವನಿಗೆ ಕಣ್ಣಿಗೆ ಕಟ್ಟುತ್ತದೆ. "ಒಂದು ರೂಪಾಯಿಗೆ ಹದಿನಾರು ಸೇರು ಅಕ್ಕಿ, ಏಳೂವರೆ ಸೇರು ಬೆಣ್ಣೆ....ಒಂದು ದುಡ್ಡಿಗೆ ಒಂದು ಸೇರು ಥಂಡಿ ಮೊಸರು ಬರುತ್ತಿದ್ದ ಕಾಲದಲ್ಲಿ" ವಿಹರಿಸಿ, "ಹಾಲು ಮೊಸರಿನಲ್ಲಿ ಕೈ ತೊಳೆಯುತ್ತಾನೆ-ಓದಿ ಮುಗಿಸಿದಾಗ "ತೇ ಹಿ ನೋ ದಿವಸಾ ಗತಾಃ" ಎಂದು ಬಿಸಿಯು ಸಿರು ಬಿಡುತ್ತಾನೆ. "ಅಯ್ಯೋ ಹೋಯಿತೆ ಆ ನಾಕ ಆಯ್ಯೋ ಬಂದಿತೆ ಈ ಲೋಕ" ಎಂದು ಕೆಳಗಿಳಿಯುತ್ತಾನೆ.

"A good book is the prveious life blood of a master spirit" ಎನ್ನುವ ಮಾತಿದೆ. ಮೈಸೂರು ವಾಸುದೇವಾಚಾರ್ಯರದ್ದು ಕಾಲ ದೇಶಗಳನು ಮೀರಿ ನಿಲ್ಲಬಲ್ಲ ಧೀರ ಚೇತನ. ಅಂಥ ಚೇತನದ ಅನುಭವ ಕಥನವೇ "ನೆನಪುಗಳು". ಅಲ್ಲಿಯ ಪಂಕ್ತಿ ಪಂಕ್ತಿಗಳಲ್ಲೂ ಆ ಚೇತನದ ಜೀವರಸ ಹರಿದಾಡುತ್ತಿದೆ. ಕುತೂಹಲದಿಂದ ಬಳಿಸಾರಿ, ಶ್ರದ್ಧೆಯಿಂದ ಕೈಗೆತ್ತಿ ಮತ್ತೆ ಮತ್ತೆ ಓದಿ ಸಾಲು ಸಾಲುಗಳನ್ನೂ ಚಪ್ಪರಿಸಿ ಸುಖಿಸಬಹುದಾದ ಪುಸ್ತಕ-"ನೆನಪುಗಳು".

## ೪. ಕೊರಡ್ಕಲ್ ಶ್ರೀನಿವಾಸರಾಯರ 'ನಂದಾದೀಪ'

ಶ್ರೀ ಸೇಡಿಯಾಪು ಕೃಷ್ಣಭಟ್ಟರು ತಮ್ಮ 'ಪಳಮೆಗಳು' ಎಂಬ ಕಥಾಸಂಗ್ರಹದ ಮುನ್ನುಡಿಯಲ್ಲಿ ಕೆಲವು ಮನನೀಯ ವಿಚಾರಗಳನ್ನು ಹೇಳಿದ್ದಾರೆ:

'ಸಣ್ಣ ಕತೆ' ಗೊಂದು 'ತಂತ್ರ' ವೆನ್ನಿಸಿಕೊಳ್ಳುವ ಲಕ್ಷಣ (ಟೆಕ್ನಿಕ್) ವುಂಟೆಂದು ವಿಮರ್ಶಕರು ಬರೆದುದನ್ನು ಕಂಡಿದ್ದೇನೆ.

'ನಾನು ಸಣ್ಣವನಾಗಿದ್ದಾಗ ಲಕ್ಷಣಬದ್ಧತೆಯಿಂದ ನಮ್ಮ ರಚನಾ ಪ್ರಪಂಚ ಹಾಳಾಗಿ ಹೋಯಿತು. ಉದಧಿ ಪುರಾಧಿಪ ಸುತ ಮಂತ್ರಿ ದೂತಗಮನಾಜಿಗಳಿಂದ ನಮ್ಮ ಪ್ರತಿಭಾ ಶರಧಿ ಬತ್ತಿತು' ಎಂದು ವಿಮರ್ಶಕರೆಲ್ಲ ಬೊಬ್ಬಿಡುವುದನ್ನು ಕೇಳಿದ್ದೇನೆ; ನಾನೂ ತಲೆದೂಗಿ ಕುಳಿತಲ್ಲಿಂದಲೇ 'ಮನು' ಎಂದಿದ್ದೇನೆ. ಹಾಗಾದರೆ ಇಂದಿನ ತಂತ್ರಗಳಿಂದ ನಮ್ಮ ಸಣ್ಣ ಕಥೆ ಕುಂಠಿತವಾಗಲಾರದೇ ?

ಸಣ್ಣ ಕತೆ ಎಂದರೆ ದೊಡ್ಡದಲ್ಲದ ಕತೆ— ಎಂದಿಷ್ಟೇ ಸರಳವಾದ ಅರ್ಥವನ್ನಿಟ್ಟುಕೊಂಡರೆ ಹಿತವೆಂದು ನನಗೆ ತೋರುತ್ತದೆ...ಇಷ್ಟು ಲಲಿತವಾದ ಹೆಸರಿಗೆ ಅಷ್ಟೊಂದು ನಿರ್ಬಂಧವೇಕೆ ?

ಅಥವಾ, ಯಾವುದೋ ಒಂದು ದೇಶದವರು ತಮ್ಮ ಸಣ್ಣ ಕತೆಗಳಿಗೆ ಹಾಕಿಕೊಂಡ ನಿರ್ಬಂಧಗಳನ್ನು ನಾವೂ ಹಾಕಿಕೊಳ್ಳಬೇಕೆಂದಿಲ್ಲ. ಚೀನೀ ಹುಡುಗಿ ತನ್ನ ಅಡಿಗಳನ್ನು ಒತ್ತಿ ಕಟ್ಟಿ ಸುಂದರಿಯೆನ್ನಿಸಿಕೊಂಡರೆ, ನಮ್ಮ ಹುಡುಗಿಯ ತಳಿರಡಿಯನ್ನು ನಾವು ನೋಯಿಸಬೇಕಾಗಿಲ್ಲ.

ಈ ನನ್ನ ಬಗೆ ಲಾಕ್ಷಣಿಕರಿಗೆ ಒಪ್ಪದಿದ್ದರೆ, ಇವುಗಳನ್ನು ಯಾರೂ 'ಸಣ್ಣ ಕತೆ' ಗಳೆಂದು ಕರೆಯುವುದು ಬೇಡ; ಬರಿಯ "ಕತೆ" ಗಳೆಂದೇ ಕರೆಯಲಿ; ನನಗೆ ತೃಪ್ತಿ."

— ಶ್ರೀ ಕೊರಡ್ಕಲ್ ಶ್ರೀನಿವಾಸರಾಯರ 'ನಂದಾ ದೀಪ' ವೆಂಬ, 'ಹನ್ನೊಂದು ಕತೆಗಳ ಸಂಗ್ರಹ' ವು 1938 ರಲ್ಲಿ ಮೊದಲ ಬಾರಿಗೆ ಮುದ್ರಣವಾಯಿತು. 'ವಾಗ್ದೇವಿಯ ಪೂಜೆಗೆ ನೆರವಾಗು' ವಂತೆ ಅಲ್ಲಲ್ಲಿಂದ ಕರೆ ಬಂದಾಗ ಕೊರಡ್ಕಲ್ಲರು ಉರಿಸಿ, ಅನಂತರ ಅವುಗಳಲ್ಲಿ 'ಕೆಲವನ್ನು ಆಯ್ದು ತುಸು ತಿಕ್ಕಿ ಪೋಣಿಸಿ'ದ, 'ದೀಪ ಮಾಲೆ'ಯೆ ಈ 'ನಂದಾದೀಪ.' ಶ್ರೀ ಸೇಡಿಯಾಪು ತಮ್ಮ ಸಣ್ಣ ಕತೆ (ಅಥವಾ ಕತೆ) ಗಳ ಬಗ್ಗೆ ಹೇಳಿದ್ದೆಲ್ಲವನ್ನೂ ಈ ಸಂಗ್ರಹದಲ್ಲಿರುವ ಕತೆಗಳಿಗೂ ಯಥಾವತ್ತಾಗಿ ಅನ್ವಯಿಸಬಹುದು. ಕತೆಗಳು 'ತಂತ್ರ' ಬದ್ಧವಾಗಿವೆಯೋ ಇಲ್ಲವೋ ಎಂಬ ಚರ್ಚೆಗಿಳಿಯದೆ 'ಕಥಾ ಯಾಂ ಸರಸ ವಸ್ತು' ಎಂಬ ಸರಳವೂ ಸಾಮಾನ್ಯವೂ ಆಗಿರುವ ಲಕ್ಷಣವನ್ನು ಕಣ್ಣ ಮುಂದಿರಿಸಿಕೊಂಡರೆ 'ನಂದಾದೀಪ' ದಲ್ಲಿರುವ ಕತೆಗಳೆಲ್ಲ ನಮಗೆ ಸಂತೋಷವನ್ನು ನೀಡಬಲ್ಲವು.

'ನಂದಾದೀಪ' ದ ಹನ್ನೊಂದು ಕತೆಗಳನ್ನು ನಾಲ್ಕು ಗುಂಪುಗಳಾಗಿ ಮಾಡಬಹುದು.

1. 'ಧನಿಯರ ಸತ್ಯನಾರಾಯಣ' ಮತ್ತು 'ದೊಡ್ಡವರ ವಜ್ರ'.

2. 'ಅಜ್ಜಯ್ಯನ ಮದುವೆ' 'ಮನೆಯಲ್ಲಿ ಭೂತ ಸಂಚಾರ' ಮತ್ತು 'ವಾರಾಂಟ್'.

3. 'ನಂದಾದೀಪ' 'ಬಾಲಕೃಷ್ಣನಿಗೆ ನೈವೇದ್ಯ' ಮತ್ತು 'ಪಳ್ಪಟ ನಾಯ್ಕ.'

4. 'ದೇವಸ್ಥಾನ ಪ್ರವೇಶ' 'ಆಪತ್ತಿನಲ್ಲಿಯೂ ಸಂಪತ್ತು' ಮತ್ತು 'ಆನಂದನ ಬಿ.ಎ. ಡಿಗ್ರಿ'.

— ಇದು ಕಥಾವಸ್ತುಗಳನ್ನು ಅನುಸರಿಸಿ ಮಾಡಿರುವ ಸ್ಥೂಲವಾದ ವರ್ಗೀಕರಣ.

ಮೊದಲ ಗುಂಪಿನ 'ಧನಿಯರ ಸತ್ಯನಾರಾಯಣ.' ಮತ್ತು ದೊಡ್ಡವರ ವಜ್ರಗಳಲ್ಲಿ ಆಯಾ ಕಥೆಗಳ ಪ್ರಮುಖ ಪಾತ್ರಗಳಿಗೆ ಸಂದರ್ಭವಶಾತ್ ಉಂಟಾಗುವ ಮಾನಸಿಕ ಆಘಾತ, ನಿರಾಶೆಗಳು ಹೃದಯಂಗಮವಾಗಿ ವಿವೃತವಾಗಿವೆ. ಧನಿಯರ ಸತ್ಯನಾರಾಯಣ ಮಕ್ಕಳ ಮನೋಧರ್ಮವನ್ನು ಚಿತ್ರಿಸಿ ಕರುಳು ಹಿಂಡುವ ಕತೆ. ಬೂದ ತುಕ್ರಿಯರೆಂಬ ಇಬ್ಬರು ಬಡ ಮಕ್ಕಳು ತಮ್ಮ ಅಜ್ಜಿ ಮನೆಯಿಂದ ತುಂಬ ಕಷ್ಟಪಟ್ಟು ಹೊತ್ತು ತಂದಿದ್ದ ರಸ ಬಾಳೆಯ ಕಂದನ್ನು ಅಷ್ಟೇ ಕಷ್ಟದಿಂದಲೂ ಆಸ್ಥೆಯಿಂದಲೂ ನೀರೆರೆದು ಬೆಳೆಸುತ್ತಾರೆ. ಆ ಕಂದು ದೊಡ್ಡದಾಗಿ, ಗೊನೆ ಬಿಟ್ಟಾಗ ಖುಶಿಯಿಂದ ಕುಣಿಕುಣಿದು, ಇನ್ನೇನು ಹಣ್ಣು ತಿಂದು ಬಾಯಿ ಚಪ್ಪರಿಸಬೇಕೆಂಬುವಷ್ಟರಲ್ಲಿ ಆ ಗೊನೆ ಧನಿ ನಾಗಪ್ಪಯ್ಯನ ಕಣ್ಣಿಗೆ ಬೀಳುತ್ತದೆ. ಮಕ್ಕಳಿಗೆ ಗೊತ್ತಾಗದಂತೆ ಗೊನೆ ಧನಿಯರ ಮನೆ ಸೇರುತ್ತದೆ. ಅದು ಸತ್ಯನಾರಾಯಣ ನಿಗೆ ನೈವೇದ್ಯವಾಗಿ ಮಕ್ಕಳ ಬಾಯಿಗೆ ಮಣ್ಣಾಗುತ್ತದೆ. ಕಥೆಯ ಆರಂಭ, ಬೆಳವಣಿಗೆ, ಮುಗಿತಾಯಗಳಾಗಲೀ, ಮಕ್ಕಳ ಆಶೆ ಆಕಾಂಕ್ಷೆಗಳು ರಸಬಾಳೆಯ ಕಂದಿನಂತೆಯೇ ಬೆಳೆದು, ಹೂಬಿಟ್ಟು, ಕಾಯೊಡೆದು ಹಣ್ಣಾಗಿ ಕೊನೆಗೆ ಮಣ್ಣಿಗೆ ಬಿದ್ದು ಹುಡಿಗೂಡಿ ಹೋಗುವುದಾಗಲೀ ಅತ್ಯಂತ ಹೃದಯ ಸ್ಪರ್ಶಿಯಾಗಿದೆ. ಮಕ್ಕಳಿಗೆ ತಿಳಿಯದ ಹಾಗೆ ತಂದೆ ತೌಡ ರಸಬಾಳೆ ಗೊನೆಯನ್ನು ಧನಿಯ ಮನೆಗೆ ಸಾಗಿಸಿದಾಗ, ತಾಯಿ ದೆಯ್ಯಿ 'ಕಾಳ ಬೆಕ್ಕು ಗೊನೆಯನ್ನು ತಿಂದು ಹೋದ' ಸುಳ್ಳು ಕತೆ ಹೇಳುವಳು. ಆಗ ಮೂರನೆಯ ಮಗು ದೂಮ, "ಅ–ಆ-ಅ-ಆ-ಕಾಲ ಬೆಬೆಬ್ಬೆಕ್ಕೂ ಸ-ಸ-ಸ್ಸತ್ತೇ ಒ-ಓಗ್ಲೀ" ಎಂದು ಹಿಡಿ ಹಿಡಿ ಶಾಪ ಹಾಕುವುದು ಅದೆಷ್ಟು ಸಹಜವಾಗಿದೆ! ಸುಳ್ಳಿನ ಕತೆಯನ್ನು ನಂಬಿದ ದೊಡ್ಡ ಮಕ್ಕಳು-ಬೂದ ತುಕ್ರಿಯರು-ನಿರಾಶೆಯಿಂದಲೂ, ಸಿಟ್ಟಿನಿಂದಲೂ ಸಿಡಿದು, ಗೊನೆ ಹಾಕಿದ ಬಾಳೆಯ ಸಣ್ಣ ಕಂದುಗಳನ್ನೆಲ್ಲ "ಒಂದೊಂದಾಗಿ ಹಿಡಿ ಹಿಡಿದು, ಬಗ್ಗಿಸಿ, ತಿರು ತಿರುವಿ ಮುರಿಯುತ್ತಾ, 'ಇ-ಇ-ಇ-ಇ-ಇವು ಗೊನೆ ಹಾಕೋದೋೞ ಬೇಡಾೞ ಆ-ಆ ಆ ಸತ್ತನಾರ್ಣಾೞ ತಿ-ತಿತಿ-ತಿ-ತಿ-ನ್ನೋದೋೞ ಬೇಡಾ" ಎಂದು ಹುಚ್ಚೆದ್ದು ಕುಣಿಯು ವುದು ಅದೆಷ್ಟು ನಾಟಕೀಯವಾಗಿದೆ; 'ಸತ್ಯನಾರಾಯಣ' ಎಂಬುದು ಮಕ್ಕಳ ಬಾಯಲ್ಲಿ 'ಸತ್ತನಾರ್ಣ' ಆಗಿರುವುದು, ಅದೆಷ್ಟು ಔಚಿತ್ಯಪೂರ್ಣವಾಗಿದೆ!

'ಧನಿಯರ ಸತ್ಯನಾರಾಯಣ' ಕೊರಡ್ಕಲ್ಲರ ಕಥಾ ಮಾಲಿಕೆಯಲ್ಲಿ ತೋರ ಮಾಣಿಕ; ಕನ್ನಡದ ಉತ್ಕೃಷ್ಟಕಥೆಗಳಲ್ಲಿ ಒಂದೆನ್ನಬಹುದಾದದ್ದು. ಕೆಲವು ವರ್ಷಗಳ ಹಿಂದೆ 'ಕಸ್ತೂರಿ' ಮಾಸ ಪತ್ರಿಕೆಯು ಮರೆತು ಹೋಗಿರುವ ಕೆಲವು ಒಳ್ಳೆಯ ಕತೆಗಳನ್ನು

ಆರಿಸಿ ತಿಂಗಳು ತಿಂಗಳು ಪ್ರಕಟಿಸಿದಾಗ ' ಧನಿಯರ ಸತ್ಯನಾರಾಯಣ 'ವನ್ನೂ ಆ ಸರಣಿಯಲ್ಲಿ ಸೇರಿಸಿದ್ದು ಗಮನಾರ್ಹವಾಗಿದೆ.

' ದೊಡ್ಡವರ ವಜ್ರ ' ವೆಂಬುದರ ವಸ್ತು ಸಹ ಮಾರ್ಮಿಕವಾದದ್ದೇ. ಆದರೆ ಅದು ಫ್ರೆಂಚ್ ಕತೆಗಾರ ಮೊಪಾಸಂತನ ಕಥೆಯನ್ನು ಆಧರಿಸಿ ರಚಿತವಾದದ್ದು. ಅದೇ ಕಥಾವಸ್ತುವನ್ನು ಇತರ ಲೇಖಕರು ಕನ್ನಡಕ್ಕೆ ತಂದಿದ್ದರೂ ಕೊರಡ್ಕಲ್ಲರ ಕತೆ ವಿಶಿಷ್ಟವಾಗಿಯೇ ಸ್ವತಂತ್ರವೆಂದು ತೋರುವಂತೆಯೇ ಇದೆ. ಐಶ್ವರ್ಯವಂತರ ನಡುವೆ ತಾನೂ ದೊಡ್ಡವಳೆನಿಸಿ ಮೆರೆಯಬೇಕೆಂಬ ಭ್ರಮಾಧೀನೆಯಾದ ಒಬ್ಬಾಕೆ ಹೆಣ್ಣು ತನ್ನ ಗೆಳತಿಯಿಂದ ' ವಜ್ರದ ಕಮಲ ' ಗಳನ್ನು ಎರವಲಾಗಿ, ಪಡೆದು ಧರಿಸಿಕೊಂಡು ಶ್ರೀಮಂತ ವಿವಾಹವೊಂದರಲ್ಲಿ ಪಾಲುಗೊಂಡು, ಸಂಭ್ರಮದಿಂದ ಓಡಾಡಿ ತನ್ನ ಮನೆಗೆ ಹಿಂದಿರುಗಿದಾಗ ಒಂದು ವಜ್ರದ ಕಮಲ ಕಾಣೆಯಾಗಿರುತ್ತದೆ. ಆ ನಷ್ಟವನ್ನು ತುಂಬಬೇಕಾದರೆ ಆ ಹೆಣ್ಣು ಮತ್ತು ಹೆಣ್ಣಿನ ಗಂಡ ಇಬ್ಬರೂ ' ಅರೆ ಹೊಟ್ಟೆಯುಂಡು ಕಿರಿಬಟ್ಟೆಯುಟ್ಟು ' ಬಹು ಕಾಲ ದುಡಿಯಬೇಕಾಗುತ್ತದೆ. ಅಷ್ಟಾದರೂ ಎರವಲು ತಂದದ್ದು ನಿಜವಾದ ವಜ್ರವಲ್ಲ. 'ಕೃತಕ ಕೆಮಿಕಲ್ ಡೈಮಂಡ್ಸ್' ಎಂದು ಕೊನೆಯಲ್ಲಿ ಗೊತ್ತಾದಾಗ " ದೊಡ್ಡವರ ವಜ್ರ ! ದಳ್ಳಾಳಿಯ ಸುಳ್ಳು ವಜ್ರ ! ನನ್ನನ್ನು ಗೋಳುಗುಡಿಸಿ ಬಾಳುಗೆಡಿಸಿದ ಆ ಹಾಳು ವಜ್ರ!" ಎಂದು ಆ ಹೆಣ್ಣು ಗಳಗಳನೆ ಅಳುವ ಸದ್ದು ವಾಚಕರ ಹೃದಯ ಕುಹರದಲ್ಲಿ ಪ್ರತಿಧ್ವನಿಸುತ್ತದೆ.

ಎತ್ತರದ ಬಂಗ್ಲೆಗಳಲ್ಲಿ ಓಡಾಡಿ, ಕಾರುಗಳಲ್ಲಿ ಕೂತು ಹಾರಾಡುವವರನ್ನು ಕಂಡು ಬಡವರು ತಾವೂ ಅವರಂತಾಗಬೇಕೆಂದು ಎಟುಕದ ಆಶೆಗಳಿಗೆ ಕೈಚಾಚಿದರೆ ಇದ್ದುದನ್ನೂ ಕಳಕೊಂಡು ಕೊರಗಬೇಕಾಗುತ್ತದೆ ಎಂಬುದನ್ನು ಈ ಕತೆ ಸೊಗಸಾಗಿ ಮನಗಾಣಿಸುತ್ತದೆ.

ಎರಡನೆಯ ಗುಂಪಿನ ಅಜ್ಜಯ್ಯನ ಮದುವೆ, ಭೂತ ಸಂಚಾರ, ವಾರಾಂಟಗಳು ಹಾಸ್ಯ ಪ್ರಧಾನವಾದ ಕತೆಗಳು. ಎಂದರೆ ಇವುಗಳಲ್ಲಿ ಹಾಸ್ಯವೊಂದೇ ಎಂದಲ್ಲ ; ಉಳಿದವುಗಳಲ್ಲಿ ಹಾಸ್ಯವಿಲ್ಲ ಎಂದೂ ಅಲ್ಲ. ಈ ಕತೆಗಳಲ್ಲಿ ಹಾಸ್ಯವು ಹೆಚ್ಚಾಗಿಯೇ ಇದೆ. ' ಅಜ್ಜಯ್ಯನ ಮದುವೆ ' ಯಲ್ಲಿ ಲೇಖಕರು ವೃದ್ಧ ವಿವಾಹ ಪದ್ಧತಿಯನ್ನು ಹಾಸ್ಯಪೂರ್ಣವಾಗಿ ಖಂಡಿಸಿದ್ದಾರೆ. ' ಮನೆಯಲ್ಲಿ ಭೂತ ಸಂಚಾರ ' ಎಂಬುದರಲ್ಲಿ ಸ್ವಾರ್ಥಿಯೊಬ್ಬನು ತನಗೆ ಅಡವಾಗಿ ಬಂದ ಮನೆಯನ್ನು ' ಭೂತ ಸಂಚಾರವಿರುವ ಮನೆ'ಯೆಂಬ ಅಪಖ್ಯಾತಿಗೆ ಪಕ್ಕಾಗಿಸಿ ದಕ್ಕಿಸಿಕೊಳ್ಳಲು ಹವಣಿಸಿ, ಕೊನೆಗೆ ಆ ಮನೆಯನ್ನು ಬಾಡಿಗೆಗೆ ಹಿಡಿದ ನಿವೃತ್ತ ಪೋಲಿಸ್ ಅಧಿಕಾರಿಯಿಂದ–ರಾತ್ರಿ ಹೊತ್ತು ಭೂತದ ಬದಲು ತಾನೇ–ದೊಣ್ಣೆಯೇಟು ತಿನ್ನಬೇಕಾಗುವ ರಹಸ್ಯವನ್ನು ನಕ್ಕು ನಕ್ಕು ಹೊಟ್ಟೆ ಹುಣ್ಣಾಗುವಂತೆ ಬಿಡಿಸಿದ್ದಾರೆ. ' ವಾರಾಂಟ್ ' ನಲ್ಲಿ ಗಾಡಿಯ ತಿಮ್ಮ ಕೋರ್ಟುಪೇದೆಯೊಬ್ಬನಿಗೆ ' ಚಳ್ಳೆಕಾಯಿ ತಿನ್ನಿಸು 'ವುದನ್ನು ಆಡುನುಡಿಯಲ್ಲಿ ಕಥಿಸಿದ್ದಾರೆ.

ನಂದಾದೀಪ, ಬಾಲಕೃಷ್ಣನಿಗೆ ನೈವೇದ್ಯ, ಪಳ್ಪಟ ನಾಯ್ಕ ಎಂಬ ಮೂರನೇ ಗುಂಪಿನ ಮೂರು ಕತೆಗಳಲ್ಲಿ ಮೊದಲನೆಯದು ಜನಾರ್ದನ ಸೇವೆಯೊಂದಿಗೆ ಜನತಾ

ಸೇವೆಯೂ ಸೇರಿಕೊಂಡರೆ ಫಲ ಅಧಿಕತರವಾಗುತ್ತದೆ ಎಂಬುದನ್ನೂ ಎರಡನೆಯದು ಹಸಿದವರನ್ನು ಕಂಡಾಗ ಅಂತಃಕರಣ ಕರಗಿ ಒಂದು ತುತ್ತು ಅನ್ನ ಹಾಕಿದರೆ ಅದೇ ಬಾಲ ಕೃಷ್ಣನಿಗೆ ನೈವೇದ್ಯವಾಗುತ್ತದೆ- 'ಜಂಗಮಕ್ಕೆರೆದರೆ ಸ್ಥಾವರ ನೆನೆಯುತ್ತದೆ' –ಎಂಬ ತತ್ವವನ್ನೂ ಮೂರನೆಯದು ನಿರ್ಮಲ ನಿಷ್ಕಾಮ ಭಕ್ತಿಗೆ ದೈವಾನುಗ್ರಹ ಸುಲಭ ಸಾಧ್ಯ ವೆಂಬುದನ್ನೂ ತಿಳಿಸುತ್ತದೆ.

ನಾಲ್ಕನೆಯ ಗುಂಪಿನ ಕತೆಗಳೆಲ್ಲ ಬಹುಮಟ್ಟಿಗೆ 'ಪ್ರಚಾರಪರ' ವೆನ್ನಬಹುದಾ ದಂಥವು. 'ದೇವಸ್ಥಾನ ಪ್ರವೇಶ'ವು ಹೆಸರೇ ಸೂಚಿಸುವಂತೆ, ನಿಮ್ನ ವರ್ಗದ ಬಡ ಹಿಂದೂವಿಗೆ ದೇವಸ್ಥಾನ ಪ್ರವೇಶ ನಿಷಿದ್ಧವಾಗಿದ್ದರೆ ಅದೇ ಹಿಂದೂ ಕ್ರಿಶ್ಚಿಯನ್ ಆದಾಗ, ಅಧಿಕಾರ ಗೌರವ ಬಂದಾಗ ಪ್ರವೇಶ ಸಾಧ್ಯವಾಗುವುದನ್ನು ವ್ಯಂಗ್ಯವಾಗಿ ವಿವರಿಸುತ್ತದೆ. 'ಆಪತ್ತಿನಲ್ಲೂ ಸಂಪತ್ತು'–'ಯೋಗಕ್ಷೇಮಂ ವಹಾಮ್ಯಹಂ' ಎನಿಸಿರುವ ಜೀವವಿಮಾ ಪ್ರಚಾರವನ್ನು ಮಾಡುತ್ತದೆ. 'ಆನಂದನ ಬಿ. ಎ. ಡಿಗ್ರಿ'–'ಗ್ರಾಜುಯೇಟನೆಂಬ ವಿದ್ಯಾ ಭಿಮಾನವನ್ನೂ ಬಿಟ್ಟು ಸಾಮಾನ್ಯ ಮಾನವನಂತೆ ಪ್ರಪಂಚದಲ್ಲಿಳಿದು 'ದುಡಿದರೆ ಮಾತ್ರ ಹೊಟ್ಟೆಗೆ ಹಿಟ್ಟು, ಒಡಲಿಗೆ ಉಡುಪು' ಎಂಬ ನೀತಿಯನ್ನೂ ವೃತ್ತಿ ಗೌರವದ ಹಿರಿಮೆ ಯನ್ನೂ ಸಾರುತ್ತದೆ.

ಮೊದಲೇ ಹೇಳಿರುವಂತೆ ಸಂಗ್ರಹದ ಕಥೆಗಳೆಲ್ಲವೂ ಸರಳ ಸುಲಭವಾದವುಗಳು. 'ಫ್ಲಾಶ್ ಬ್ಯಾಕ್', 'ಸೈಕೋ ಎನಾಲಿಸಿಸ್' ಮುಂತಾದ 'ಟೆಕ್ನಿಕ್'ಗಳ ಅಬ್ಬರ-ಗದ್ದಲಗಳು ಇಲ್ಲಿಲ್ಲ. 'ಕತೆ ಹೇಳುವುದೇ ಮುಖ್ಯ' ಎಂಬ ಸುಲಭ ಸೂತ್ರವನ್ನು ಹಿಡಿದು ಇಲ್ಲಿಯ ಕಥೆಗಳು ಹೊರಟಿರುವುದರಿಂದ, ಅಕೃತಕವೂ ಅಕುಟಿಲವೂ ಆಗಿರುವ ಅವುಗಳ ಚೆಲುವನ್ನು ಕಂಡು ಕೊಂಡಾಡಲೇಬೇಕೆನಿಸುತ್ತದೆ.

'ನಂದಾದೀಪ'ದ ಕತೆಗಳಲ್ಲಿ ವಸ್ತುಗಳ ತಾರತಮ್ಯದಿಂದಾಗಿ ಅಥವಾ ಕವಿ ರಾಘ ವಾಂಕನು ಹೇಳಿದಂತೆ, ಲೇಖಕನಲ್ಲಿ, "ರಸಾವೇಶ ಮರಹಾಲಸ್ಯ"ಗಳಿಂದಾಗಿ " ಯೋಗ್ಯತೆ ಯಲ್ಲೂ ತರ-ತಮವಿರಬಹುದು. ಆದರೆ ಎಲ್ಲ ಕತೆಗಳಲ್ಲೂ ಸಾಮಾನ್ಯವಾಗಿರುವ ಪರಿ ಷ್ಕಾರವಾದ ಭಾಷೆ, ಹೃದಯಂಗಮವಾದ ಶೈಲಿಗಳನ್ನು ಕಡೆಗಣಿಸಲು ಸಾಧ್ಯವೇ ಇಲ್ಲ. ('ವಾರಂಟ್' ಎಂಬುದರಲ್ಲಿ ಮಾತ್ರ ಅಲ್ಲಿಯ ಸನ್ನಿವೇಶಕ್ಕೆ ತಕ್ಕಂತೆ ಆಡುನುಡಿಯ ಬಳಕೆಯಾಗಿದೆ) ಅಲ್ಲಲ್ಲಿ ಮೃದುವಾದ ಹಾಸ್ಯ, ಅಲ್ಲಲ್ಲಿ ನವಿರಾದ ವ್ಯಂಗ್ಯ ; ಕೆಲವೊಮ್ಮೆ ಮೋಹಕವಾದ ವರ್ಣನೆ, ಕೆಲವೊಮ್ಮೆ ಕಣ್ಣಿಗೆ ಕಟ್ಟುವ ಸ್ವಭಾವ ಚಿತ್ರ ; ಆಗಾಗ ಕುಣಿದು ಕುಪ್ಪಳಿಸುವ ಪುಟ್ಟ-ಪುಟ್ಟ ವಾಕ್ಯಗಳು-ಹೀಗೆ ಕೊರಡ್ಕಲರು ಓದುಗರನ್ನು ಮೆಚ್ಚಿಸು ತ್ತಾರೆ. ಉದಾಹರಣೆಗಾಗಿ 'ಬಾಲಕೃಷ್ಣನಿಗೆ ನೈವೇದ್ಯ :' ಈ ವರ್ಣನೆಯನ್ನು ನೋಡಿ. "....ರಾಜನ್ಮನಲ್ಲಿ ಜಾಜಿಯಿದೆ, ಶಾರದೆಯಲ್ಲಿ ಪಾರಿಜಾತ ಸಿಗಬಹುದು, ಮಂದಾರಕ್ಕೆ ಇಂದಿರಕ್ಕನಲ್ಲಿಗೇ ಹೋಗಬೇಕು. ಗದ್ದೆಯ ರಾಧಮ್ಮ ಕೇದಿಗೆ ತೆಗೆದಿಡುವಳು....ಜಲಜ ನಲ್ಲಿ ಮಲ್ಲಿಗೆ, ಕುಪ್ಪನಲ್ಲಿ ಚಂಪಕ, ಕಾವನಲ್ಲಿ ಸೇವಂತಿಗೆ, ಲೀಲನಲ್ಲಿ ತುಳಸಿ ಇದ್ದೇ ಇವೆ..." ರತ್ನಾಕರ ವರ್ಣಿಯ 'ಭರತೇಶ ವೈಭವ'ದ 'ಉಪ್ಪರಿಗೆ ಸಂಧಿ' ಯಲ್ಲಿರುವಂತೆ

ಈ ಭಾಗವೂ ಹೃದ್ಯವೆನಿಸುತ್ತದೆ. ಶೃಂಗಾರವರ್ಣನೆಗೊಂದು ಉದಾಹರಣೆ "...ರೂಪವತಿಯರೆಂದುಕೊಂಡವರ ಅಂದವೆಲ್ಲಿದೆಯೆಂದು ಪರಿಶೀಲಿಸಿದರೆ ಒಬ್ಬಳದು ಮೈಗಟ್ಟಿನ ಸೌಷ್ಠವದಲ್ಲಿ, ಇನ್ನೊಬ್ಬಳದು ಬಿಳಿಗೆಂಪಿನ ಮೈಬಣ್ಣದಲ್ಲಿ, ಮತ್ತೊಬ್ಬಳದು ಲಜ್ಜೆಯೇ ಬಲ್ಲ ಬೆಡಗಿನಲ್ಲಿ,....ತೆರೆಯಂತೆ.ಬಿದ್ದೇಳುವ ಕೊಂಕುಗೂದಲ ಸಿರಿಯಿಂದಾಗಲಿ, ಬಡನಡುವಿಂದಾಗಲಿ, ಬೆಡಗಿನ ನಡೆಯಿಂದಾಗಲಿ, ಅಲ್ಲವೇ ದುಂಡು ದುಂಡಾದ ಕೈಕಾಲುಗಳಿಂದಲೋ ಸಿಡಿದರೆ ಕೆನ್ನೀರು ಮಿಡಿಯಬಹುದೆಂಬ ಭ್ರಮೆಗೊಳಿಸುವ ತುಂಬಿದ ತನು ಕಾಂತಿಯಿಂದಲೋ....ಮನಮೋಹಿನಿಯರಾದವರು ಇರುವರು". ವಿವಾಹ ಸಂಭ್ರಮದ ಇದೊಂದು ಚಿತ್ರವನ್ನು ಪರಿಭಾವಿಸಿರಿ, "ಚಿಕ್ಕಯ್ಯನ ಚಪ್ಪರ, ಮುಕ್ಕಯ್ಯನ ಮಂಟಪ ಚಂದಯ್ಯನ ವಾಲಗ, ಮುಕ್ಕಣ್ಣನ ತಿಂಡಿ, ಸುಬ್ಬಣ್ಣನ ಅಡಿಗೆ, ಶೇಷಣ್ಣನ ಹೋಳಿಗೆ...." ಕೊನೆಯದಾಗಿ ಗೃಹಾಲಂಕಾರದ ಒಂದು ಸುಂದರ ದೃಶ್ಯ: "...ಕಳಕಳನೆ ನಗುವ ನೆಲ, ಮಲ್ಲಿಗೆಯ ಬಿಳುಪಿನ ಗೋಡೆ, ಅದಕ್ಕಂದವಾದ ಹಸುರು ರಂಗಿನ ಅಂಚು, ನಡುವೆ ಅಲ್ಲಲ್ಲಿ ಕಳೆಯೇರುವಂತೆ ಸಮ ಸೂತ್ರದಲ್ಲಿ ತೂಗಿಸಿರುವ ಚಿತ್ರ ಪಟಗಳು....ಅವುಗಳ ನಡುವೆ, ಸವಿಗಟ್ಟಾದ ಚೌಕಟ್ಟಿನಲ್ಲಿ ಬಿಗಿದ ಚಿತ್ರದಂತೆ ಕಂಗೊಳಿಸುತ್ತಿದ್ದಳು ಮಗಳಿಂದೊಡಗೂಡಿ ನಿಂತಿದ್ದ ಆ ನಡು ಹರೆಯದ ಸಡಗರವಳಿಯದ ತಾಯಿ."

ಹೊಸಬರಲ್ಲಿ ಅನೇಕರ ಕಣ್ಣಿಗೆ 'ನಂದಾದೀಪ' ಬಿದ್ದಿರಲಿಕ್ಕಿಲ್ಲ. ಆದರೆ ಹಳಬರಲ್ಲಿ ಹಲವರ ಮನಃಪಟಲದಲ್ಲಿ ಅದರ ಕಾಂತಿ ಇನ್ನೂ ಮಿಂಚುತ್ತಿದೆ. ಮಾನ್ಯ ಮಿತ್ರರೊಬ್ಬರೊಡನೆ 'ನಂದಾದೀಪ'ವನ್ನು ಪ್ರಸ್ತಾಪಿಸಿ, ಚರ್ಚಿಸುತ್ತಿದ್ದಾಗ ಉತ್ತೇಜಿತರಾದ ಅವರು 'ಮನೆಯಲ್ಲಿ ಭೂತ ಸಂಚಾರ' ಕಥೆಯ ಶ್ಲೇಷಾರ್ಥವಾದ ಸಮಾಪ್ತಿ ವಾಕ್ಯಗಳನ್ನು ನಿರರ್ಗಳವಾಗಿ ಕಂಠಪಾಠ ಹೇಳಿಬಿಟ್ಟರು–'ಅಂತೂ ನನ್ನ ತಲೆಯಿಂದ ತಪ್ಪಿತಲ್ಲ' ಎನ್ನುತ್ತಾ ಕೊಗ್ಗಣ್ಣ ಅಲ್ಲಿಂದೆದ್ದು ಹೋದರು. ಅದು ಎಂದರೆ ಯಾವುದು? ಆ ಮನೆಯೋ? ರಾಯರ ದೊಣ್ಣೆಯೋ?"

–ಇದೇ ಆ ವಾಕ್ಯ ಸಮೂಹ. ಈ ಪ್ರಸಂಗವು ಹಳೆಯ 'ನಂದಾದೀಪ'ದ ಜನಪ್ರಿಯತೆಗೊಂದು ಚಿಕ್ಕ ಕನ್ನಡಿ. ಕಾಲಾಂತರದಲ್ಲಿ ನಮ್ಮ ದೇವ ಮಂದಿರಗಳೆಲ್ಲ ವಿದ್ಯುದ್ದೀಪಾಲಂಕೃತವಾಗಿದ್ದರೂ ಕನ್ನಡ ತಾಯ 'ಮಹಮನೆ' ಯಲ್ಲಿ ಇಂತಹ ಹಲವು ಪುಸ್ತಕಗಳು ನಂದಾದೀಪವಾಗಿ ಇನ್ನೂ ಉರಿಯುತ್ತಿವೆ ಎಂಬುದನ್ನು ಕುತೂಹಲದಿಂದಲೂ ನಿರ್ಮಲ ಬುದ್ಧಿಯಿಂದಲೂ ಹುಡುಕಿ ನೋಡಿದರೆ ಕಂಡುಕೊಳ್ಳಬಹುದಲ್ಲವೇ?

## ಶಿ. ಸಿ. ಕೃಷ್ಣರ 'ಮುಗುದೆಯರ ಪತ್ರಗಳು'

'ಹೃದಯದ್ರವ್ಯ' ವಾದ ನವರಸಗಳಲ್ಲಿ ಶೃಂಗಾರವನ್ನು ನಮ್ಮವರು 'ರಸರಾಜ' ಎಂದು ವರ್ಣಿಸಿರುವುದುಂಟು ; 'ಸ್ತ್ರೀರೂಪಮೆ ರೂಪಂ, ಶೃಂಗಾರಮೆ ರಸಂ' ಎಂದು ಬಾಯಿ ಚಪ್ಪರಿಸಿದವರೂ ಇಲ್ಲದಿಲ್ಲ. ಶೃಂಗಾರವೆಂದೊಡನೆ 'ಉಟ್ಟ ಉಡುಗೆಯ ಸುಲಿ ಕೊಳ್ಳು' ವವರನ್ನು ಕವಿ ರತ್ನಾಕರ ಲೇವಡಿ ಮಾಡಿದ್ದೂ ಇದೆ. ಶೃಂಗಾರರಸಕ್ಕೆ ಸ್ಥಾಯಿಭಾವ ರತಿ ; 'ರತಿ'ಯ ವಿವಿಧ ಮುಖಗಳೆಂದರೆ ಪ್ರೇಮ, ಪ್ರಣಯ, ವಿರಹ, ವಿಹಾರ–ವಿಲಾಸ ಇತ್ಯಾದಿ ಇತ್ಯಾದಿ. ಸಂಭೋಗ, ವಿಪ್ರಲಂಭ ಎಂದು ಶೃಂಗಾರ ರಸ ಪ್ರವಾಹಕ್ಕೆ ಎರಡು ಸೀಳುಗಳು. ಎರಡರಲ್ಲಿ ವಿಪ್ರಲಂಭವೇ ಸ್ವೀಕರಣೀಯವೆಂಬುದು ರಸಜ್ಞರ ಅಭಿಪ್ರಾಯ. ಹೆಚ್ಚಿನ ನಮ್ಮ ಪ್ರಾಚೀನ ಕಾವ್ಯಗಳ ಪ್ರಧಾನವಸ್ತು ಒಂದೋ ಯುದ್ಧ ಇಲ್ಲವೇ ಪ್ರೇಮ ; ಪ್ರೇಮಕ್ಕಾಗಿ ಯುದ್ಧ, ಅಥವಾ ಪ್ರೇಮಯುದ್ಧ. ಪ್ರೇಮ ವೆಂದಾಗ ಶೃಂಗಾರವಿರಲೇಬೇಕು. ನಮ್ಮ ಕವಿಗಳ ಶಕ್ತಿಯಲ್ಲಿ ಬಹುಪಾಲು ವಿನಿಯೋಗ ವಾಗಿರುವುದು ಶೃಂಗಾರ ರಸಪ್ರತಿಪಾದನೆಯಲ್ಲಿ. ಇಂದಿನ ಕಾವ್ಯಗಳಲ್ಲೂ ಶೃಂಗಾರ ರಸ ವರ್ಷದ ಮಿಂಚು ಆಗಾಗ ಕಣ್ಣು ಕೋರೈಸುತ್ತಿರುತ್ತದೆ.

ಶೃಂಗಾರವು ಕವಿಗಳಿಗೂ ರಸಿಕರಿಗೂ ಎಷ್ಟು ಪ್ರಿಯವೋ ಕಾವ್ಯದಲ್ಲಿ ಅದರ ನಿರೂ ಪಣೆಯು ಅಷ್ಟೇ ಕಷ್ಟದಾಯಕ ; ಕತ್ತಿಯ ಬಾಯಲ್ಲಿ ಸಾಮು ಮಾಡಿದಷ್ಟು ಕಷ್ಟ. ಹೆಂಗಸರೂ ಮಕ್ಕಳೂ ನಾಚದಂತೆ, ಸಭ್ಯರು ಅಸಹ್ಯ ಪಡೆದಂತೆ, ಬಹಿರಂಗವಾಗಿ ವಿವರಿ ಸಲು ಸಂಕೋಚವಾಗದಂತೆ ಶೃಂಗಾರ ಚಿತ್ರಣವಿರಬೇಕು. ಇದಕ್ಕೆ ರುಚಿಶುದ್ಧಿ ಅತ್ಯಂತ ಅವಶ್ಯಕ. ಅದಿಲ್ಲದವರಿಗೆ ಶೃಂಗಾರವು ತೀಟೆ ತೀರಿಸಿಕೊಳ್ಳಲು ಒಂದು ಸಾಧನ, ಅದೊಂದು ಬಗೆಯ ತುರಿಕೆ, ಅಷ್ಟೆ. ಮಾಸ್ತಿಯವರು ಒಮ್ಮೆ ಹೇಳಿದಂತೆ, "ಗಂಗೆ ಯಲ್ಲಿ ತೀರ್ಥವಾಗುವ ಮಳೆನೀರು ಬಚ್ಚಲಲ್ಲಿ ಕೊಚ್ಚೆ ಆಗುತ್ತದೆಯಲ್ಲವೇ ?" --ಹೀಗಾಗ ಬಾರದು. ಅವರೇ ಇನ್ನೊಮ್ಮೆ ಹೇಳಿದಂತೆ, ಶೃಂಗಾರವೆಂದರೆ, 'ಮಗು ತಾಯ ಎದೆ ಯಲ್ಲಿ ಮುಖ ಮುಚ್ಚಿ ಹಾಲನ್ನು ಹುಡುಕುವಂತೆ' ಇರಬೇಕು. ಇದಕ್ಕೆ ಕವಿವರ್ಯ ಬೇಂದ್ರೆಯವರ 'ಬಡವ-ಬಡವಿ' ಕವಿತೆ, ಚಿಕ್ಕದಾದರೂ ಅತ್ಯುತ್ತಮ ಉದಾಹರಣೆ. ಅದರಲ್ಲೂ "ಹೊಟ್ಟೆಗಿತ್ತ ಜೀವಫಲವ, ತುಟಿಗೆ ಹಾಲು-ಜೇನು" ಎಂಬುದು ಶೃಂಗಾರ ರಸಿಕರಿಗೊಂದು ಕೈದೀಪ, ಊರುಗೋಲಿನಂತಿರುವ ಪಂಕ್ತಿ. ಪಂಡಿತ ಸಿ. ಕೃಷ್ಣ ಅವರ "ಮುಗುದೆಯರ ಪತ್ರಗಳು" ಎಂಬ ಸಂಕಲನದಲ್ಲಿ ಶೃಂಗಾರದ ಈ ಬಗೆಯ ಹೃದ್ಯ ನಿರೂ ಪಣೆಯನ್ನು ಕಾಣುತ್ತೇವೆ. ಅಲ್ಲಿರುವ ಪ್ರೇಮಪತ್ರಗಳನ್ನು ಓದುವಾಗ ಹೋಳಿಹುಣ್ಣಿ ಮೆಯ ಅಬ್ಬರದಂತಲ್ಲ, ಗ್ರೀಷ್ಮ ಋತುವಿನಲ್ಲಿ 'ಸಲಿಲಾವಗಾಹ' ಮಾಡಿದಂತೆ ಹಿತವಾ ಗುತ್ತದೆ.

ಕನ್ನಡದಲ್ಲಿ ಪತ್ರಸಾಹಿತ್ಯದ ಪರಿಚಯವನ್ನು ಇದೇ ಪತ್ರಿಕೆಯಲ್ಲಿ ಈ ಮೊದ

ಲೊಮ್ಮೆ ಸ್ಥೂಲವಾಗಿ ಮಾಡಿದ್ದಾಗಿದೆ.* ಆದುದರಿಂದ ಅದರ ಪುನರಾವರ್ತನೆ ಅನಾವಶ್ಯಕವೇ ಸರಿ. ಸತಿಪತಿಯರ ಅಥವಾ ಪ್ರಿಯ ಪ್ರೇಯಸಿಯರ ಹೃದ್ಗತವನ್ನು ಚಿತ್ರಿಸುವ ಪತ್ರಗುಚ್ಛಗಳೂ ಕನ್ನಡದಲ್ಲಿ ಪ್ರಕಟವಾಗದೆ ಇಲ್ಲ. 1945ರಲ್ಲಿ ಮೊದಲ ಬಾರಿ ಮುದ್ರಣವಾದ 'ಮುಗುದೆಯರ ಪತ್ರಗಳ' ವೈಶಿಷ್ಟ್ಯವನ್ನು ಗ್ರಂಥ ಪ್ರಕಾಶಕ ಶ್ರೀ ಕೂಡಲಿ ಚಿದಂಬರಂ ಹೀಗೆ ಹೇಳಿದ್ದಾರೆ: "ಸಂಸಾರದ ದಿನದಿನದ ಸಂಗತಿಗಳೂ ಮಾತು ಗಳೂ ಇಲ್ಲಿ ಚಿನ್ನದ ಮೆರಗನ್ನು ಪಡೆದಿದೆ. ಇಲ್ಲಿನ ಪ್ರಣಯ ಪ್ರಸಂಗಗಳಲ್ಲಿ ಹುಡುಗಾಟ ವಿಲ್ಲದೆ ಇಲ್ಲ. ಆದರೆ ಯಾವುದೂ ಮಿತಿ ಮೀರದಿದೆ .... ಪ್ರೇಮ ಗಾಂಭೀರ್ಯವನ್ನು ಕಳೆದುಕೊಂಡು ಎಲ್ಲೂ ಹುಚ್ಚಿದ್ದಿಲ್ಲ. ಉದ್ದಕ್ಕೂ ಸರಸಯುಕ್ತವಾದ ಸ್ವಾಭಾವಿಕತೆ, ಆಡಂಬರವಿಲ್ಲದ ವಿಲಾಸ, ನವುರಾದ ಪರಿಮಳ, ಸದ್ದಿಲ್ಲದ ಸಂತೋಷ." ಇದು ಕೃತಿಯ ಬಗ್ಗೆ ಪ್ರಕಾಶಕನ ಬರಿಯ ಉಪಚಾರದ ಮಾತಲ್ಲ; ಸಹೃದಯ ವಿಮರ್ಶೆಯಿಂದ ಸಾಧ್ಯ ವಾದ ಹಾರ್ದಿಕ ಶ್ಲಾಘನೆ. ಪತ್ರಗಳನ್ನೋದುವ ಯಾರಿಗೂ ಈ ಅನುಭವ ಆಗಿಯೇ ಆಗುತ್ತದೆ.

ಇಲ್ಲಿಯ ಪತ್ರಗಳಲ್ಲಿ ಮೂರು ಕಟ್ಟುಗಳಿವೆ—'ನನ್ನ ಕಾಗದಗಳು—ವಿಶಾಲಾಕ್ಷಿಗೆ' 'ವಿಶಾಲಾಕ್ಷಿಯ ಕಾಗದಗಳು' ಮತ್ತು 'ಇಂದಿರೆಯ ಕಾಗದಗಳು.' ಈ ಮೂರು ಕಟ್ಟು ಗಳನ್ನೂ ಬಿಡಿಸಿ ನೋಡಿದಾಗ, ದಾಂಪತ್ಯಜೀವನದ ಒಂದು ಸಮಗ್ರ ಸುಂದರ ಚಿತ್ರವು ಲಭಿಸುತ್ತದೆ. ಕವಿ ಕುವೆಂಪು ಹೇಳಿದಂತೆ 'ಸಂಸಾರ ಸಾಗರದಲ್ಲಿ ಹೆಣ್ಣು–ಗಂಡು ಒಂದರ ಕೊರಳಿಗೆ ಇನ್ನೊಂದು ಗುಂಡಾಗದೆ, ಬೆನ್ನಿಗೆ ಬೆಂಡಾಗಿ' ಹೇಗೆ ಈಸಬಹುದು, ಈಸಿ ಜೈಸ ಬಹುದು ಎಂಬುದನ್ನಿಲ್ಲಿ ಕಾಂತಾಸಮ್ಮಿತವಾಗಿ ಸಿ. ಕೃಷ್ಣರು ಬೋಧಿಸಿದ್ದಾರೆ.

'ನನ್ನ ಕಾಗದಗಳು–ವಿಶಾಲಾಕ್ಷಿಗೆ' ಎಂಬ ಮೊದಲ ಕಟ್ಟಿನಲ್ಲಿ ಇಪ್ಪತ್ತೆಂಟು ಪತ್ರ ಗಳಿವೆ. ಈ ಪತ್ರಗಳಲ್ಲಿ ಗಂಡ ತನ್ನ ಹೆಂಡತಿಗೆ ತಾನು ಆಕೆಯ ಕೈ ಹಿಡಿದ ಸಂದರ್ಭ, ಅನಂತರ ಎಂಟೇ ದಿನಗಳಲ್ಲಿ–ಆಕೆಯ ಮುಖವನ್ನು ಸರಿಯಾಗಿ ನೋಡುವ ಮೊದಲೇ- ಪರವೂರಿಗೆ ಹೋಗಬೇಕಾದ ಸನ್ನಿವೇಶಗಳನ್ನು ಜ್ಞಾಪಿಸುತ್ತಾನೆ; ತನ್ನ ಸುತ್ತಮುತ್ತಲಿನ ವಿವಿಧ ದಾಂಪತ್ಯ ಜೀವನಗಳು, ತಮ್ಮಿಬ್ಬರ ಜೀವನವು ಇವುಗಳಿಗಿಂತ ಭಿನ್ನವಾಗಿ ಸುಂದರ ವಾಗಿ ಹೇಗೆ ಇರಬೇಕು ಎಂಬ ಆಶೆ, ಉತ್ತಮ ಗೃಹಿಣಿಯಾಗಲು ಹೆಂಡತಿ ಏನೇನು ಸಿದ್ಧತೆ ಗಳನ್ನು ಮಾಡಿಕೊಳ್ಳಬೇಕೆಂಬ ಸೂಚನೆಗಳು ಈ ಪತ್ರಗಳಲ್ಲಿವೆಯೇ ಹೊರತು ಹೆಂಡತಿಯ ಉತ್ತರಗಳಿಲ್ಲ. ಆದರೆ ಗಂಡಿನ ಪತ್ರಗಳಲ್ಲೇ ಉತ್ತರದ ಅಂಶವೂ ಸೂಚಿತವಾಗಿ, ಆಕೆ ಏನು ಬರೆದಿರಬಹುದೆಂಬುದನ್ನು ಊಹಿಸಿಕೊಳ್ಳುವಂತಿದೆ.

ಎರಡನೆಯ ಕಟ್ಟು— 'ವಿಶಾಲಾಕ್ಷಿಯ ಕಾಗದಗಳು.' ಇದರಲ್ಲಿರುವ ಇಪ್ಪತ್ತ ನಾಲ್ಕು ಕಾಗದಗಳಲ್ಲಿ ವಿಶಾಲಾಕ್ಷಿ (ಹೆಂಡತಿ) ತನ್ನ ಪ್ರಿಯಸಖಿ ವೆಂಕೂವಿನ ಮುಂದೆ, ಗಂಡನಿಗೆ ಬರೆಯಲಾಗದೆ ಬಚ್ಚಿಟ್ಟ ತನ್ನ ಅಂತರಂಗವೆಲ್ಲವನ್ನೂ ಬಿಚ್ಚಿದ್ದಾಳೆ. ಕ್ರಮ ಕ್ರಮವಾಗಿ ಅವಳು ಹೇಗೆ ಗಂಡನ ಹತ್ತಿರ ಹೋದಳು, ಅವನನ್ನು ಹೇಗೆ ಅರಿತು

*"ಸೇಡಿಯಾಪು ಅವರ ಪತ್ರಗಳು" (ಉದಯವಾಣಿ: 14–10–72)

ಕೊಂಡಳು, ಹೇಗೆ ಅವನೊಂದಿಗೆ ಸಮರಸವಾದಳು, ವೆಂಕೂವಿಗೆ ಕೊನೆಯ ಕಾಗದ ಬರೆಯುವ ಹೊತ್ತಿಗೆ ಅವಳು ಹೇಗೆ ತಾಯ್ತನದ ಸವಿಗನಸು ಕಾಣುತ್ತಿರುವಳು ಎಂಬುದನ್ನೆಲ್ಲ ಬಿಡಿಸಿ ಬರೆದಿದ್ದಾಳೆ. ಈ ಕಟ್ಟಿನ ಕಾಗದಗಳಲ್ಲಿ ವಿಶಾಲಾಕ್ಷಿ ಮತ್ತು ಅವಳ ಗಂಡ ಇವರ ದಾಂಪತ್ಯ ಕಥನದೊಂದಿಗೆ ವೆಂಕೂವಿನ ಬಾಳಿನ ಒಂದು ಎಳೆಯೂ ಹೆಣೆದುಕೊಂಡಿದೆ. ವೆಂಕೂ ಬಾಲವಿಧವೆ. ವಿಶಾಲಾಕ್ಷಿಯ ಗಂಡನ ಅನುಕಂಪ, ಪ್ರಯತ್ನಗಳಿಂದ ಬರಿದಾದ ಅವಳ ಬಾಳು ಮತ್ತು ಕೊರಳು ಮತ್ತೆ ತುಂಬಿಕೊಳ್ಳುವಂತಾಯಿತು ಎಂಬದೂ ಇಲ್ಲಿ ಸೂಚಿತವಾಗಿದೆ.

ಮೇಲಿನ ಎರಡು ಕಟ್ಟು ಕಾಗದಗಳು ಸೇರಿಕೊಂಡರೆ ವಿಶಾಲಾಕ್ಷಿ ಮತ್ತು ಅವಳ ಗಂಡ ಇವರ ದಾಂಪತ್ಯದ ಪೂರ್ಣ ಪರಿಚಯ ನಮಗಾಗುತ್ತದೆ. ಆದರೆ ಮುಂದಿನ ಮೂರನೆಯ ಕಟ್ಟಿಗೂ ಹಿಂದಿನ ಎರಡಕ್ಕೂ ನೇರವಾದ ಸಂಬಂಧವಿಲ್ಲ. ಇಂದಿರೆ ಎಂಬ ಹೆಣ್ಣು ತನ್ನ ಗೆಳತಿ ಕಮಲೆಗೆ ಬರೆದ ನಲ್ವತ್ತನಾಲ್ಕು ಪತ್ರಗಳು ಮೂರನೆಯ ಕಟ್ಟಿನಲ್ಲಿವೆ. ಇವರಿಬ್ಬರೂ ವಿಶಾಲಾಕ್ಷಿ-ವೆಂಕಮ್ಮರಿಗೆ ಪರಿಚಿತೆಯರು ಎಂಬುದನ್ನು ಹಿಂದಿನ ಕಟ್ಟಿನಿಂದ ಊಹಿಸಿಕೊಳ್ಳಬಹುದು, ಅಷ್ಟೆ. ಆದರೆ, ಇವರಿಬ್ಬರ ಪತ್ರ ವ್ಯವಹಾರಕ್ಕೂ ಒಂದು ಉದ್ದೇಶವಿದೆ–ಅದೆಂದರೆ ವಿವಾಹಪೂರ್ವದಲ್ಲಿ ಹೆಣ್ಣಿನ ಮನಸ್ಸು ಹೇಗೆ ಪ್ರವರ್ತಿಸುತ್ತದೆ ಎಂಬುದರ ಚಿತ್ರಣ. ವಿದ್ಯಾವತಿಯಾದ ಒಬ್ಬಾಕೆ ಹೆಣ್ಣು (ಇಂದಿರೆ) ಮದುವೆ ಬೇಕೋ ಬೇಡವೋ ಎಂದು ತುಯ್ದಾಡಿ ಕೊನೆಗೆ ವಿವಾಹ ಬಂಧನಕ್ಕೆ ಒಳಗಾಗಿ ದಾಂಪತ್ಯ ಜೀವನಕ್ಕೆ ಹೇಗೆ ತನ್ನನ್ನು ಹೊಂದಿಸಿಕೊಳ್ಳುತ್ತಾಳೆ ಎಂಬುದನ್ನಿಲ್ಲಿ ಕಾಣಬಹುದು. ಮೊದಲಿನ ಎರಡು ಕಟ್ಟುಗಳಲ್ಲಿರುವ ಸ್ವಾರಸ್ಯ ಅದೇ ಪ್ರಮಾಣದಲ್ಲಿ ಇಲ್ಲಿಲ್ಲವಾದರೂ, ಅಲ್ಲಿರುವ ಕೆಲವು ಸಂಗತಿಗಳೇ ಇಲ್ಲಿ ಪುನರುಕ್ತವಾಗಿದೆಯೆಂದು ತೋರಿದರೂ, ಓದುವಾಗ ಒಟ್ಟಿನಲ್ಲಿ ರೋಚಕವಾಗಿಯೇ ಇದೆ.

ಪತ್ರ ಸಾಹಿತ್ಯದಲ್ಲಿರಬೇಕಾದ ವಿಶೇಷ ಗುಣ ಆತ್ಮೀಯತೆ. ಈ ಪುಸ್ತಕದಲ್ಲಿರುವ ಪತ್ರಗಳಂತೂ ಪತಿ–ಸತಿ, ಗೆಳತಿ-ಗೆಳೆಯರ ನಡುವೆ ಹಾರಾಡಿದವುಗಳು ಎಂದಬಳಿಕ ಇವುಗಳಲ್ಲಿ ಆತ್ಮೀಯತೆ ಎದ್ದು ಕಾಣಲೇಬೇಕಲ್ಲವೆ? ವಿಶಾಲಾಕ್ಷಿ, ಅವಳ ಗಂಡ, ವೆಂಕೂ, ಇಂದಿರಾ, ಕಮಲ ಇವರೆಲ್ಲ ನಮಗೆ ತೀರ ಹತ್ತಿರದವರಾಗಿ ನಮ್ಮ ಮನೋರಂಗವನ್ನೇ, ನಾವು ಆಡುವ ಭಾಷೆಯಲ್ಲೇ ಪ್ರಕಟಿಸಿ, ನಮ್ಮ ಸಂಸಾರದ ಸುಖದುಃಖಗಳಲ್ಲಿ ಪಾಲುಗೊಳ್ಳುವ ಬಂಧುಗಳಾಗಿ ತೋರುತ್ತಾರೆ. ಈ ಪತ್ರಗಳಲ್ಲಿ ಬಳಸಲಾದ ಸಂಬೋಧನ ಕ್ರಮ, ಮುಗಿತಾಯ, ಇವೆರಡರ ನಡುವಿನ ಒಕ್ಕಣೆ, ಅದರೊಳಗಿನ ಹೂರಣ ಇವೆಲ್ಲ ಗಂಡು-ಹೆಣ್ಣುಗಳು ಹೊಸದಾಗಿ ಗೃಹಸ್ಥಾಶ್ರಮವನ್ನು ಪ್ರವೇಶಿಸಿದಾಗ ಅಥವಾ ಅದಕ್ಕೆ ತುಸು ಮೊದಲು ತಮ್ಮೊಳಗಿನ ಪತ್ರ ವ್ಯವಹಾರದಲ್ಲಿ ಬಳಸುವಂತದ್ದೇ–ಏಕೆಂದರೆ, ಮದುವೆಗೆ ಮೊದಲು ನಾವು ಕಟ್ಟುವ ಕನಸಿನ ಪ್ರಪಂಚ ಮದುವೆಯೊಡನೆಯೇ ಕರಗುವುದಿಲ್ಲ; ಕರಗಿದರೂ ಅದರ ಗುಂಗಿನಲ್ಲೇ ನಾವು ಕೆಲವು ದಿನ ಇದ್ದು ಬಿಡುತ್ತೇವೆ.

ಈ ಪತ್ರಗಳದ್ದು ಮುಖ್ಯವಾಗಿ ಪ್ರೇಮಪ್ರಪಂಚ. ಎಂದರೆ ಅಲ್ಲಿ ಬರಿಯ ಸರಸ–

ವಿರಸಗಳಷ್ಟೇ ಅಲ್ಲ, ವಿರಸ-ವಿಲಾಪಗಳೂ ಇವೆ. ಗಂಡ ಹೆಂಡಿರ ನಗೆ ಹೊಗೆಯಾಗುವುದನ್ನಾಗಲೀ, ಒಬ್ಬೊಬ್ಬರೂ ತಮ್ಮಿಬ್ಬರ ನಡುವೆ ಬಿಂಕ ಬಿಗುಮಾನಗಳ ಅಡ್ಡಗೋಡೆಯನ್ನೇರಿಸಿ ಅದರಾಚೆ–ಈಚೆ ಮುಖ ಮರೆಸಿಕೊಳ್ಳುವುದನ್ನಾಗಲೀ, ಕೊನೆಗೆ ಯಾರಾದರೂ ಒಬ್ಬರು ಸೋತು ಕಣ್ಣೀರು ಸುರಿಸಿದಾಗ ಆ ಗೋಡೆ ಕುಸಿದು ಬೀಳುವುದನ್ನಾಗಲೀ ಲೇಖಕರು ಹೃದಯಂಗಮವಾಗಿ ವಿವರಿಸಿದ್ದಾರೆ (ಉದಾ. ಪುಟ: 79 : ಪತ್ರ:12). ಹೆಣ್ಣಿನಲ್ಲಿ ಅಲಂಕಾರಪ್ರಿಯತೆ ಹೆಚ್ಚು ಎಂಬುದು ಸಾಮಾನ್ಯವಾದ ಭಾವನೆ ಇಲ್ಲಿಯೂ ಹೆಣ್ಣು ಅಂತಹ ಬಯಕೆಯನ್ನು ಬೀರಿದಾಗ ಸೌಂದರ್ಯವೇನೆಂಬುದರ ಹೃದ್ಯನಿರೂಪಣೆ ಬರುತ್ತದೆ: "ಅಲಂಕಾರ ಸೌಂದರ್ಯ" "ಅಂಗ ಸೌಂದರ್ಯ" ಮತ್ತು "ಆತ್ಮ ಸೌಂದರ್ಯ"–ಈ ಮೂರು ಘಟ್ಟಗಳಲ್ಲಿ ಮೂರನೆಯದು ಮೇಲಿನ ಘಟ್ಟ (ಉದಾ. ಪುಟ : 88 ಪತ್ರ:18). ಲೋಕದಲ್ಲಿ ಒಬ್ಬರ ಹಾಗೆ ಇನ್ನೊಬ್ಬರಿರುವುದಿಲ್ಲ; ಒಂದೇ ಕೈಯ ಐದು ಬೆರಳುಗಳೇ ಒಂದರ ಹಾಗೆ ಇನ್ನೊಂದು ಇಲ್ಲವಲ್ಲ;–ಹಾಲು–ಜೇನಿನಂತೆ ಒಂದಾಗುವ ಸತಿಪತಿಯರೂ ಇರುತ್ತಾರೆ; ಎಣ್ಣೆ–ನೀರಿನಂತೆ ಎರಡಾಗಿರುವ ಗಂಡ ಹೆಂಡಿರೂ ಇರುತ್ತಾರೆ. ಗಂಡನಿಗೆ ಹೆದರಿ ಹಿಪ್ಪೆಯಾಗುವ ಹೆಂಡತಿ, ಹೆಂಡತಿಗೆ ಅಂಜಿ ಹಲ್ಲು ಕಿಸಿಯುವ ಗಂಡು–ಇವರೂ ಇರುತ್ತಾರೆ, ಇಂತಹವರ ಚಿತ್ರಣವೂ ಈ ಪುಸ್ತಕದಲ್ಲಿ ಇದೆ. (ಉದಾ. ಪುಟ: 135: ಪತ್ರ 33).

ಇಲ್ಲಿಯ ಗದ್ಯಶೈಲಿ ತುಂಬ ಸೊಗಸಾದುದು. ಇದರಿಂದಾಗಿ ಈ ಪತ್ರಗಳನ್ನೋದುವಾಗ ಕಾಳಿದಾಸನ, "ಕ ಇದಾನೀಂ ಶರೀರ ನಿರ್ವಾಪಯಿತ್ರೀಂ ಶಾರದೀಂ ಜ್ಯೋತ್ಸ್ನಾಂ ಪಟಾಂತೇನ ವಾರಯಂತಿ ?" (ಶರೀರ ಹಿತಕಾರಕವಾದ ಶರಚ್ಚಂದ್ರಿಕೆಯನ್ನು ಯಾರು ತಾನೇ ಬಟ್ಟೆಯಿಂದ ಮುಚ್ಚುತ್ತಾರೆ?) ಎಂಬ ವಾಕ್ಯವಾಗಲೀ, ಲೀಲಾಶುಕನ "ಸಾಯಂಕಾಲೇ ವನಾಂತೇ ಕುಸುಮಿತ ಸಮಯೇ ಸೈಕತೇ ಚಂದ್ರಿಕಾಯಾಂ" (ಸಾಯಂಕಾಲ ವನಪ್ರದೇಶದಲ್ಲಿ, ಹೂಗಳು ಅರಳುವ ಹೊತ್ತಿನಲಿ ಬೆಳದಿಂಗಳು ಹಬ್ಬುತ್ತಿರುವಾಗ, ನುಣ್ಣನೆಯ ಮಳಲಲ್ಲಿ ಸುಳಿದಾಡುವಂತೆ) ಎಂಬ ಪಂಕ್ತಿಯಾಗಲೀ ಥಟ್ಟನೆ ನೆನಪಿಗೆ ಬಂದು, ಅಂತಹ ಭಾವ ನಮ್ಮದಾಗುತ್ತದೆ. ಈ ಪುಸ್ತಕದಲ್ಲಿ ಲೇಖಕರು ಅನಾವರಣಗೊಳಿಸಿರುವ ಪ್ರೇಮಪ್ರಪಂಚದ ಸುಕುಮಾರ ಚಿತ್ರವನ್ನಾಗಲೀ, ಇದಕ್ಕಾಗಿ ಅವರು ಬಳಸಿರುವ ಭಾಷಾ ಶೈಲಿಯ ಹೃದ್ಯತೆಯನ್ನಾಗಲೀ ಪರಿಭಾವಿಸುವಾಗ ನಮಗೆ ಹೊಳೆಯುವ ಒಂದೇ ಒಂದು ಹೋಲಿಕೆಯೆಂದರೆ ಕೆ. ಎಸ್. ನರಸಿಂಹಸ್ವಾಮಿಯವರ "ಮೈಸೂರ ಮಲ್ಲಿಗೆ!" ಇಲ್ಲಿಯದು ಗದ್ಯ, ಅಲ್ಲಿಯದು ಪದ್ಯ–ಅಂತರವಿಷ್ಟೇ.

ಇಲ್ಲಿಯ ಪತ್ರಗಳಲ್ಲಿ ಎಷ್ಟೋ ಸಾಲುಗಳು 'ಮನನ ಮನೋರಮ'ವಾಗಿವೆ; ಆಯಾ ಸಂದರ್ಭಗಳನ್ನು ತಿಳಿದು ಓದಿಕೊಂಡರೆ ಅವುಗಳ ಸ್ವಾರಸ್ಯ ಇಮ್ಮಡಿಸುತ್ತದೆ :

"ಗಂಡಸು ದುಡಿಯುವುದು, ಹೆಂಗಸು ಹಡೆಯುವುದು".

"ಮೊದಲು ಮುದ್ದಾದ ಅಕ್ಷರಗಳನ್ನು ಬರೆಯುತ್ತಿದ್ದ ಕೈ ಈಗ ಮುಸುರೆ ತಿಕ್ಕಿ ಅಡುಗೆ ಮಾಡುತ್ತಿದೆ".

"ಸೂಳೆಗೆ ಇರುವಷ್ಟು ಸ್ವಾತಂತ್ರ್ಯ ಯಾವ ಹೆಂಗಸಿಗೂ ಇಲ್ಲ. ಪೋಲಿಗಿರುವಷ್ಟು ಸ್ವಾತಂತ್ರ್ಯ ಯಾವ ಗಂಡಸಿಗೂ ಇಲ್ಲ".

"ಹೆಂಗಸು ದೇವರ ಮುಂದೆ ಉರಿಯುತ್ತಿರುವ ನಂದದ ದೀಪದಂತೆ ಸರಳ. ಗಂಡಸು ಗಾಳಿಗೊಡ್ಡಿದ ಲಾಂದ್ರದಂತೆ ದೃಢ."

"ಸೌಂದರ್ಯ, ಪ್ರೇಮ ಇವುಗಳಿಗೆ ಗಣಿತದ ಲೆಕ್ಕಕ್ಕಿದ್ದ ಹಾಗೆ ಒಂದೊಂದೇ ಉತ್ತರವಲ್ಲ. ಒಬ್ಬೊಬ್ಬರ ಭಾವನೆ ಒಂದೊಂದು ವಿಧವಾಗಿರುತ್ತದೆ".

'ಮೈಸೂರ ಮಲ್ಲಿಗೆ' ಕವಿ ಕೆ. ಎಸ್. ನರಸಿಂಹಸ್ವಾಮಿಯವರು ಸಿ. ಕೃಷ್ಣರ 'ಮುಗುದೆಯರ ಪತ್ರಗಳ' ಬಗೆಗೆ ಹೇಳಿದ್ದರಲ್ಲಿ ಕೆಲವು ವಾಕ್ಯಗಳನ್ನು ಉದ್ಧರಿಸಿ ಈ ಲೇಖನವನ್ನು ಕೊನೆಗಾಣಿಸಬಹುದು—

"......ಸಿ. ಕೃಷ್ಣರ ಈ ಪ್ರೇಮಪತ್ರಗಳನ್ನು ಓದುವಾಗಲೆಲ್ಲಾ ....ಪ್ರಶಾಂತವಾದ ಮೆಡಿಟರೇನಿಯನ್ ಸಮುದ್ರ ಪ್ರಾಂತದ ವಾಯುಗುಣವೂ ಆ ಹಿತಮಿತವಾದ ಆವರಣದಲ್ಲಿ ಸಣ್ಣ ದನಿಯಲ್ಲಿ ಪಲಕುತ್ತಿರುವ ಹತ್ತಾರು ಕಿರುಹಕ್ಕಿಗಳ ಚಂದ್ರಾರಾಧನೆಯೂ, ದೂರದಲ್ಲಿ ಎಂದೋ ಕಂಡ ಕನಸಿನ ಬಿಸಿಲ್ಗುದುರೆಗಳಂತೆ ನೆನಪಿಗೆ ಬರುತ್ತದೆ...ಇಂಥ ಹಾಸ್ಯ, ಇಂಥ ಸಂತೋಷ, ಉಗುರು ಬೆಚ್ಚಗೆ ಅಲ್ಲಲ್ಲಿ ಸುಳಿಯುತ್ತಿರುವ ಮೊದಲ ಪ್ರೇಮದ ಈ ಸವಿ ಗನಸುಗಳು ತಮ್ಮದೇ ಆದ ಒಂದು ನೆಲೆಯನ್ನು ಅರಿಸಿಕೊಂಡು ಬಾಳಿನ ಒಂದು ಘಟ್ಟದಲ್ಲಿ ಬೆಳದಿಂಗಳನ್ನು ಹರಡುತ್ತಿವೆ".

# ೬. ಕಾಮತರ 'ಗದಾಯುದ್ಧ'

ಎಂ. ಎನ್. ಕಾಮತರ 'ಗದಾಯುದ್ಧದ ಕಥೆ', ಮತ್ತು ಎದುರ್ಕಳ ಶಂಭ ಶಂಭು ಭಟ್ಟರ 'ಸತ್ಯವಿಜಯ'–ಇವೆರಡೂ ಸ್ವತಂತ್ರ ಕೃತಿಗಳಲ್ಲ; ಕನ್ನಡದ ಎರಡು ಮಹಾಕಾವ್ಯಗಳ ಸಂಗ್ರಹ ಗದ್ಯಾನುವಾದಗಳು. ಮೊದಲನೆಯದಕ್ಕೆ ಕವಿಚಕ್ರವರ್ತಿ ರನ್ನನ 'ಸಾಹಸಭೀಮವಿಜಯ' (ಅಥವಾ 'ಗದಾಯುದ್ಧ') ವೂ ಎರಡನೆಯದಕ್ಕೆ ರಾಘವಾಂಕ ಪಂಡಿತನ 'ಹರಿಶ್ಚಂದ್ರಕಾವ್ಯ'ವೂ ಮೂಲ. ಕಾಮತರ ಕೃತಿ ಪ್ರಕಟವಾದದ್ದು ೧೯೩೮ ರಲ್ಲಾದರೆ ಶಂಭಟ್ಟರದ್ದು ೧೯೪೯ ರಲ್ಲಿ. ಶಾಲಾಕಾಲೇಜುಗಳಿಗೆ ಪಠ್ಯಗಳನ್ನು ಆರಿಸುವಾಗ ಗುಣ ಪಕ್ಷಪಾತವೇ ಮುಖ್ಯವಾಗಿದ್ದ ಕಾಲದಲ್ಲಿ ಈ ಎರಡೂ ಪುಸ್ತಕಗಳು ಆಗಾಗ ಪಠ್ಯವಾಗಿ ಅಂಗೀಕೃತವಾಗುತ್ತಿದ್ದುವು; ಪಾಠಮಾಡುವವರಿಗೂ, ಪಾಠ ಕೇಳುವವರಿಗೂ ಸಂತೋಷವನ್ನು ಉಂಟುಮಾಡುತ್ತಿದ್ದುವು.

ಮೈಸೂರಿನ 'ಕಾವ್ಯಕಲಾನಿಧಿ' ಯು ಹಳೆಗನ್ನಡದ ಕಾವ್ಯಗಳನ್ನು ಸಂಪಾದಿಸಿ, ಪರಿಷ್ಕರಿಸಿ ಪ್ರಕಟಿಸುವ ಶ್ಲಾಘ್ಯ ಕಾರ್ಯವನ್ನು ಕಳೆದ ಶತಮಾನದಲ್ಲಿಯೇ ಆರಂಭಿಸಿತು. ಬೆಂಗಳೂರಿನಲ್ಲಿರುವ 'ಕನ್ನಡ ಸಾಹಿತ್ಯ ಪರಿಷತ್ತು' ಸಹ ಅದೇ ರೀತಿಯ ಕಾಯಕವನ್ನು ಆಗಾಗ ಮಾಡುತ್ತ ಬಂದಿದೆ. ೧೯೩೦ ರ ಸುಮಾರಿಗೆ ಮೈಸೂರು ವಿಶ್ವವಿದ್ಯಾನಿಲಯವು 'ಕನ್ನಡ ಗ್ರಂಥಮಾಲೆ' ಯೊಂದನ್ನು ಕಟ್ಟಿ, ಪ್ರಾಚೀನ ಕನ್ನಡ ಕಾವ್ಯಗಳನ್ನು ಸಂಗ್ರಹಿಸಿ ಪ್ರಕಟಿಸುವ ಯೋಜನೆಯೊಂದನ್ನು ರೂಪಿಸಿತು. ಅದರ ಕಾರ್ಯಾಚರಣೆಯ ಹೊರೆಯನ್ನು ದಿ. ಬಿ. ಎಂ. ಶ್ರೀಕಂಠಯ್ಯನವರಿಗೆ ಒಪ್ಪಿಸಿತು. ಕೀರ್ತಿಶೇಷ ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಯವರ ಸಹ-ಸಂಪಾದಕತ್ವದಲ್ಲಿ, ಆ ಮಾಲೆಯ ಮೊದಲ ಹೂವಾಗಿ, ೧೯೩೧ರಲ್ಲಿ 'ಹರಿಶ್ಚಂದ್ರಕಾವ್ಯ ಸಂಗ್ರಹ'ವು ಅರಳಿತು. ಒಂದು ದೀರ್ಘಗ್ರಂಥದ ಸಂಗ್ರಹ ಕಾರ್ಯ ಹೇಗಿರಬೇಕು ಎಂಬುದನ್ನು ಬಿ. ಎಂ. ಶ್ರೀಯವರು ಅದೇ ಸಂದರ್ಭದಲ್ಲಿ ವಿವರಿಸಿದ್ದರು. ಅಂದಿನ ಅವರ ವಿವರಣೆ ಇಂದಿಗೂ ಅನುಸರಣೀಯವಾಗಿದೆ: "........ಒಂದು ಕಾವ್ಯದ ಸೊಗಸನ್ನು, ಒಬ್ಬ ಕವಿಯ ಕವಿತಾ ಶಕ್ತಿಯನ್ನು ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು; ಇಲ್ಲ ಉತ್ತಮ ಭಾಗಗಳೆಲ್ಲವನ್ನಾದರೂ ನೋಡಬೇಕು. ಈ ಸಮಷ್ಟಿದೃಷ್ಟಿ ಸಾಧ್ಯವಾಗುವಂತೆ........ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿದರೆ ವಿದ್ಯಾರ್ಥಿಗಳಿಗೂ ಸಾಮಾನ್ಯ ಜನಕ್ಕೂ ಹಿತಕರವೂ ಪ್ರಯೋಜನಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹಗಳನ್ನು ಮಾಡುತ್ತದೆ. ಇದರಲ್ಲಿ ಮುಖ್ಯ ಗಮನ........ಒಟ್ಟು ಕಥೆಯ ಸ್ವಾರಸ್ಯಕ್ಕೆ........ಭಂಗ ಬಗಬಾರದು........ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷ ಪ್ರತಿಭೆಗೆ ಲೋಪ ಬರಕೂಡದು. ಇಷ್ಟನ್ನೂ ಸಾಧಿಸುವುದು ಸಂಗ್ರಹಕಾರನ ಕರ್ತವ್ಯ...."

ಪದ್ಯವೋ, ಗದ್ಯವೋ ಒಂದು ದೀರ್ಘ ಗ್ರಂಥದ ಸಂಗ್ರಹ (Abridgement)

ಕಾರ್ಯ ಸುಲಭವೇನೂ ಅಲ್ಲ. ಪದ್ಯದಿಂದ ಗದ್ಯಕ್ಕೆ ಅನುವಾದಿಸುವುದು ಒಂದು ಭಾಷೆಯಿಂದ ಇನ್ನೊಂದಕ್ಕೆ ಅನುವಾದ ಮಾಡುವಷ್ಟೇ ಕಷ್ಟದಾಯಕವಾದದ್ದು. ಡಿ. ವಿ. ಜಿ. ಯವರ ಮಾತಿನಲ್ಲಿ ಹೇಳುವುದಾದರೆ ಅನುವಾದ ಕಾರ್ಯ "ಪರಕಾಯ ಪ್ರವೇಶ ಮಾಡಿಸುವಷ್ಟು ಕಷ್ಟ." ಮೂಲದ ಚೆಲುವಿನಲ್ಲಿ ಯಾವುದನ್ನು ಇಡಲಿ, ಯಾವುದನ್ನು ಬಿಡಲಿ ಎಂಬಲ್ಲಿ ಸಂಗ್ರಹಕಾರನೂ ಅಲ್ಲಿಯ ಚೆಲುವೆಲ್ಲ ಇಲ್ಲಿಯೂ ಇದೆಯೇ ಎಂಬಲ್ಲಿ ಅನುವಾದಕನೂ ಒಂದು ರೀತಿಯ 'ಧರ್ಮಸಂಕಟ'ಕ್ಕೆ ಒಳಗಾಗುತ್ತಾರೆ. ಮೂಲದ ಸೌಂದರ್ಯ ಉಳಿಯಬೇಕು; ಅನುವಾದವೆಂದು ತೋರಬಾರದು-ಇದು ಅವರ ಪ್ರಧಾನ ಲಕ್ಷ್ಯ; ಇಲ್ಲೇ ಅವರ ಸತ್ವಪರೀಕ್ಷೆ. ಕನ್ನಡಕ್ಕೆ ಎಷ್ಟೋ ಭಾಷೆಗಳಿಂದ ಎಷ್ಟೋ ಗ್ರಂಥಗಳ ಅನುವಾದವಾಗಿದೆ; ಗದ್ಯ ಪದ್ಯ ರೂಪಗಳಲ್ಲಿ ಇನ್ನೆಷ್ಟೋ ಗ್ರಂಥಗಳ ಸಂಗ್ರಹವೂ ಆಗಿದೆ. ಸಂಗ್ರಹವಾದರೂ ಸ್ವತಂತ್ರವೆಂದೇ ತೋರಿ, ಪದ್ಯದಿಂದ ಗದ್ಯಕ್ಕೆ ಅನುವಾದಿತವಾದರೂ ಮೂಲಕ್ಕೆ ಪ್ರಾಮಾಣಿಕವಾಗಿ, ಮೂಲವನ್ನು ಓದದಿದ್ದವರಿಗೆ ಮೂಲ ಗ್ರಂಥವೊಂದಿದೆ ಎಂಬ ಭಾವಕ್ಕೆ ಆಸ್ಪದವನ್ನೇ ಕೊಡದೆ, ಓದಿಸಿಕೊಂಡು ಹೋಗುವ ಎರಡು ಕೃತಿಗಳೆಂದರೆ 'ಗದಾಯುದ್ಧದ ಕಥೆ' ಮತ್ತು 'ಸತ್ಯವಿಜಯ'.

'ಗದಾಯುದ್ಧದ ಕಾವ್ಯ'ವು ರನ್ನನ ಕೃತಿರತ್ನ; ಕನ್ನಡದ ಮುಕುಟಮಣಿ. ಸಂಸ್ಕೃತದ 'ವೇಣೀಸಂಹಾರ,' ಪಂಪ ಕವಿಯ 'ವಿಕ್ರಮಾರ್ಜುನ ವಿಜಯ' ಗಳಿಂದ ಪ್ರಚೋದಿತವಾಗಿದ್ದರೂ 'ಗದಾಯುದ್ಧ'ದಲ್ಲಿ ರನ್ನನ ಸ್ವೋಪಜ್ಞತೆ ಸಾಕಷ್ಟಿದೆ. ಪಂಪನಂತೆ ರನ್ನನೂ ತನ್ನ ಆಶ್ರಯದಾತನನ್ನೂ ಕಾವ್ಯನಾಯಕನನ್ನೂ ಅಭಿನ್ನವೆಂಬಂತೆ ವರ್ಣಿಸಿ ಕಾವ್ಯರಚನೆ ಮಾಡಿದ್ದಾನೆ. ಪಂಪನಂತೆ, ರನ್ನನೂ ಕಾವ್ಯರಚನೆಗೆ ಆರಿಸಿಕೊಂಡ ಬಂಧವು ನಿಬಿಡವಾದದ್ದು-ಕಂದ ವೃತ್ತಗಳ ಚಂಪೂಮಾರ್ಗ. ರನ್ನನ ಅಲಂಕಾರ ವರ್ಣನೆಗಳು ಹೃದ್ಯ, ಸುಂದರ. ಅವನು ರೇಖಿಸುವ ಚಿತ್ರಗಳೆಲ್ಲ ಖಚಿತ, ದೃಢ, ರಕ್ತಮಾಂಸ ಪರಿಪುಷ್ಟ. ಇನ್ನು ಅವನ ಭಾಷೆಯೋ ?-'ವಾಗ್ದೇವಿಯ ಭಂಡಾರದ ಮುದ್ರೆಯನ್ನೇ ಒಡೆದುಬಿಟ್ಟದ್ದಾನೆ'—ಇಂತಹ ಕವಿಯ ಕೃತಿಯನ್ನು ಸಂಗ್ರಹಿಸುವುದೂ ಅನುವಾದಿಸುವುದೂ ತೀ ಪ್ರಯಾಸದ ಕಾರ್ಯ. ಸುಲಭದಲ್ಲಿ ಯಾರಿಗೂ ಬಗ್ಗುವ, ಸಗ್ಗುವ ಕಾವ್ಯವಲ್ಲ ಅದು. ರನ್ನನ ಉದ್ಘೋಷವನ್ನೇ ಕೇಳಿ; "ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಳ್ ಪರೀಕ್ಷಿಪಂಗೆಂಟೆರ್ದೆಯೇ"! ಅಂತಹ ಗುಂಡಿಗೆಯ ಗಂಡಿದ್ದರೆ ಮಾತ್ರ ರನ್ನನ ಕಾವ್ಯವು ಸದರ; ಇಲ್ಲವಾದರೆ ಅದೊಂದು 'ಗದಾಯುದ್ಧ'ವೇ ಸರಿ;

ಹತ್ತು ಆಶ್ವಾಸಗಳ ಈ ಕಾವ್ಯ ಗಂಗೆಯನ್ನು ತಿಳಿಗನ್ನಡಕ್ಕೆ ತರುವ ಭಗೀರಥ ಸಾಹಸವನ್ನು ಎಂ. ಎನ್. ಕಾಮತರು ಮಾಡಿದ್ದಾರೆ. ದೇವಗಂಗೆಯು ಭೂಮಿಗಿಳಿದು ಬರುವಾಗ ಹರಿಯ ಅಡಿ, ಹರನ ಜಡೆ, ಋಷಿಯ ತೊಡೆಗಳಿಂದ ಪುಟಿದು, ನೆಗೆದು, ಸುಳಿದು ಬಂದವಳಲ್ಲವೇ ?—ಹಾಗೆ ಬರುವಾಗ ಅವಳ ಗಾತ್ರವು ಕುಗ್ಗಿ, ಅಬ್ಬರವು ಅಡಗಿ, ಆವೇಗವು ಕಮ್ಮಿಯಾಯಿತಲ್ಲವೇ ? ಆದರೂ ಅವಳ ಸಹಜಗುಣ-ಪಾಪನಾಶತ್ವ ಪುಣ್ಯದಾಯಿತ್ವಗಳಿಗೆಯಾವ ಚ್ಯುತಿಯೂ ಬರಲಿಲ್ಲ. ಎಂ. ಎನ್. ಕಾಮತರು ಹೊಸಗನ್ನಡಕ್ಕೆ

ಸಂಗ್ರಹಿಸಿ ತಂದ ' ಗದಾಯುದ್ಧ ' ಕಥೆಯಾದರೂ ಹಾಗೆಯೇ ಇದೆ. ಭೀಮನ ಪ್ರತಿಜ್ಞೆ, ಪಶ್ಚಾತ್ತಾಪ, ವಿಚಾರ, ಭೀಷ್ಮವಚನ, ಜಲಸ್ತಂಭ, ಪ್ರತಿಜ್ಞಾಸ್ಥಾಪನೆ ಎಂಬ ಆರು ಅಧ್ಯಾಯಗಳಲ್ಲಿ ಮೂಲ ಕಥೆಯನ್ನು ಅಚ್ಚುಕಟ್ಟಾಗಿ ಅಡಕಗೊಳಿಸಿದ್ದಾರೆ. ಮೂಲಕಾವ್ಯದ ಹರಿತ–ಮೊರೆತ–ಕೊರೆತಗಳು ಈ ಗದ್ಯಾನುವಾದದಲ್ಲಿ ಇಲ್ಲವಾದರೂ, ಅದೇ ' ಜೀವ ' ಗುಣ ಇಲ್ಲೂ ಇದೆ. ಭೀಮಸೇನನ ಬಲ, ಕೌರವರಾಯನ ಛಲ, ದ್ರುಪದನಂದನೆಯ ದುಃಖಾಗ್ನಿ, ಯುಧಿಷ್ಠಿರನ ಧರ್ಮಬುದ್ಧಿ, ಭೀಷ್ಮನ ಸಮದೃಷ್ಟಿ, ಶ್ರೀಕೃಷ್ಣನ ಪಾಂಡವ ಪ್ರಾಣತ್ವ, ಬಲರಾಮನ ಪಕ್ಷಪಾತ–ಇವೆಲ್ಲವೂ ಇಲ್ಲಿರುವ ಅವಕಾಶದಲ್ಲಿ ತುಂಬ ಸೊಗಸಾಗಿ ನಿರೂಪಿತವಾಗಿವೆ. ರನ್ನನ ಕಾವ್ಯ ಗಂಗಾಜಲವನ್ನೇ ಕಾಮತರು ಇಲ್ಲಿ ಬೊಗಸೆ ಬೊಗಸೆಯಾಗಿ ಮೊಗೆದಿದ್ದಾರೆ.

ಪದ್ಯ ಭಾಷೆಯಲ್ಲಿ ರನ್ನನು ಯಾವ ಮೇಲ್ಮೆಯನ್ನು ಮೆರೆದಿರುವನೋ ಅದಕ್ಕೆ ಒಂದಿಷ್ಟು ಅಪಚಾರವಾಗದಂತೆ, ಅದರ ಗುರುತ್ವಕ್ಕೆ ತಕ್ಕಂತೆ ಅಷ್ಟೇ ಮೇಲು ಮಟ್ಟದ, ಅಷ್ಟೇ ಗಂಭೀರ ಮನೋಹರವಾದ ಗದ್ಯ ಭಾಷೆಯ ಬಳಕೆಯಾಗಿದೆ. ಈ ಸಂಗ್ರಹದಲ್ಲಿ–ರನ್ನನು ಹೊಸಗನ್ನಡ ಕವಿಯಾಗಿರುತ್ತಿದ್ದರೆ ಅವನ ಗದ್ಯ ಭಾಷೆ ಹೀಗೆಯೇ ಇರುತ್ತಿತ್ತೇನೋ ! ಒಂದೆರಡು ಉದಾಹರಣೆಗಳನ್ನು ನೋಡಿರಿ "........ಭೀಮನ ಕೈಯಲ್ಲಿ ಭೀಕರವಾಗಿ ತೋರುವ ಆ ಗದೆಯ ಬೆಡಗೇನು ? ಮದ್ದಾನೆಗಳ ಮಸ್ತಕಗಳನ್ನು ಪುಡಿಗೈವ ಸಿಂಹರಾಜನ ತೋಳೋ ? ಅಥವಾ ಉನ್ನತವಾದ ಪರ್ವತಗಳ ನೆತ್ತಿಯನ್ನು ಸೀಳುವ ಸಿಡಿಲಿನ ಗುಂಡೋ ? ........ಅದರದೊಂದೆ ಏಟಿಗೆ ಕುರುಕ್ಷೇತ್ರದಲ್ಲಿ ಹಣ್ಣಾಗಿ, ಹೆಣವಾಗಿ, ಪಿಶಾಚಿಗಳಿಗೆ ತುತ್ತಾಗಿ, ನುಚ್ಚುನೂರಾಗಿ, ಹುಡಿಯಾಗಿ, ಅಟ್ಟೆಕಟ್ಟೆ ಬಿದ್ದಿರುವ ಹಗೆಗಳ ಹಿಂಡು, ಭೀಮನ ವೀರತ್ವವನ್ನು ಪ್ರಪಂಚಕ್ಕೆ ಸಾರುವುದಲ್ಲವೇ ?....ಗದೆಯ ದೆಸೆಯಿಂದಲೆ ಭೀಮನ ಕೊರಳಲ್ಲಿ ಕೊಂಕಿಲ್ಲ ; ಮಾತಿನಲ್ಲಿ ತೊದಲಿಲ್ಲ....5 ಇದು ಭೀಮನ ಪ್ರತಾಪಾಗ್ನಿಯನ್ನು ಕಾಮತರು ಉರಿಸಿದ ರೀತಿ. ರನ್ನನ ಕಾವ್ಯದಲ್ಲಿ, ಕೌರವನ ಕಲ್ಲೆದೆಯೂ ಕರಗಿ, ಅವನು ವಿಲಪಿಸುವ ಸಂದರ್ಭವೊಂದಿದೆ–ಅದೆಂದರೆ ಕೌರವರಾಯನ ಕುರುಕ್ಷೇತ್ರ ಸಂಚಾರ. ಅವನ ಹೃದಯ ಕೋಟರದಲ್ಲಿ ಅಡಗಿದ್ದ ಗುರುಭಕ್ತಿ, ಸ್ನೇಹಪರತೆ, ಸೌಹಾರ್ದ, ವಾತ್ಸಲ್ಯವೇ ಮುಂತಾದ ಸದ್ಗುಣಗಳಿಗೆ ಆ ಸನ್ನಿವೇಶ ಬೆಳಕಿನ ಕಿಂಡಿಯಂತಿದೆ, ಕಾಮತರ ಲೇಖನಿಯೂ ಆ ಪ್ರಸಂಗವನ್ನು ಅಷ್ಟೇ ಮಾರ್ಮಿಕವಾಗಿ ಚಿತ್ರಿಸಿದೆ: ಕೌರವನು ಕುರುಕ್ಷೇತ್ರದ ಉದ್ದಗಲಕ್ಕೂ ಸತ್ತು ಬಿದ್ದಿರುವ ವೀರರನ್ನು ನೋಡುತ್ತಾ ".......ಅಲ್ಲಿಗೆ ಪಡುವಲಲ್ಲಿ, ಕ್ಷೀಣವಾಗಿ ಬಿದ್ದಿದ್ದ ಅಭಿಮನ್ಯುವನ್ನು ಕಂಡನು. ' ಅರೆ ಮುಗುಳಿದ ಕಣ್ಣುಗಳು; ಅರಳಿದ ಮೊಗ ; ಕಡಿದ ಕೈಗಳು ; ಕಚ್ಚಿದ ಅವುಡು ; ಜರ್ಝರಿತವಾದ ದೇಹ, ನೆತ್ತರ ಕಡಲ ಹಾಸುಗೆ–ಇವೆಲ್ಲ ವೀರರಿಗೆ ಒಪ್ಪುವುವು. ಚಕ್ರವ್ಯೂಹವನ್ನು ನುಗ್ಗಿದ ನಿನಗೆ ಎಣೆಯಾದ ಗಂಡಸರಾರು ?........ನಿನ್ನನ್ನು ಹೆತ್ತವಳು ವೀರಜನನಿಯೆಂಬ ಹೆಸರನ್ನೂ ಹೊತ್ತಳು........ಅಭಿಮನ್ಯುವೆ ನಿನ್ನಂತೆ ಸ್ವಸಾಹಸದಿಂದಲೆ ಮಡಿಯುವ ಪುಣ್ಯವು ನಮಗೊದಗಲಿ ;.......ಸಾಹಸಧನವಾದ ನಿನಗೆ ವಂದನೆ'ಯು ;..."ಇದೀಗ ಕೌರವನ ಗುಣ

ಗ್ರಾಹಿತ್ವ, ಅವನ ಮಹಾನುಭಾವತ್ವ : ಅಭಿಮನ್ಯು ವೈರಿ ಪುತ್ರನಾದರೇನಂತೆ, ಗುಣಕ್ಕೆ ಮತ್ಸರವುಂಟೇ ? ಇನ್ನು, ತನ್ನವರಾದ ದುಶ್ಯಾಸನ, ಕರ್ಣರ ಕಳೇಬರವನ್ನು ಕಂಡು ಕೌರವನು ಮರುಗುವುದನ್ನು ರನ್ನನು ಬಣ್ಣಿಸಿದ ರೀತಿಯಂತೂ, ಕನ್ನಡದಲ್ಲಿ "ಅತ್ಯುತ್ತಮ ಚರಮಗೀತೆ" ಯೆಂಬ ಪ್ರಶಂಸೆಗೆ ತಕ್ಕುದಾಗಿದೆ. ಕಾಮತರು ಆ ಭಾಗವನ್ನು ಸೂಕ್ತವಾಗಿ ಸಂಗ್ರಹಿಸಿದ್ದಾರೆ. ವ್ಯಕ್ತಿ ವರ್ಣನೆಯನ್ನು ಮಾಡುವಲ್ಲಿಯೂ ಕಾಮತರು ರನ್ನನ ಆಶಯವನ್ನು ಸರಿಯಾಗಿ ಗ್ರಹಿಸಿ, ಉಚಿತವಾಗಿ ಸಂಗ್ರಹಿಸಬಲ್ಲರು: "ಗಾಂಗೇಯನು, ಅವನೆಂತಹ ಹರಿಭಕ್ತನೋ ; ಅರ್ಜುನನ ಕೋಟಿ ಬಾಣಗಳೂ ಅವನ ದೇಹವನ್ನು ಜರ್ಝರಿಸಿ, ಮೈಯೆಲ್ಲ ವೇದನಾವಶವಾಗಿದ್ದರೂ ಅವನು ಪರಮಾತ್ಮನನ್ನೇ ಏಕಚಿತ್ತದಿಂದ ಧ್ಯಾನಿಸುತ್ತಿದ್ದನು. ಕಣಲಂಬುಗಳೇ ಅವನಿಗೆ ತಲೆದಿಂಬಾಗಿದ್ದುವು ; ಹೆಣೆದ ಬಾಣಗಳೆ ಅವನಿಗೆ ಮಂಚವು ; ಆದರೂ ಹರಿಧ್ಯಾನದಿಂದ ದೇಹದ ಮೋಹವನ್ನೇ ಮರೆತಿದ್ದುದರಿಂದ, ಎಂತಹ ವೇದನೆಯೂ ಅವನನ್ನು ತಟ್ಟದುದಲ್ಲ........" ಕುರುಕುಲ ಪಿತಾಮಹ ಭೀಷ್ಮನ ವ್ಯಕ್ತಿತ್ವವು ಈ ವರ್ಣನೆಯಲ್ಲಿ ಅದೆಷ್ಟು ಭವ್ಯವಾಗಿ ಮೂರ್ತೀಭವಿಸಿದೆ !

ಹೀಗೆ 'ಗದಾಯುದ್ಧ ಕಥೆ' ಯಿಂದ ಎಷ್ಟೋ ಭಾಗಗಳನ್ನು ಉದ್ಧರಿಸಿ, ಕಾಮತರ ಸಂಗ್ರಹ ಕಾರ್ಯದ ಹಿರಿಮೆಯನ್ನು ಸ್ಥಾಪಿಸಬಹುದು. ಒಟ್ಟಿನಲ್ಲಿ ರನ್ನನ ಕಾವ್ಯದ ಈ ಗದ್ಯಾವತಾರವು ಕನ್ನಡದ ಮಣ್ಣಿನ ಹೊನ್ನಿನ ಬೆಳೆ. ನಲ್ವತ್ತೈದು ವರ್ಷಗಳ ಹಿಂದೆ ಹೊಸ ಕನ್ನಡದ ಗದ್ಯವಿನ್ನೂ ಕಣ್ಣೊಡೆದು ಬಲಿಯುತ್ತಿದ್ದ ಕಾಲದಲ್ಲಿ, ಕಾಮತರು ಅದೆಷ್ಟು ಹುರುಪಿನ ಹುರಿಗೂಡಿದ ಗದ್ಯವನ್ನು ಸೃಜಿಸಿದ್ದಾರೆ ಎಂಬುದನ್ನು ಮನಸಾರೆ ಮೆಚ್ಚಬೇಕು. ಅದಕ್ಕಾಗಿ ಕಾಮತರನ್ನು ಮನಮುಟ್ಟಿ ವಂದಿಸಬೇಕು. ಇಂತಹ ಹತ್ತಾರು ಕೃತಿಗಳು ಕನ್ನಡಿಗರ ಕಣ್ಣಮುಂದೆ ಆಗಾಗ ಹಾಯುವಂತಾದರೆ, "ಕನ್ನಡಿಗರಲ್ಲಿ ಭಾಷಾಪ್ರೇಮದ ಕಡೆಗೆ ಉತ್ಸಾಹವೂ....ಹಳಗನ್ನಡದ ಮಹಾಕಾವ್ಯವನ್ನೋದುವ ಮತಿಯೂ ಪುಣ್ಯವೂ ಅವರಿಗೆ ಉಂಟಾಗಲೆಂ"ಬ ಕಾಮತರ ಹಾರಯಿಕೆಯು ಈಡೇರುವುದರಲ್ಲಿ ಸಂದೇಹವಿಲ್ಲ.

## ೭. ಎದುರ್ಕಳ ಶಂಭುಭಟ್ಟರ ‘ ಸತ್ಯವಿಜಯ ’

ಚಂಪೂ ಕಾವ್ಯಕ್ಕೆ ಪಂಪನು ತಲೆಮಣಿಯಾದಂತೆ ಷಟ್ಪದಿಗೆ ರಾಘವಾಂಕ. ಕನ್ನಡದ ಅತ್ಯುತ್ತಮ ಕಾವ್ಯಗಳಲ್ಲಿ ಅವನ ‘ ಹರಿಶ್ಚಂದ್ರ ಕಾವ್ಯ ’ಕ್ಕೂ ಸ್ಥಾನವಿದೆ. ಸತ್ಯ ವ್ರತ ಹರಿಶ್ಚಂದ್ರನು ಭಾರತೀಯರಿಗೆ ಸುಪರಿಚಿತ ವ್ಯಕ್ತಿ. ಗಾಂಧೀಜಿಯ ಬಾಳಿಗೆ ಬೆಳ ಕಾದ ಸಂಗತಿಗಳಲ್ಲಿ ಹರಿಶ್ಚಂದ್ರನ ಸತ್ಯನಿಷ್ಠೆಯೂ ಒಂದು. ಇಂತಹ ಸತ್ಯವಾಕ್ಯನಾದ ಹರಿಶ್ಚಂದ್ರನನ್ನು ತನ್ನ ಕಾವ್ಯದ ಮೂಲಕ ನಿತ್ಯಸ್ಮರಣೀಯನನ್ನಾಗಿ ಮಾಡಿದ್ದಾನೆ, ರಾಘವಾಂಕ, ‘ ಹರಿಶ್ಚಂದ್ರ ಕಾವ್ಯ ’ದ ಗುಣ ವಿಶೇಷಗಳಲ್ಲಿ ನಾಟಕೀಯ ಸನ್ನಿವೇಶ ಗಳೂ, ನಾಟಕೋಚಿತ ಸಂಭಾಷಣೆಗಳೂ ಎರಡಾಗಿವೆ. ಕಥಾ ನಿರೂಪಣೆಯು ತರಲಗತಿ ಯದ್ದು ; ಅಲಂಕಾರ ವರ್ಣನೆಗಳು ಸರಲ–ಸುಂದರ ರಾಘವಾಂಕನ ಭಾಷೆಯಲ್ಲಿ ಕ್ಲಿಷ್ಟತೆ ಕಮ್ಮಿ ; ಲಾಲಿತ್ಯವೇ ಹೆಚ್ಚು. ಹೀಗಿದ್ದರೂ, ‘ ಹರಿಶ್ಚಂದ್ರ ಕಾವ್ಯ ’ದಲ್ಲಿ ರಸೇ ತರವಾದ ಭಾಗಗಳೂ ಇಲ್ಲದಿಲ್ಲ. ಆದುದರಿಂದಲೇ ಮೈಸೂರು ವಿಶ್ವವಿದ್ಯಾನಿಲಯವು 1931ರಷ್ಟು ಹಿಂದೆಯೇ ಅದರ ಸಂಗ್ರಹ ಕಾರ್ಯವನ್ನು ಮಾಡಿದ್ದು. ಅದು ಶ್ಲಾಘನೀಯ ವಾದ ಸಂಗ್ರಹ. ಮೈಸೂರು ವಿಶ್ವವಿದ್ಯಾನಿಲಯವು ‘ ಹರಿಶ್ಚಂದ್ರ ಕಾವ್ಯ ’ವನ್ನು ಪದ್ಯ ರೂಪದಲ್ಲೇ ಸಂಗ್ರಹಿಸಿದ್ದರೆ ವಿದ್ವಾನ್ ಎದುರ್ಕಳ ಶಂಭು ಭಟ್ಟರು ಗದ್ಯದಲ್ಲಿ ಸಂಗ್ರಹಾನು ವಾದ ಮಾಡಿದ್ದಾರೆ.

‘ ಗದಾಯುದ್ಧದ ಕಥೆ ’ಯಲ್ಲಿ ಎಂ. ಎನ್. ಕಾಮತರಿಗೆ ಯಾವುದು ಲಕ್ಷ್ಯವೋ ‘ ಸತ್ಯ ವಿಜಯ ’ದಲ್ಲಿ ಶಂಭಟ್ಟರಿಗೂ ಅಂತಹದ್ದೇ ಉದ್ದೇಶ. ಉತ್ತಮ ಸಂಗ್ರಹ ಕಾರ್ಯ ಹೇಗಿರುತ್ತದೆ ಎಂಬುದಕ್ಕೆ ‘ ಸತ್ಯವಿಜಯ ’ವೂ ಒಂದು ಉತ್ತಮ ನಿದರ್ಶನ. ರನ್ನನ ಚಂಪೂವಿಗೆ ಕಾಮತರ ಗದ್ಯವು ಹೇಗೋ ಹಾಗೆ ರಾಘವಾಂಕನ ಷಟ್ಪದಿಗೆ ಶಂಭಟ್ಟರ ಗದ್ಯ ಸಂಸ್ಕಾರ. ಹರಿಶ್ಚಂದ್ರ ಕಾವ್ಯದ ರಸೋಕ್ತ ಸಂದರ್ಭಗಳೆಲ್ಲವೂ ಇದರಲ್ಲಿವೆ ; ರಸೇತರ ವಾದದ್ದು ಇಲ್ಲಿಲ್ಲ. ದೇವಸಭೆಯಲ್ಲಿ ವಸಿಷ್ಠ–ವಿಶ್ವಾಮಿತ್ರರಿಗೆ ವನಪ್ರದೇಶದಲ್ಲಿ ಹರಿಶ್ಚಂದ್ರ ಅನಾಮಿಕೆಯರಿಗೆ, ಅನಂತರ ಹರಿಶ್ಚಂದ್ರ–ವಿಶ್ವಾಮಿತ್ರರಿಗೆ, ಮಾತಿಗೆ ಮಾತು ಬೆಳೆದು, ಕಿಡಿ ಮಸೆಯುವುದಾಗಲೀ ತನ್ನಮೇಲೆ ವಿಶ್ವಾಮಿತ್ರನಿಗಿರುವ ಪೂರ್ವವೈರದಿಂದ ಶಿಷ್ಯ ಹರಿಶ್ಚಂದ್ರ ನಿಗೆ ನಿಷ್ಕಾರಣ ಕಷ್ಟವೊದಗಿತಲ್ಲ ಎಂಬ ವಸಿಷ್ಠನ ಉಮ್ಮಳವಾಗಲೀ, ರಾಜ್ಯ ಸರ್ವಸ್ವ ವನ್ನೂ ವಿಶ್ವಾಮಿತ್ರನಿಗೊಪ್ಪಿಸಿ, ಹರಿಶ್ಚಂದ್ರನು ಅಯೋಧ್ಯೆಗೆ ಬೆನ್ನಿಕ್ಕಿ ನಡೆವಾಗ ಪ್ರಜೆಗಳ ಭಕ್ತಿ ಪ್ರದರ್ಶನವಾಗಲೀ, ಅವನ ಸುತದಾರ ವಿಕ್ರಯ, ರೋಹಿತಾಶ್ವನ ದುರ್ಮರಣ, ಚಂದ್ರಮತಿಯ ಶಿರಚ್ಛೇದ ಮಾಡಲು ಮುಂಬರಿಯುವ ಲೋಕೋತ್ತರ ರೋಮಾಂಚನ ಕಾರೀ ಸನ್ನಿವೇಶವಾಗಲಿ, ಮಡದಿಯ ಕೊರಳಿಗೆ ಹೊಡೆದ ಖಡುಗದ ಬಾಯಿಂದಲೇ ಪರ ಶಿವನು ಪ್ರತ್ಯಕ್ಷವಾಗುವ ಭವ್ಯ ದೃಶ್ಯವಾಗಲೀ ಎಲ್ಲವೂ ಇಲ್ಲಿ ಹೃದಯಂಗಮವಾಗಿ ವಿವೃತ ವಾಗಿವೆ. ಅಂತರವಿಷ್ಟೆ ! ರಾಘವಾಂಕನದ್ದು ಹಾಡಲು ತಕ್ಕ ಪದ್ಯಕಾವ್ಯ. ಶಂಭಟ್ಟರದ್ದು ಓದಬೇಕಾದ ಗದ್ಯಕಥನ.

ಪದ್ಯಕಾವ್ಯವು ತನ್ನ ಗೇಯಗುಣದಿಂದ ವಾಚಕನನ್ನು ಅಥವಾ ಶ್ರಾವಕನನ್ನು ಸುಲಭದಲ್ಲಿ ಒಲಿಸಿಕೊಳ್ಳುತ್ತದೆ. ಆದರೆ ಗದ್ಯ ಕಥನ ಹಾಗಲ್ಲ. ಗದ್ಯ ಕಥನವು ಆಕರ್ಷಕವಾಗಲು ಲೇಖಕ (ಸಂಗ್ರಹಕಾರ)ನ ಭಾಷಾ ಪ್ರಭುತ್ವವೊಂದೇ ಸಾಧನ. ಸನ್ನಿವೇಶದ ಔಚಿತ್ಯಕ್ಕೆ, ಪಾತ್ರಗಳ ವೈವಿಧ್ಯಕ್ಕೆ, ಭಾವಗಳ ಏರಿಳಿತಕ್ಕೆ ತಕ್ಕಂತೆ ಭಾಷೆಯನ್ನು ಮಣಿಸಬಲ್ಲ ಶಕ್ತಿ ಲೇಖಕನಲ್ಲಿರಬೇಕು–'ಸತ್ಯವಿಜಯ'ದಲ್ಲಿ ಇದನ್ನು ಕಾಣುತ್ತೇವೆ. ಶಂಭಟ್ಟರು ಪಂಡಿತರು. 'ಪಂಡಿತ ಭಾಷೆ ವ್ಯಾಕರಣ ನಿಯಮಕ್ಕೆ ಸಮೀಪ: ಆದರೆ ಹೃದಯ ರಂಜನೆಗೆ ಬಲುದೂರ' ಎಂಬ ಅಪಪ್ರಥೆಯಿದೆ. ಇಲ್ಲಿಯ ಭಾಷೆ ಹೇಗೆ ಶುದ್ಧವೋ ಹಾಗೆಯೇ ಸುಭಗ. ಒಂದು ಉದಾಹರಣೆಯನ್ನು ನೋಡಿರಿ! '....ಮಗನೇ! ರೋಹಿತಾಶ್ವಾ! ಏಕೆ ಮಾತಾಡದಿರುವೆ?' ಎಂದು ಹಂಬಲಿಸುತ್ತ, ಸುರಿವ ಕಣ್ಣೀರನ್ನೊರಸಿಕೊಳ್ಳುತ್ತ, ಮರುಕದ ತವಕದಿಂದ ಅತಿತ್ತ ಓಡಾಡಿ, ಅಲ್ಲಲ್ಲಿ ತಡವರಿಸಿ, ಬಿದ್ದೆದ್ದು, ಶಿವ ಶಿವಾ! ಆ ತಾಯಿ ಮಗನು ಸತ್ತು ಬಿದ್ದ ಹುತ್ತದೆಡೆಗೆ ಬಂದಳು–ಏನನ್ನು ನೋಡುವಳು? ಮಗುವಿನ ಶರೀರವು ವಿಷವೇರಿ ಹಸುರಾಗಿತ್ತು. ಗಲ್ಲದಲ್ಲಿ ನೊರೆಯೊಸರುತ್ತಿತ್ತು, ಕಣ್ಣುಗಳು ಅರೆಬೆರೆದಿದ್ದುವು, ಕೈಗಳು ಹುಲ್ಲು ಹಿಡಿದು ನೀಡಿದ್ದುವು. ಹೊತ್ತಿಗೆ ಉಣ್ಣದೆ ಹಸಿವಿನಿಂದ ಹೊಟ್ಟೆ ಬೆನ್ನಿಗಂಟಿತ್ತು. ಕೊರಳೊಂದೆಡೆಗೆ ಒರಗಿತ್ತು. ಹೊರಳಾಡಿ ಬಾಯ್ತುಂಬ ಧೂಳು ಅಂಟಿಕೊಂಡಿತ್ತು.....ಚಂದ್ರಮತಿಯು....ನಿಲ್ಲಲಾರದ ಧರೆಗೊರಗಿದಳು. ಮಗನ ಮೇಲೆ ಹೊರಳಿದಳು. ಬಿಗಿಯಪ್ಪಿಕೊಂಡಳು. ಮುಖಕ್ಕೆ ಮುಖವಿಟ್ಟು ಮುದ್ದಾಡಿದಳು. ಕರೆಕರೆದು ಲಲ್ಲೆಗರೆದಳು. ಬಲವಳಿದು ಬೆಂಡಾಗಿ ಮೈ ಮರೆತಳು. ಮತ್ತೆ ಎಚ್ಚರಗೊಂಡು, ಜೀವವಿರಬಹುದೇ ಎಂದು ಮೂಗಿನಲ್ಲಿ ಉಸಿರನ್ನು ಹುಡುಕಿದಳು....'' ಹಾವು ಕಡಿದು ಸತ್ತ ರೋಹಿತಾಶ್ವನ ಈ ಚಿತ್ರ ಎಷ್ಟೊಂದು 'ಜೀವಂತ'ವಾಗಿದೆ! ಮೂಲದಲ್ಲಿ ಇದು ಕರುಣರಸಪ್ಲಾವಿತವಾದ ಸನ್ನಿವೇಶ. ಇಲ್ಲೂ ಹಾಗೆಯೇ ಇದೆ. ಮಗನ ಹೆಣವನ್ನು ಕಂಡು ಕಟ್ಟೆಯೊಡೆದಂತೆ ಚಂದ್ರಮತಿ ಕರೆಯುವ ಕಣ್ಣೀರು ಓದುಗನ ಎದೆಯನ್ನೂ ಕರಗಿಸುತ್ತದೆ; ಅವನ ಕಿರುಬೆರಳು ಅಯಾಚಿತವಾದ ಕಡೆಗಣ್ಣನ್ನು ಮುಟ್ಟುತ್ತದೆ.

–'ಜೇನು ತುಪ್ಪ ಬಾಯಿಗೆ ಸಿಹಿಯಾದಂತೆ ರಕ್ತಕ್ಕೆ ಶುದ್ಧಕಾರಿ; ಸಾಹಿತ್ಯರಸ ಮನಸ್ಸಿಗೆ ಇಂಪಾದಂತೆ ಜೀವಕ್ಕೆ ಸಂಸ್ಕಾರಕಾರಿ'–ಹೀಗೆಂದರು ಡಿ.ವಿ.ಜಿ. ರನ್ನನ 'ಗದಾಯುದ್ಧ'ವಾಗಲೀ, ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ವಾಗಲೀ ಆ ಬಗೆಯ ರಸನಿರ್ಭರ ಗ್ರಂಥಗಳು. 'ವಾಚನೀಯ' 'ಮನನೀಯ' ಎಂಬ ಎರಡೂ ಗುಣಗಳು ಈ ಕಾವ್ಯಗಳಲ್ಲಿವೆ. ಮೂಲ ಕಾವ್ಯಗಳನ್ನು ಅಲ್ಲವಾದರೆ ಇಂತಹ ಸಂಗ್ರಹಾನುವಾದಗಳನ್ನಾದರೂ ಓದಿಕೊಂಡರೆ ಓದುಗನಿಗೆ ಇದುವರೆಗೆ ತನ್ನಲ್ಲಿ ಯಾವ ಕೊರತೆಯಿತ್ತು, ಎಂಬುದು ಗೊತ್ತಾಗುತ್ತದೆ; ಹಾಗೆ ಗೊತ್ತಾಗುವುದೆಂದರೆ ಬದುಕು ತುಂಬಿಕೊಳ್ಳುತ್ತಿದೆ ಎಂದೇ ಅರ್ಥ!

# ಎಲ್. ಎಂ. ಎಸ್. ಪುಟ್ಟಣ್ಣನವರ ‘ ನೀತಿಚಿಂತಾಮಣಿ ’

ಸಂಸ್ಕೃತ ಕವಿ ಲೀಲಾಶುಕನ “ ಶ್ರೀಕೃಷ್ಣ ಕರ್ಣಾಮೃತ ”ದ ‘ ರಾಮೋನಾಮ ಬಭೂವ ಹುಂ....’ ಇತ್ಯಾದಿಯಾದ ಭಕ್ತಿಪರ ಶ್ಲೋಕವನ್ನು ಹಲವರು ಕೇಳಿರಬಹುದು. ಅದನ್ನೇ ಕನ್ನಡಕವಿ ರುದ್ರಭಟ್ಟ “ ಕತೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ.... ಕಿಸುಗಣ್ ಬಿಟ್ಟಚ್ಯುತಂ ರಂಜಿಕುಂ ” ಎಂದು ಮುಂತಾಗಿ ಕನ್ನಡಿಸಿದ್ದಾನೆ. ತಾಯಿ ಯಶೋದೆ ಕತೆ ಹೇಳುವಾಗ ಮುದ್ದು ಕೃಷ್ಣ ‘ ಹೂಂ ’ಗುಡುತ್ತಿದ್ದನಂತೆ. (ಅವಳು ಹೇಳುತ್ತಿದ್ದ ಕತೆ ರಾಮಾಯಣದ್ದು. ತ್ರೇತಾಯುಗದ ರಾಮನೇ ದ್ವಾಪರದಲ್ಲಿ ಕೃಷ್ಣ ನಾಗಿ ಹುಟ್ಟಿ ತನ್ನ ಕತೆಯನ್ನೇ ಕೇಳುತ್ತಿದ್ದಾನೆ !). ತಾಯಿ ಅಥವಾ ಅಜ್ಜಿ ಕತೆ ಹೇಳುವುದೂ ಅದನ್ನು ಕೇಳುತ್ತಾ ಕೇಳುತ್ತಾ ಮಕ್ಕಳು (ಅಥವಾ ಮೊಮ್ಮಕ್ಕಳು) ನಿದ್ದೆ ಹೋಗುವುದೂ ಬಾಲ್ಯದ ಸೌಭಾಗ್ಯಗಳಲ್ಲಿ ಒಂದು. ಕತೆ ಹೇಳುವ ಕತೆ ಕೇಳುವ ರೂಢಿ ಎಲ್ಲ ದೇಶಗಳದ್ದು, ಎಲ್ಲ ಕಾಲಗಳದ್ದು. ಎಳೆಯ ಮಕ್ಕಳಿಗೆ ಕತೆ ಹೇಳುವವರು ಯಾರೇ ಇರಲಿ, ಆ ಕತೆಗಳನ್ನೊತ್ತಕ್ಕೆ ನಮ್ಮಲ್ಲಿ ‘ಅಜ್ಜಿ ಕತೆಗಳು’ ಎಂದೇ ಹೆಸರು!–ಕಾರಣವಿಷ್ಟೆ. ಮಕ್ಕಳ ಮನಶ್ಶಾಸ್ತ್ರವನ್ನು ಅಜ್ಜಿ ಬಲ್ಲಷ್ಟು ಇನ್ನಾರೂ ಅರಿಯರು. ಮಕ್ಕಳ ಮನಸ್ಸಿನ ತಂತಿಯನ್ನು ಎಲ್ಲಿ ಹೇಗೆ ಮಿಟಿದರೆ ಯಾವ ದನಿ ಹೊರಡುತ್ತದೆ ಎಂಬುದು ಅವಳಿಗೆ ಚೆನ್ನಾಗಿ ಗೊತ್ತು. ಅಳುವ, ಚಂಡಿ ಹಿಡಿಯುವ ಮಕ್ಕಳನ್ನು ರಮಿಸುವುದಕ್ಕೆ ಬೇಕು ಕತೆ. ಅಂತಹ ಕತೆ ಹೇಳುವ ತಾಳ್ಮೆ ಅಜ್ಜಿಗಿರುವಷ್ಟು ಬೇರಾರಿಗೂ ಇರಲಾರದು. ಮಕ್ಕಳ ಮನೋರಾಜ್ಯದಲ್ಲಿ ಕಲ್ಪನೆಯದೇ ಪ್ರಭುತ್ವ. ಅಲ್ಲಿ ಏಳು ಹೆಡೆಯ ಸರ್ಪ, ಗಿಳಿಮರಿ ಯಲ್ಲಿ ಜೀವವನ್ನು ಬಚ್ಚಿಟ್ಟ ರಾಕ್ಷಸ, ಏಳು ಮಲ್ಲಿಗೆ ತೂಕದ ರಾಜಕುಮಾರಿ, ಆಕಾಶದಲ್ಲಿ ಹಾರುವ ಕಂಬಳಿ, ಕೀಲುಕುದುರೆ–ಇವೆಲ್ಲ ಸಂಭಾವ್ಯ ಸಂಗತಿಗಳು. ಏಕೆಂದರೆ ಎಳೆಮಕ್ಕ ಳಲ್ಲಿ ಸಂಶಯಬುದ್ಧಿ ಕಡಮೆ, ಕುತೂಹಲ ಪ್ರವೃತ್ತಿ ಹೆಚ್ಚು. ಅಜ್ಜಿಯ ಬಾಯಲ್ಲಿ ಹೇಗೆ ಹಲ್ಲಿಲ್ಲವೋ ಹಾಗೆ ಅವಳ ಕತೆಗಳಿಗೆ ಕೈಕಾಲಿಲ್ಲ. ಆದರೆ ಮಕ್ಕಳು ಮಾತ್ರ ಆ ಕತೆ ಕೇಳುತ್ತಾ ಕೇಳುತ್ತಾ ನಲಿಯುತ್ತವೆ, ಪಾಠ ಕಲಿಯುತ್ತವೆ, ಕಣ್ಣು ತೂಗುತ್ತವೆ, ನಿದ್ದೆ ಮಾಡುತ್ತವೆ. ಕತೆಯೆಂದರೆ “ ಶಿಶು ವಶೀಕರಣ ಮಂತ್ರ. ”

ಕತೆಯ ಮೇಲಿರುವ ಪ್ರೀತಿಯನ್ನೇ ಶಿಕ್ಷಣದಲ್ಲಿ ಒಂದು ಅಸ್ತ್ರವಾಗಿ ಬಳಸಿಕೊಂಡರೆ ಮಕ್ಕಳನ್ನು ತಿದ್ದಿ, ಸತ್ಪ್ರಜೆಗಳನ್ನಾಗಿ ರೂಪಿಸುವುದು ಎಷ್ಟೋ ಸುಲಭ. ಆದುದರಿಂದಲೇ ಕಥಾಮೃತ, ಹಿತೋಪದೇಶ, ಪಂಚತಂತ್ರದಂತಹ ಕಥೆಗಳು ನಮ್ಮಲ್ಲೂ ಈಸೋಪನ ನೀತಿ ಕಥೆಗಳು, ಅರೇಬಿಯನ್ ನೈಟ್ಸ್ ಮುಂತಾದ ಕಥೆಗಳು ಬೇರೆ ಕಡೆಗಳಲ್ಲೂ ಹುಟ್ಟಿ ಬಂದವು. ಇಂತಹ ಕಥೆಗಳು ಒಂದು ಕಾಲದಲ್ಲಿ ಮೂಲ ಶಿಕ್ಷಣದ ಅತ್ಯವಶ್ಯ ಅಂಗಗಳಾ ಗಿದ್ದುವು. ಮಕ್ಕಳಿಗಾಗಿಯೇ ಹುಟ್ಟಿದ ಕಥೆಗಳನ್ನಲ್ಲದೆ, ರಾಮಾಯಣ ಭಾರತದಂತಹ ಕಥೆಗಳನ್ನೂ ಮಕ್ಕಳಿಗೆ ತಕ್ಕಂತೆ ಒಗ್ಗಿಸಿ ಹೇಳಬಹುದು. ಹಾಗೆ ಹೇಳುವವರು ಮಕ್ಕ ಳೊಂದಿಗೆ ಮಕ್ಕಳಾಗಿ ಇರಬೇಕಾದುದು ಮುಖ್ಯ. ಮಕ್ಕಳಿಗಾಗಿ ಕತೆಗಳನ್ನು ಬರೆದು

ಪ್ರಕಟಿಸುವಾಗ ದೊಡ್ಡ ಅಕ್ಷರ, ಸರಳ ಭಾಷೆ, ಪುಟ್ಟಮಾತು, ಎಡೆ ಎಡೆಗಳಲ್ಲಿ ಚಿತ್ರ ಇದ್ದರೆ ಚೆನ್ನ. ಇಡಿಯ ಕತೆ ನಿರೂಪಣಾತ್ಮಕವಾಗಿರುವುದಕ್ಕಿಂತ, ಸಂಭಾಷಣಾ ರೂಪ ದಲ್ಲಿದ್ದರೆ ಮತ್ತಷ್ಟು ಒಳ್ಳೆಯದು. ಇಂತಹ ತಂತ್ರವನ್ನು ಸಮರ್ಥವಾಗಿ ಬಳಸಿಕೊಂಡು ದೊಡ್ಡವರೂ ಮೆಚ್ಚಬಹುದಾದಂತೆ ಮಕ್ಕಳಿಗಾಗಿ ಕಥೆ ಬರೆದವರು ದಿ. ಎಂ. ಎಸ್. ಪುಟ್ಟಣ್ಣನವರು. ಅವರ 'ನೀತಿ ಚಿಂತಾಮಣಿ' ಅಂತಹ ಕಥೆಗಳ ಸುಂದರ ಗುಚ್ಛ.

"ನೀತಿ ಚಿಂತಾಮಣಿ"ಯು ಬಾಲ್ಯ, ಯೌವನ, ಅಪರ ವಯಸ್ಸು ಎಂಬ ಅನುಕ್ರಮಣಿಕೆಯಲ್ಲಿ ಸುಮಾರು ಅರುವತ್ತೈದು ವರ್ಷಗಳಷ್ಟು ಹಿಂದೆ ಮೊದಲ ಸಲ ಪ್ರಕಟವಾಯಿತು. ಗ್ರಂಥದಲ್ಲಿ ಹದಿನೈದು ಭಾಗಗಳು. ಒಂದೊಂದು ಭಾಗದಲ್ಲೂ ಒಂಬತ್ತು, ಹತ್ತರಂತೆ ನೂರೈವತ್ತು ಕಥೆಗಳು. ಪ್ರತಿಯೊಂದು ಭಾಗದಲ್ಲೂ ಒಳಗಿನ ಶೀರ್ಷಿಕ ಪುಟದ ಮೇಲ್ಗಡೆ "ಪುರಾಣೇತಿಹಾಸಗಳಿಂದ ಆಯ್ದ ನೀತಿಬೋಧಕ ಕಥೆಗಳು" ಎಂಬ ಸೂಚನೆ. ಅದರ ಕೆಳಗೆ "ಸತ್ಯಂ ಮಾತಾ...ಮಮ ಬಾಂಧವಾಃ" ಎಂಬ ಸಂಸ್ಕೃತ ಸುಭಾಷಿತ. ಇದರಿಂದ ಕಥೆ ಹೇಳುವಲ್ಲಿ ಪುಟ್ಟಣ್ಣನವರ ಲಕ್ಷ್ಯ ಯಾವುದು ಎಂಬುದು ಸ್ಪಷ್ಟವಾಗುತ್ತದೆ. ಸತ್ಯ, ಜ್ಞಾನ, ಧರ್ಮ, ದಯೆ, ಶಾಂತಿ, ಕ್ಷಮೆ ಮುಂತಾದ ಅವಶ್ಯಕ ನೀತಿ ತತ್ವಗಳನ್ನು ತಿಳಿಸುವ ಕಥೆಗಳು "ನೀತಿ ಚಿಂತಾಮಣಿ"ಯಲ್ಲಿವೆ.

ಮೇಲೆ ತಿಳಿಸಿದಂತೆ "ನೀತಿ ಚಿಂತಾಮಣಿ" ಯಲ್ಲಿ ಒಂಬತ್ತು-ಹತ್ತು ಕಥೆಗಳ ಒಂದೊಂದು ಕಟ್ಟುಗಳಂತೆ ಹದಿನೈದು ಕಟ್ಟುಗಳಿವೆ. ಒಂದೊಂದು ಕಟ್ಟಿನಲ್ಲೂ ಎರಡು-ಮೂರು ಕಥೆಗಳ ಒಳಕಟ್ಟುಗಳು ; ಈ ಒಳಕಟ್ಟಿಗೆ ಅಥವಾ ಗುಂಪಿಗೆ ಉಚಿತವಾದ ತಲೆಕಟ್ಟನ್ನೂ ಕೊಡಲಾಗಿದೆ. ಇಂತಹ ಒಂದೊಂದು ಗುಂಪಿನ ಮೊದಲಲ್ಲೂ ಒಂದು ಸಂಸ್ಕೃತ ಶ್ಲೋಕವೋ ಕನ್ನಡ ಪದ್ಯವೋ ಇರುವುದುಂಟು. ಕಥೆಗಾರರು ಅದರ ಒಡಲಿನಿಂದ ಒಂದು ಕಥೆಯನ್ನು ಹೊರಡಿಸುತ್ತಾರೆ. ಹಾಗೆ ಹೊರಟ ಕಥೆಯಿಂದ ಒಂದು ನೀತಿಯನ್ನು ಹಿಂಡಿ ತೆಗೆಯುತ್ತಾರೆ, ಎಂದರೆ ಶ್ಲೋಕಾರ್ಥ ಅಥವಾ ಪದ್ಯಾರ್ಥವನ್ನು ವಿವರಿಸುವ ಕಥೆ. ಕೊನೆಯಲ್ಲಿ ಫಲಿತವಾಗುವ ನೀತಿ ನಿರೂಪಣೆ. ಸಾಮಾನ್ಯವಾಗಿ ಆ ನೀತಿಯನ್ನು ಒಂದು ಸೊಗಸಾದ ಗಾದೆಯ ರೂಪದಲ್ಲಿ ತಿಳಿಸುತ್ತಾರೆ. ಹೀಗೆ ಶೀರ್ಷಿಕೆ, ಶ್ಲೋಕ ಅಥವಾ ಪದ್ಯ, ಕಥೆ, ನೀತಿ ಎಲ್ಲವೂ ಒಂದಕ್ಕೊಂದು ಹೊಂದಿಕೊಂಡು, ಒಂದೆರಡು ಪುಟಗಳಲ್ಲಿ ಅಡಕವಾಗಿ ನಿಲ್ಲುತ್ತವೆ.

ಇಲ್ಲಿಯ ಕಥಾಪ್ರಪಂಚ ತುಂಬ ವಿಸ್ತಾರವಾದದ್ದು. ಪುರಾಣ-ಕಾವ್ಯಗಳಾದ ರಾಮಾಯಣ, ಭಾರತ, ಭಾಗವತಾದಿಗಳಿಂದ ಇನ್ನಿತರ ಭಾರತೀಯ ಗ್ರಂಥಗಳಿಂದ ವಿದೇಶೀ ವಾಙ್ಮಯಗಳಿಂದ ಜನಜನಿತ ಪ್ರಸಂಗಗಳಿಂದ' ಜನಪದ ಸಾಹಿತ್ಯದಿಂದ ಇನ್ನೂ ಎಷ್ಟೋ ಆಕರಗಳಿಂದ ಆರಿಸಿತಂದ ಹಳೆಯ-ಹೊಸಕಥೆಗಳು ಇಲ್ಲಿವೆ. ಕೆಲವು ಕಥೆಗಳು ಮೂಲದಲ್ಲಿ ಇದ್ದಂತೆಯೇ ಇವೆ ; ಇನ್ನೂ ಕೆಲವು ಹೊಸ ಹೊಸ ರೂಪವನ್ನು ಧರಿಸಿವೆ. ಕೆಲವು ಕಥೆಗಳನ್ನು ಓದುವಾಗ, "ಎಲ್ಲಿಯೋ ಓದಿದ ನೆನಪು" ಕೆಲವರಿಗಾಗಬಹುದು. ಆದರೆ ಈ ಕಥೆಗಳೆಲ್ಲ ಎಳೆಯರಿಗಾಗಿ ಹುಟ್ಟಿಕೊಂಡವುಗಳಾದುದರಿಂದ ಎಲ್ಲವೂ ಅವರಿಗೆ

ಹೊಸತಾಗಿಯೋ ರುಚಿ-ರುಚಿಯಾಗಿಯೋ ತೋರಬಹುದು. ಒಂದೆರಡು ಉದಾಹರಣೆ ಗಳಿಂದ ಇಲ್ಲಿಯ ಕಥಾಸ್ವರೂಪ, ಕಥಾ ಸೌಂದರ್ಯ ಹೇಗೆ, ಏನು ಎಂಬುದನ್ನು ತಿಳಿಸ ಬಹುದು.

"ಮುಷ್ಕರ" ಎಂಬ ತಲೆಬರಹದಲ್ಲಿ ಪುಟ್ಟಣ್ಣನವರು 'ಸತೀದೇವಿ'ಯ ಕಥೆ ಯನ್ನು ಹೇಳಿದ್ದಾರೆ. ದಕ್ಷಯಾಗಕ್ಕೆ ಪರಮೇಶ್ವರನಿಗೆ ಕರೆ ಬಾರದಿದ್ದರೂ, ತವರಿನ ಹಬ್ಬ ಎಂಬುದರಿಂದ ದಾಕ್ಷಾಯಿಣಿಯು ಹಠಮಾಡಿ ಹೋದದ್ದು, ಅಲ್ಲಿ ದಕ್ಷನು ಅಳಿಯ ನನ್ನು ನಿಂದಿಸಿದ್ದು, ಅದನ್ನು ಸಹಿಸಲಾರದೆ ದಾಕ್ಷಾಯಿಣಿ ಯಜ್ಞಕುಂಡಕ್ಕೆ ಬಿದ್ದು ಪ್ರಾಣತ್ಯಾಗ ಮಾಡಿದ್ದು-ಈಶ್ವರಾಂಶನಾದ ವೀರಭದ್ರನು ದಕ್ಷಯಾಗವನ್ನು ಕೆಡಿಸಿದ್ದು ಇವೆಲ್ಲ ಮೂಲದಲ್ಲಿ ಇದ್ದಂತೆಯೇ ಇಲ್ಲೂ ಇವೆ. ದಕ್ಷನು ಮಾಡುವ ತಪ್ಪು ಒತ್ತಟ್ಟಿಗಾ ದರೆ ಸತೀ ದೇವಿಯ ಹಠಮಾರಿತನ-ಮುಷ್ಕರವೂ ಈ ಅನಾಹುತ ಪರಂಪರೆಗೆ ಇನ್ನೊಂದು ಕಾರಣವಲ್ಲವೇ? ಆದುದರಿಂದ ಮುಷ್ಕರ ಒಳ್ಳೆಯದಲ್ಲ! ಯಾರಾದರೂ ಸರಿಯೇ ಮುಷ್ಕರ ಹಿಡಿಯಬಾರದು. ಐವತ್ತು ಅರವತ್ತು ವರ್ಷಗಳ ಹಿಂದೆ ಪುಟ್ಟಣ್ಣನವರು ಮಕ್ಕಳಿಗಾಗಿ ಹೇಳಿದ ಈ ನೀತಿ ಕಥೆ, ಕಥೆಯು ನೀತಿ ಈವೊತ್ತಿಗೂ ಎಷ್ಟು ಚೆನ್ನಾಗಿ ಒಪ್ಪು ತ್ತದೆ! 'ನಮ್ಮ ನೋಟ ಸರಿಯಾಗಿರಬೇಕು' (ಇದನ್ನೇ 'ಸಮ್ಯಗ್ದರ್ಶನ' ಎಂದು ಹೇಳುವು ದಿದೆ.) ಇದನ್ನು ವಿವರಿಸುವುದಕ್ಕೆ ಇನ್ನೊಂದು ಕಥೆ. ಹನುಮಂತನು ರಾವಣನ ಅಂತಃಪುರ ದಲ್ಲಿ ಸೀತೆಯನ್ನು ಹುಡುಕುತ್ತಿದ್ದಾಗ, ನಿದ್ರಿಸುತ್ತಿದ್ದ ಮಂಡೋದರಿಯನ್ನೇ ಸೀತೆಯೆಂದು ಭ್ರಮಿಸಿದರೂ, ಮತ್ತೆ ಸೀತೆಯ ಕಾಲಿನಲ್ಲಿ ಇರುವುದು ಪದ್ಮರೇಖೆ, ಇವಳ ಕಾಲಿನಲ್ಲಿರುವುದು ಕಾಕರೇಖೆ. ಆದ್ದರಿಂದ ಇವಳು ಸೀತೆಯಲ್ಲ ಎಂದುಕೊಳ್ಳುವನು. 'ಹೇಳಿದ್ದನ್ನೆಲ್ಲಾ ನಂಬು ವುದು' ಒಳ್ಳೆಯದಲ್ಲ ಎಂಬುದಕ್ಕೆ ಗರಳವೃಕ್ಷನ ಕಥೆ ಬರುತ್ತದೆ. ಆತ ಅನ್ಯೋನ್ಯರಾಗಿದ್ದ ದಂಪತಿಗಳಲ್ಲಿ 'ನಿನ್ನ ಗಂಡ ಪೂರ್ವಜನ್ಮದಲ್ಲಿ ಅಪ್ಪಾರನಾಗಿದ್ದ' ಎಂದು ಹೆಂಡತಿ ಯಲ್ಲೂ, 'ನಿನ್ನ ಹೆಂಡತಿ ನಾಯಿಯಾಗಿದ್ದಳು' ಎಂದು ಗಂಡನಲ್ಲೂ ಸುಳ್ಳು ಹೇಳುವನು. ಗಂಡಹೆಂಡಿರು ಅದನ್ನು ನಂಬಿ ಕೆಡುವರು. ಸಮಾಧಾನ ಮುಖ್ಯ, ಕೋಪವೆಂಬುದು ಅನರ್ಥಕಾರಿ ಎಂಬ ನೀತಿ ನಿರೂಪಣೆಗೆ ಮೂಕ ಜಂತುವಾದ ನಾಯಿಯೊಂದರ ಕಥೆ. ಆ ನಾಯಿ, ಅದ್ಭುತವಾದ ಸ್ವಾಮಿ ಭಕ್ತಿಯನ್ನು ಪ್ರದರ್ಶಿಸಿದರೂ, ಯಜಮಾನ ಮಾತ್ರ ಅಸ ಹನೆ, ಅವಿವೇಕಗಳಿಂದ ಅದನ್ನು ಕೊಂದುಬಿಡುವನು. (ಈ ಕತೆ ಬೇರೆ ಬೇರೆ ಕಡೆ ಬೇರೆ ಬೇರೆ ರೂಪಗಳಲ್ಲಿ ಪ್ರಕಟವಾದದ್ದಿದೆ)-ಹೀಗೆ ದೇವರ ಸಾರ್ವತ್ರಿಕತೆ, ವಿಧೇಯತೆ, ಸ್ವಜನ ಸ್ನೇಹ, ಅಜ್ಞಾನ, ಅಜಾಗರೂಕತೆ, ಮಿತವಾದ ಅನ್ನ ಪಾನ, ಸದ್ವಿದ್ಯೆ, ವಿದ್ಯಾಗರ್ವ, ಗುರುಭಕ್ತಿ, ಅಹಂಕಾರ, ಸತ್ಯಸಂಧತೆ, ಕಾಪಟ್ಯ, ಪರದೂಷಣೆ, ಪ್ರಾಣಿಹಿಂಸೆ, ಕ್ಷಮೆ, ಶಮೆ, ಪ್ರಯತ್ನ ಶೀಲತೆ, ಸತ್ಸಂಗ, ಸಮಯೋಪಾಯ, ದೈವನಿಷ್ಠೆ, ಪರಮತ ಸಹಿಷ್ಣುತೆ, ಪರೋಪಕಾರ, ಸತ್ಪಾತ್ರದಾನ, ಐಕಮತ್ಯ-ಇಂತಹ ಹತ್ತು. ನೂರು ನಯನೀತಿ ವಿಚಾರ ಗಳನ್ನು ಹೇಳುವ ಅನ್ಯಾನ್ಯ ಕಥೆಗಳು ಚಿತ್ರವಿಚಿತ್ರ ಕಥೆಗಳು, 'ನೀತಿ ಚಿಂತಾಮಣಿ' ಯಲ್ಲಿವೆ.

ನಯ-ನೀತಿ–ಧರ್ಮ ಎಂದಾಗ, ಈಗೀಗ ಏಕೋ ಒಂದುಬಗೆಯ ಜುಗುಪ್ಸೆ, ತಾತ್ಸಾರ, ಅಶ್ರದ್ಧೆ ಬಲಿಯುತ್ತಿದೆ. 'ಕಲೆ ಕಲೆಗಾಗಿಯೇ' ಎಂಬ ವಾದ ಬೆಳೆಯುತ್ತಿದೆ. ಅದೇನಿದ್ದರೂ ಎಳೆಯ ಮಕ್ಕಳು ಓದುವ, ಕೇಳುವ, ಕಥೆ ಕಾವ್ಯಾದಿಗಳಿಂದ ಮನೋರಂಜನೆ ಯಷ್ಟೆ ಅಲ್ಲ, ಇನ್ನೇನೋ ಆಗಬೇಕಾದ್ದಿದೆ—ಅದೇ ಮನಸ್ಸಂಸ್ಕಾರ. ಮಕ್ಕಳ ಮನಸ್ಸು ಕನ್ನಡಿಯಂತೆ. ಅವರು ಬೆಳೆದಂತೆ ಆ ಕನ್ನಡಿಯಲ್ಲಿ ಜಿಡ್ಡು, ಧೂಳು ಅಂಟಿಕೊಳ್ಳು ವುದಿದೆ. ಮನಸ್ಸಿಗೆ ಅಂಟುವ, ಕಸ, ಕೊಳೆಗಳನ್ನು ಚಿಕ್ಕಂದಿನಲ್ಲಿ ಅವರ ಓದುವ, ಕೇಳುವ ಕತೆಗಳು ಒರಸಿ ತೊಳೆದು ತೆಗೆಯುತ್ತವೆ. ಮಕ್ಕಳ ಮನಸ್ಸು ಹಸಿಮಣ್ಣಿನಂತೆ. ಬಿದ್ದದ್ದೆಲ್ಲಾ ಅಂಟಿಕೊಳ್ಳುತ್ತದೆ. ಒಳ್ಳೆಯ ವಿಚಾರ ಬೀಜಗಳೇ ಬೀಳುವಂತಾದರೆ ಇನ್ನೂ ಒಳ್ಳೆಯದಲ್ಲವೇ ? ಶಿವಾಜಿ, ಗಾಂಧೀಜಿಯಂತಹವರ ಬದುಕನ್ನು ರೂಪಿಸಿದ್ದು ಚಿಕ್ಕಂದಿ ನಲ್ಲಿ ಅವರು ಕೇಳಿದ ಕತೆಗಳೆಂದು ಹೇಳುವುದಿದೆ. ನೀತಿಬೋಧೆಯನ್ನು ನೀತಿ ಬಾಧೆ ಎಂದು ಕೆಲವರು ಹಾಸ್ಯ ಮಾಡುವುದುಂಟು. ಬಾಲ ಸಾಹಿತ್ಯದಲ್ಲಿ ನೀತಿ ವಿಚಾರವು ಉಂಡುಂಡೆಯಾಗಿ ಬಂದಾಗ ಅದು ನೀತಿ ಬಾಧೆಯಾಗಬಹುದು. ಕತೆ ಯಾವುದು–ನೀತಿ ಯಾವುದು ಎಂಬುದು ಗೊತ್ತಾಗದಂತೆ, ಎರಡರ ಸಮರಸ ಪಾಕವಾಗಿದ್ದರೆ ಮಕ್ಕಳು 'ಒಲ್ಲೆ' ಎನ್ನದೆ, 'ತನ್ನಿ' ಎಂದು ಸಂತೋಷದಿಂದ ಚಪ್ಪರಿಸುತ್ತವೆ. ಶಿಶುಸಾಹಿತ್ಯ ಪಿತಾಮಹ ದಿ. ಪಂಜೆಯವರು ಇದನ್ನೇ ಹೇಳಿದ್ದುಂಟು. 'ನೀತಿ ಚಿಂತಾಮಣಿ' ಯಲ್ಲಿ ರುವ ಕತೆಗಳೆಲ್ಲ ಇಂತಹವುಗಳು : ಇಂತಹವುಗಳಲ್ಲಿ ಅತ್ಯುತ್ತಮ ವರ್ಗಕ್ಕೆ ಸೇರಬಲ್ಲವು.

'ನೀತಿ ಚಿಂತಾಮಣಿ' ಯ ಭಾಷೆ ಸರಳ, ಸುಂದರ. "...ನಂಜೇ ಲಿಂಗಭಟ್ಟನು ಬರಗೆಟ್ಟು ಅಲ್ಲಿದ್ದ ತಿಂಡಿಗಳನ್ನು ತಿಂದನು. ಹಣ್ಣುಗಳನ್ನು ಮೋದಿದನು. ಉಂಡೆಗಳನ್ನು ಕವಳಿಸಿದನು, ಚಕ್ಕುಲಿಗಳನ್ನು ಕಟುಕಿಸಿದನು...." ಇಂತಹ ಉತ್ಸಾಹದ ಭಾಷೆ ಅಲ್ಲಿ ಯದು. ಭಾಷೆ ತಿಳಿಯುವ ಮಕ್ಕಳು ತಾವೇ ಓದಿ, ತಿಳಿಯದ ಮಕ್ಕಳು ಹಿರಿಂದ ಕೇಳಿ ಆನಂದಿಸಬಹುದಾದ ಕತೆಗಳು ಅಲ್ಲಿಯವು. ಪುನರ್ಮುದ್ರಣವಾಗುವಾಗ ದೊಡ್ಡ ಅಕ್ಷರ ಗಳಲ್ಲಿ ಸೂಕ್ತ ಚಿತ್ರಗಳೊಂದಿಗೆ ಮುದ್ರಿಸಿದ್ದರಿಂದ ಗ್ರಂಥದ ಆಕರ್ಷಣೆ ಇನ್ನಷ್ಟು ಹೆಚ್ಚಿದೆ. ಭಾವೀ ಜನಾಂಗದ ಮನಸ್ಸಿನ ಬೆಳವಣಿಗೆಗೆ ಬೇಕಾಗುವ ಅತ್ಯುತ್ತಮ, ಅತ್ಯವಶ್ಯಕ ಆಹಾರ—'ನೀತಿ ಚಿಂತಾಮಣಿ'.

'ನೀತಿ ಚಿಂತಾಮಣಿ'ಯಂಥ ಗ್ರಂಥವನ್ನು ಕಾಣುವಾಗ ದಿ. ತೀ. ನಂ. ಶ್ರೀಕಂಠಯ್ಯನವರ ಒಂದು ಮಾತು ನೆನಪಿಗೆ ಬರುತ್ತದೆ. "....ಇಷ್ಟು ಆವಶ್ಯಕವಾದ ಪೂರ್ವಕಾಲದ ಕತೆಗಾರಿಕೆ ನಮ್ಮಲ್ಲಿ ಬಿಲವಾಗುತ್ತಿರುವುದು ಶೋಚನೀಯ ಸಂಗತಿ.... ಹಳಬರಿಂದ ಆ ಬಗೆಯ ಕತೆಗಳನ್ನೆಲ್ಲ ಸಂಗ್ರಹಿಸಿ, ಮಕ್ಕಳು ಒಪ್ಪುವ ರೀತಿಯಲ್ಲಿ ಬರೆದು, ಸುಂದರವಾದ ಪುಟ್ಟ ಪುಸ್ತಕಗಳಲ್ಲಿ ದಪ್ಪ ಅಕ್ಷರಗಳಲ್ಲಿ ಚಿತ್ರಗಳೊಡನೆ ಅಚ್ಚು ಹಾಕಿಸಿ ಹೊರಡಿಸಬೇಕಾದ್ದು ನಮ್ಮ ಪ್ರಥಮ ಕರ್ತವ್ಯ....ಅವರಿಗೆ ತಕ್ಕ ಪುಸ್ತಕಗಳನ್ನು ಸಿದ್ಧಪಡಿ ಸುವ ಪ್ರಯತ್ನಗಳು ಸರಿಯಾಗಿ ನಡೆದ ಹೊರತು ನಮ್ಮ ವಿದ್ಯಾಭ್ಯಾಸ ಸಮರ್ಪಕವಾಗು ವುದಿಲ್ಲ" ('ಮಕ್ಕಳಿಗೆ ಹೇಳುವ ಕಥೆಗಳು'–"ಸಮಾಲೋಕನ").

## ೯. ಜಿ. ಎನ್. ಲಕ್ಷ್ಮಣ ಪೈಯವರ 'ಮಕ್ಕಳ ಗೀತಗಳು'

ಬಿಸಿಲೂ ಮಳೆಯೂ ಕೂಡಿದವು ;
ಸೆಕೆಯನು ತಂಪನು ಮಾಡಿದವು

* * *

ಕೋತಿಗು ಕೋಳಿಗು ನಂಟತನ
ಮಾಡಲು ಬೇಕೆಂಬುವ ಹದನ
ಮೃಗಗಳು ಖಗಗಳು ಚರ್ಚಿಸುತ,
ಮದುವೆಗೆ ಮಾಡಿದರಣಿ ನಗುತ.

* * *

ಸಂಭ್ರಮದೊಳಗಾಯಿತು ಮದುವೆ
ಮರ್ಕಟ ಕುಕ್ಕುಟರಾ ಮದುವೆ.

ಹೀಗೆ ಸುಮಾರು ಮೂವತ್ತಾರು ವರ್ಷಗಳ ಹಿಂದೆ, ಮರ್ಕಟ ವರನಿಗೂ ಕುಕ್ಕುಟ ವಧುವಿಗೂ ಅಂತರ್ಜಾತೀಯ ವಿವಾಹ ಮಾಡಿಸಿ, ಪಶುಪಕ್ಷಿ ಜಗತ್ತಿನಲ್ಲಿ 'ಭಾವೈಕ್ಯ' ಸಾಧನೆಗೊಂದು ಮೆಟ್ಟಿಲನ್ನು ಕಟ್ಟಿಕೊಟ್ಟವರು ಕೀರ್ತಿಶೇಷ ಜಿ. ಎನ್. ಲಕ್ಷ್ಮಣ್ ಪೈಯವರು ! 'ನ ಭೂತೋ' ಎಂಬಂತಹ ವಿಜೃಂಭಣೆಯ ಈ ವಿವಾಹ ಪ್ರಸಂಗದ ಸವಿಸ್ತರ ಹಾಗೂ ಹೃದ್ಯವರ್ಣನೆ ಬೇಕಿದ್ದರೆ ಕುತೂಹಲಿಗಳು ಪೈಯವರ 'ಅಭಿನಯ ಗೀತಾವಳಿ' ಯನ್ನು ಓದಬೇಕು. 'ಮಂಗನ ಮದುವೆ' ಯೊಂದಿಗೆ ಇನ್ನಿತರ ಹತ್ತಾರು ಸ್ವಾರಸ್ಯಕರ ಗೀತಗಳನ್ನೂ ಓದುಗರು ಆ ಸಂಗ್ರಹದಲ್ಲಿ ಕಂಡು ಸಂತೋಷಪಡಬಹುದು. ಅದೊಂದೇ ಅಲ್ಲ, ಅಂತಹ ಸೊಗಸಾದ ಶಿಶು ಗೀತಗಳ ನಾಲ್ಕಾರು ಪುಸ್ತಕಗಳನ್ನು ಈ ಶತಮಾನದ ಎರಡು ಮೂರನೆಯ ದಶಕದಲ್ಲಿ ಪ್ರಕಟಿಸಿ, ದಕ್ಷಿಣ ಕನ್ನಡ ಜಿಲ್ಲೆಯ ಉತ್ತಮ ಬಾಲ ಸಾಹಿತ್ಯ ರಚಯಿತರಲ್ಲಿ ಒಬ್ಬರೆನಿಸಿದ್ದರೂ, ಮರೆಯಲ್ಲೇ ಇದ್ದು ಈಗ ಕಣ್ಮರೆಯೂ ಆಗಿರುವವರೆಂದರೆ ಜಿ. ಎನ್. ಲಕ್ಷ್ಮಣ ಪೈಯವರು. ಅವರ ಕೃತಿಗಳನ್ನು, ತನ್ಮೂಲಕ ಕೃತಿಕಾರನನ್ನು ನೆನಪಿಸಿಕೊಡುವುದು ಈ ಲೇಖನದ ಉದ್ದೇಶ.

ಕನ್ನಡದ ಒಟ್ಟು ಬಾಲಸಾಹಿತ್ಯ ಸಂಪದದಲ್ಲಿ ದಕ್ಷಿಣ ಕನ್ನಡದ ಪಾಲು ಬಲು ದೊಡ್ಡದು. ಒಂದು ಕಾಲದಲ್ಲಿ ಇಲ್ಲಿ ನಿರ್ಮಾಣವಾದಷ್ಟು ಬಾಲಸಾಹಿತ್ಯವಾಗಲಿ, ಸ್ಥಾಪಿತವಾದಷ್ಟು ಬಾಲ ಸಾಹಿತ್ಯ ಪ್ರಕಟನ ಸಂಸ್ಥೆಗಳಾಗಲಿ ಅನ್ಯತ್ರ ಆಗಿಲ್ಲವೆಂದರೂ ತಪ್ಪಾಗದು. ಪ್ರಾತಃಸ್ಮರಣೀಯರಾದ ಪಂಜೆಯವರು, ಅವರ ಜತೆಗಾರರಾದ ಉಗ್ರಾಣ ಮತ್ತು ಉಳ್ಳಾಲ ಮಂಗೇಶರಾಯರು, ಎಂ. ಎನ್. ಕಾಮತರು, ಕಾರಂತರು, ಬಿ. ಶಂಕರ ಭಟ್ಟರು ಮತ್ತವರ ಸೋದರ ಬಿ. ಎಂ. ಶರ್ಮರು–ಮೊದಲಾದ ಲೇಖಕರು, ಬಾಸೆಲ್ ಮಿಶನ್ ಪ್ರೆಸ್, ಬಾಲ ಸಾಹಿತ್ಯಮಂಡಲ, ಬಾಳಿಗಾ ಎಂಡ್ ಸನ್ಸ್, ಮಕ್ಕಳ ಮಂಟಪ, ಕಿರಿಯರ ಪ್ರಪಂಚವೇ ಮುಂತಾದ ಸಂಸ್ಥೆಗಳು ರಚಿಸಿದ, ಪ್ರಕಟಿಸಿದ ಬಾಲವಾಙ್ಮಯವನ್ನು ಕಂಡಾಗ ಅಪರ ವೈವಿಧ್ಯ, ವೈಪುಲ್ಯ, ಸೌಂದರ್ಯಗಳು ತಲೆದೂಗಿಸುವಂತಿವೆ.

ಹಾಗೆಯೇ ಪಠ್ಯಪುಸ್ತಕಗಳು 'ರಾಷ್ಟ್ರೀಯಕರಣ' ಆಗುವ ಮೊದಲು ಈ ಜಿಲ್ಲೆಯಲ್ಲಿ ಪ್ರಚುರವಾಗಿದ್ದ ಮ್ಯಾಕ್ಮಿಲನ್ ರೀಡರ್, ಪ್ರೌಢ ಪಾಠ ಮಾಲಿಕೆ, ಸುಬೋಧ ಪಾಠಾವಲಿ, ಸಿರಿಗನ್ನಡ ಪಾಠಮಾಲೆ, ಬಾಲ ಸಾಹಿತ್ಯ ಮಾಲೆಯೇ ಮೊದಲಾದ ಹತ್ತು-ಹಲವು ಪಠ್ಯಗಳು ಅವುಗಳ ವಿಷಯ, ಭಾಷೆ, ನಿರೂಪಣೆ, ಚಿತ್ರ, ಮುದ್ರಣ ಇವುಗಳಿಂದ 'ಸಾಲೆ ಬೇಡ' ಎನ್ನುವ ಮಕ್ಕಳಿಗೂ ಓದಿನ ಹುಚ್ಚು ಹಿಡಿಸುವಂತಿದ್ದುವು ; ಇಂದಿನ ಪಠ್ಯ ಪುಸ್ತಕ ನಿರ್ದೇಶಕರಿಗೂ ಮಾರ್ಗದರ್ಶಿಗಳಂತಿದ್ದುವು ; ಅವರು ಖಂಡಿತವಾಗಿಯೂ ಅನುಸರಿಸಲು ತಕ್ಕಂತಹವು. ಈಗ ಮಳೆಯಾಗಿರುವ, ಮೂಲೆಯಲ್ಲಿದ್ದರೂ ಗೆದ್ದಲು ಹಿಡಿದಿರುವ ಆ ಅಮೂಲ್ಯ ವಾಙ್ಮಯಸಂಪತ್ತನ್ನು ಹುಡುಕಿ, ಕೂಡಿಸಿ, ಕಾಪಿಡುವ ಪ್ರಯತ್ನವನ್ನು ಯಾರಾದರೂ ಮಾಡಿದ್ದಾದರೆ ಅವರಿಗೆ ಶ್ರೀ ರಾಜರತ್ನಂ ಹೇಳಿದಂತೆ-'ಪುಣ್ಯ ಬರುತ್ತದೆ !' ಪ್ರಕೃತ ಲೇಖಕನಲ್ಲಿ ಸಾಹಿತ್ಯಾಭಿರುಚಿ,-ಅನುಭವಗಳೇನಾದರೂ ಇದ್ದರೆ ಅವು ಅವ ನೋದಿದ ಪಠ್ಯಗಳಿಂದಲೇ-ಕಾರಂತರ 'ಸಿರಿಗನ್ನಡ ಪಾಠಮಾಲೆ'-ಪ್ರೇರಿತವೂ ಪೋಷಿತವೂ ಆದದ್ದಲ್ಲದೆ ಬೇರೆಯಲ್ಲ. ವಿ. ಸೀ., ರಾಜರತ್ನಂ, ಹೊಯ್ಸಳರನ್ನು ಕಿರು ಹರೆಯದಲ್ಲೇ ಕಂಡು-ಓದಿ-ಕೊಂಡಾಡಿ, ಇಂದಿಗೂ ನೆನಪಿಡುವಂತಾದದ್ದು ಆ ಪಠ್ಯಗಳಿಂದಲೇ. ಹಾಗೆಯೇ ಅವೊತ್ತು ಓದಿ ಸಂತೋಷಪಟ್ಟಂತೆ, ಈವೊತ್ತೂ ನೆನೆದು ಸಂತೋಷ ಪಡುವ ಹೆಸರುಗಳಲ್ಲಿ ಒಂದು- ಜಿ. ಎಸ್. ಲಕ್ಷ್ಮಣ ಪೈಯವರದ್ದು.

ಲಕ್ಷ್ಮಣ ಪೈಯವರು ವಿದ್ಯಾರ್ಥಿ ದಶೆಯಲ್ಲೇ, ಎಂದರೆ 1920ರ ಸುಮಾರಿನಲ್ಲಿ ಸಾಹಿತ್ಯ ರಚನೆಗೆ ತೊಡಗಿದವರು. ನಾನು ಕಂಡಿರುವ, ಕೊಂಡಿರುವ, ಅವರ ಶಿಶುಗೀತ ಸಂಕಲನಗಳಲ್ಲಿ ಮುಖ್ಯವಾದವು ನಾಲ್ಕು. ಅವೆಂದರೆ 'ಪದ್ಯ ರತ್ನಾವಳಿ' (1921), 'ಅಭಿನಯ ಗೀತಾವಳಿ' (1933), 'ಅಭಿನಯಗೀತ ಮಂಜರಿ' (ಕಾಲ ?) ಮತ್ತು 'ಶಿಶುಗೀತ ಮಾಲೆ' (1939). ಪೈಯವರ ಇತರ ಕೆಲವು ಗದ್ಯ-ಪದ್ಯ ಕೃತಿಗಳನ್ನು ನಾನಿಲ್ಲಿ ಪ್ರಸ್ತಾವಿಸುತ್ತಿಲ್ಲ. ಮೇಲಿನ ನಾಲ್ಕು ಸಂಗ್ರಹಗಳಲ್ಲಿ ಒಟ್ಟು ತೊಂಬತ್ತನಾಲ್ಕು ಗೀತಗಳಿವೆ. ಅವುಗಳಲ್ಲಿ ವಸ್ತುವೈವಿಧ್ಯವಿದೆ, ವರ್ಣ ವೈವಿಧ್ಯವಿದೆ. ಎಳೆಯ ಮಕ್ಕಳು ಕೇಳಬೇಕಾದ, ತಿಳಿಯ ಬೇಕಾದ, ಅರಿತು ನಡೆಸಬೇಕಾದ ಸಂಗತಿಗಳನ್ನು ತಿಳಿಯಾಗಿ, ಸೊಗಸಾಗಿ ಹೇಳುವ ಶ್ಲಾಘ್ಯ ಪ್ರಯತ್ನವನ್ನು ಆ ಗೀತಗಳಲ್ಲಿ ಕಾಣಬಹುದು. ಅವೆಲ್ಲ ಶಿಶುಗೀತಗಳಾಗಿರುವುದರಿಂದ ಯಾವುದೇ ವಿಭಜನಕ್ರಮ, ಲಕ್ಷ್ಯ ಲಕ್ಷಣ ಸಮನ್ವಯಗಳಿಗೆ ತೊಡಗದೆ ಮೊತ್ತದಲ್ಲಿ ಅವು ಎಂತಹವು ಎಂಬುದನ್ನಿಲ್ಲಿ ನಿರೂಪಿಸುತ್ತಿದ್ದೇನೆ.

## ಪದ್ಯ ರತ್ನಾವಳಿ

ವಿದ್ಯಾರ್ಥಿ ದಶೆಯಲ್ಲಿ ಲಕ್ಷ್ಮಣ ಪೈಯವರು ಪ್ರಕಟಿಸಿದ ಪದ್ಯಗುಚ್ಛವಿದು. ಸಹಜವಾಗಿಯೇ ಪ್ರಾಯದ ಎಳಮೆ ಇಲ್ಲಿಯ ಕವಿತ್ವದಲ್ಲೂ ಕಂಡು ಬಂದರೆ ತಪ್ಪೆನ್ನಲಾಗದು. ಮಾವಿನ ಹಣ್ಣಿಗೊಂದು ಸ್ವಾದುತ್ವ ಇರುವಂತೆ ಕಸುಗಾಯಿಗೂ ಒಂದು ರುಚಿ ಇರುವುದುಂಟು. ಎಳೆಯವರಿಗೆ ಹಣ್ಣಿಗಿಂತ ಕಸುಗಾಯಿಯೇ ಪ್ರಿಯವಾಗುವುದೂ ಉಂಟು.

ಪ್ರಕೃತ ಸಂಗ್ರಹದ ಪದ್ಯಗಳು ಆ ಬಗೆಯವು. ಇವುಗಳಲ್ಲಿ ಹೆಚ್ಚಿನವು ಕಥನಗೀತಗಳು. ಉದಾ : ಮಡಿವಾಳನೂ ಮೊಸಳೆಯೂ, ಕಾಗೆಯೂ ಹೂಜಿಯೂ, ಹುಲಿಯೂ ಬ್ರಾಹ್ಮಣನೂ, ಗಿಳಿಯೂ ಅರಸನೂ ಇತ್ಯಾದಿ. ಹತ್ತಾರು ನೀತಿ ವಿಚಾರಗಳನ್ನು ವಿವಿಧ ಛಂದೋಬಂಧಗಳಲ್ಲಿ ರಾಗತಾಳಬದ್ಧವಾಗಿ ಬೋಧಿಸುವ ಪ್ರಯತ್ನವನ್ನು ಈ ಪದ್ಯಗಳಲ್ಲಿ ಮನಗಾಣಬಹುದು.

## ಅಭಿನಯ ಗೀತಾವಳಿ

ಎಲ್ಲ ದೃಷ್ಟಿಯಿಂದಲೂ ಸೊಗಸಾದ ಗೀತಗಳ ಸಂಕಲನ. 'ಪದ್ಯ ರತ್ನಾವಳಿ' ಪ್ರಕಟವಾದ ಹನ್ನೆರಡು ವರ್ಷಗಳ ಅವಧಿಯಲ್ಲಿ ಪೈಯವರ ಕೈ ಬಾಲಸಾಹಿತ್ಯ ಸೃಷ್ಟಿಗೆ ತಕ್ಕಂತೆ ಕುದುರಿರುವುದನ್ನೂ, ಅವರ ಲೇಖನಿ ಹೆಚ್ಚು ಸರಸಾಗ್ರವಾಗಿರುವುದನ್ನೂ ಈ ಸಂಗ್ರಹದ ಪದ್ಯಗಳು ಸಮರ್ಥಿಸುತ್ತವೆ. ಸಂಗ್ರಹದ ಎಷ್ಟೋ ಗೀತಗಳು ಕಾಲ ಕಾಲಕ್ಕೆ ಬೇರೆ ಬೇರೆ ಪುಸ್ತಕಗಳಲ್ಲಿ ಪ್ರಕಟವಾಗಿ ಎಳೆಯರ ಕಿವಿ-ಕಣ್ಣುಗಳನ್ನು ಸೆಳೆದು ಅವರ ನಾಲಗೆಯಲ್ಲಿ ನಲಿಯುತ್ತಿದ್ದವು. 'ನನ್ನ ಪಯಣ' (ಆದಿತ್ಯವಾರ ಕಲ್ಕತ್ತವನು ಸೇರ್ದೆ) 'ಗಿಳಿ' (ಅರಗಿಳಿ ಮರಿಗಿಳಿ ಬಾರಿಲ್ಲಿ) 'ನಾಯಿ' (ಬೇಟೆನಾಯಿ ಮಂದೆ ನಾಯಿ....) 'ಸ್ವರ್ಗ-ನರಕ' (ಮೋದಗೊಂಡು ನಗಲು ಸ್ವರ್ಗ....) 'ಹೂ ನೂರು ವವಳ ಹಾಡು' (ಬನ್ನಿರಿ ಬನ್ನಿರಿ ಬಾಲೆಯರೆಲ್ಲರು....) 'ಬಣ್ಣಗಳು' (ನೀಲಿ, ಹಳದಿ, ಕೆಂಪು ಮೂರು) ಅಂತಹಗಳಲ್ಲಿ ಕೆಲವು. 'ಕನ್ನಡಿಗರು' ಎಂಬ ಪದ್ಯ ಮಕ್ಕಳಲ್ಲಿ ನಾಡು ನುಡಿಗಳ ಭಕ್ತಿ-ಪ್ರೀತಿಗಳನ್ನು ಬಲಿಸುವಂತಹದ್ದು. 'ಸೀಮೆಯದಾವುದು ಕನ್ನಡವು ಜಿಲ್ಲೆಯದಾವುದು ಕನ್ನಡವು...ಕನ್ನಡಿಗರೋ ನೀವ್ ?-ಅಹುದಹುದು' ಎಂದು ಪ್ರಶ್ನೋತ್ತರ ರೂಪದಲ್ಲಿ ಸಾಗುವ ಈ ಪದ್ಯ ಬಿ. ಎಂ. ಶ್ರೀ. ಯವರ 'ಮೈಸೂರಮಕ್ಕಳು' ಎಂಬುದರಿಂದ ಪ್ರೇರಿತವಾಗಿದ್ದಿರಬಹುದಾದರೂ ತನ್ನಷ್ಟಕ್ಕೆ ವರ್ಚಸ್ವಿಯಾದ ಕೃತಿಯೇ ಸರಿ.

ಎಳೆ ಮಕ್ಕಳ ಕಣ್ಣು ತೂಗಿಸಿ, ನಿದ್ದೆಯ ಹಚ್ಚಡವನ್ನು ಬೆಚ್ಚಗೆ ಹೊದಿಸಿ ಕನಸಿನೂರಿಗೆ ಅವರನ್ನು ಏರಿಸಬಲ್ಲ 'ಜೋಗುಳ ಹಾಡು', 'ಕಳೆದಾ ಸಮಯವು ಬಾರದು ಹಿಂದೆ, ಅಲಸವೆ ಸತ್ವ ತಿಯೆಸಗಲೊ ಇಂದೆ' ಎಂಬ ನೀತಿಯನ್ನು ಸಾರಿ, ಟಿಕ್ ಟಿಕ್ ಟಿಕ್ ಟಿಕ್ ಎಂದು ಏಕಪ್ರಕಾರವಾಗಿ ಉಸಿರಾಡುವ 'ಗಡಿಯಾರ' "ಕಿರು ಮಗು ನಾನನುಕರಿಸುತ ನಿನ್ನನು ಸರಿಸೆನು ಮೆಲ್ಲನೆ ಒರಿತನಕೆ" ಎಂಬ ಅರಿವನ್ನುಂಟು ಮಾಡುವ 'ಚಂದ್ರ', ಬಣ್ಣದ ಗರಿಗಳನ್ನು ಅಗಲಿಸಿ, ಸಾವಿರ ಕಣ್ಣುಗಳನ್ನು ಅರಳಿಸಿ, ಬೇಗಿ ಬಾಗಿ ನಲಿಯುವ 'ನವಿಲು', ಗುಡ್ಡಬೆಟ್ಟಗಳನ್ನು ಕೊರೆದು ದುಡೆಯನ್ನು ಒಡೆದು, ಹೊಲ ತೋಟಗಳನ್ನು ಕೊಚ್ಚಿ, ಮನೆ ಮಹಡಿಗಳನ್ನು ಕೆಡವಿ ವಿಕಟ ನರ್ತನವಾಡುವ 'ನೆರೆ'-ಇವೆಲ್ಲ ಎಳೆಯರಂತೆಯೇ ಹಳಬರೂ ಮೆಚ್ಚಿಬಹುದಾದ ರಚನೆಗಳು. ಈ ಪದ್ಯಗಳಲ್ಲಿರುವುದು ಕೇವಲ ಹಸುಗೂಸುಗಳ ಕಿವಿಗಿಂಪಾಗುವ ಶಬ್ದಚಮತ್ಕಾರವೋ ಛಂದೋವೈಖರಿಯೋ ಅಲ್ಲ ; ಯಾರ ಎದೆಯನ್ನೂ ಹೊಕ್ಕು ಅಲ್ಲೊಂದಷ್ಟು ನೆಲೆಯನ್ನೂ ಬೆಲೆಯನ್ನೂ ಪಡೆಯಬಹು

ದಾದ ಸಹಜಕವಿತ್ವ. ಇವುಗಳ ಇಡೆಯಲ್ಲೇ ಇರುವ, ಆರಂಭದಲ್ಲೇ ಉದಹರಿಸಿದ 'ಮಂಗನ ಮದುವೆ'ಯಂತೂ ಕನ್ನಡದಲ್ಲಿ ಜನಪ್ರಿಯವಾಗಿರುವ 'ಮಂಗನ ಉಪವಾಸ'ಕ್ಕೆ ಸರಿ ಮಿಗಿಲಾಗಬಲ್ಲ ಪದ್ಯ. ಇಲ್ಲಿಯ ಕಲ್ಪನಾವಿಲಾಸ ಚೇತೋಹಾರಿಯಾಗಿದ್ದು ಬಿಸಿಲು-ಮಳೆಗಳೆರಡೂ ಕೂಡಿದ ಸಮಶೀತೋಷ್ಣ ವಾತಾವರಣದಲ್ಲಿ ಮೃಗ-ಖಗಗಳು ಸೇರಿ ವಧೂ-ವರರನ್ನು ಸಿಂಗರಿಸಿ, ಪದಗಳನ್ನು ಹಾಡಿ, ಕೆಣಕಿ, ನಕ್ಕು, ಒಬ್ಬರಿಂದೊಬ್ಬರಿಗೆ ಮಾಲೆ ಹಾಕಿಸಿ, ನಲಿದಾಡುವ ಆ ಸಂತೋಷಸನ್ನಿವೇಶ ಮಕ್ಕಳನ್ನು ಇಡಿಯಾಗಿ ಮರುಳುಗೊಳಿಸುವುದರಲ್ಲಿ ಅಚ್ಚರಿಯೇನೂ ಇಲ್ಲ. ಕಬ್ಬಿಗರ 'ವಾಗ್ಯೆಂದ್ರಜಾಲಿಕತೆ'ಗೆ ಮಕ್ಕಳಂತೆ ಮನಸೋಲುವವರು ಬೇರೆ ಯಾರಿದ್ದಾರೆ ?

## ಅಭಿನಯಗೀತಮಂಜರಿ

ಮಕ್ಕಳು ಕತೆ ಕವಿತೆಗಳನ್ನು ಸುಮ್ಮನೆ ಓದಿದರೆ ಸಾಲದು, ಕಂಠಪಾಠ ಮಾಡಿದರೆ ಸಾಲದು, ಅಭಿನಯಿಸಿ-ಅನುಭವಿಸಿ-ಓದಬೇಕು. ಆಗ ಓದಿದ್ದು ಮನಸಿಗೆ ಇಳಿಯುತ್ತದೆ; ಗಟ್ಟಿಯಾಗುತ್ತದೆ. ಶಿಶು ಸಾಹಿತ್ಯಕಾರರಲ್ಲಿ ಈ ದೃಷ್ಟಿಯಿರಬೇಕು ; ಅಭಿನಯಕ್ಕೆ ತಕ್ಕಂತೆ 'ಚಿತ್ರಕ ಶೈಲಿ'ಯಲ್ಲಿ ಸಾಹಿತ್ಯ ನಿರ್ಮಾಣವಾಗಬೇಕು. ಲಕ್ಷ್ಮಣ ಪೈಯವರು ಈ ಮಾತನ್ನು ಕಡೆಗಣಿಸಿಲ್ಲವೆಂಬುದಕ್ಕೆ ಅವರ 'ಅಭಿನಯ ಗೀತಾವಳಿ', 'ಅಭಿನಯಗೀತ ಮಂಜರಿ'ಗಳೇ ನಿದರ್ಶನ. 'ಅಭಿನಯಗೀತ ಮಂಜರಿ' ಯಲ್ಲಿರುವ ಗೀತೆಗಳಲ್ಲಿ ಹೆಚ್ಚಿನವು ಆಡಿ-ಹಾಡಲು ತಕ್ಕವು. ಕಂದನ ಆಟ, ದನ, ಲಂಕಾದಹನ, ನಾಟಿ ಹಾಡು, ದುರ್ಯೋಧನನ ಪ್ರಲಾಪ ಮೊದಲಾದುವು ಅರ್ಥವತ್ತಾಗಿ ಹಾಡಲು ತಕ್ಕಂತಹ ಧಾಟಿಗಳಲ್ಲಿ ರಚಿತವಾಗಿವೆ.

## ಶಿಶು ಗೀತಮಾಲೆ

ಪೈಯವರ ಬಾಲಸಾಹಿತ್ಯದಲ್ಲಿ ಈ ಪುಸ್ತಕಕ್ಕೆ ಅಗ್ರಸ್ಥಾನವೆಂದರೂ ಸರಿಯಾದೀತು. ಸಂಕಲನದಲ್ಲಿರುವ ಇಪ್ಪತ್ತಮೂರು ಗೀತೆಗಳಲ್ಲಿ ಒಂದೊಂದೂ ಒಂದೊಂದು ವಿಧದಲ್ಲಿ ಸ್ವಾರಸ್ಯವಾಗಿದೆ. ಹಾಲು ಹಲ್ಲಿನ ಕಂದಮ್ಮಗಳು ಅನಾಯಾಸವಾಗಿ ಕಚ್ಚಿ, ಚೀಪಿ ರುಚಿಯುಣ್ಣಲು ತಕ್ಕ ಹಣ್ಣುಗಳ ಗೊಂಚಲು ಈ ಸಂಗ್ರಹ. ಚಿಪ್ಪು ಗಟ್ಟಿಯಲ್ಲದ, ಕರಟ ಹೆಚ್ಚಿಲ್ಲದ ಸೊನೆ, ಸಿಗುರುಗಳಿಲ್ಲದ ಹಣ್ಣುಗಳು ಇವು:– 'ಕೋಡಬಳೆ' ಯಲ್ಲಿ ಕೋಡು ಮತ್ತು ಬಳೆಗಳು ತಾವಾಗಿ ಮಾಯವಾಗುವ ಚಾತುರಿ, ಅಮ್ಮನಿಗೆ ಕಂದನು ಕೊಟ್ಟ 'ಮುತ್ತು' 'ನೆಲದೊಳಾಗೆ ಜಾರಿಬಿದ್ದು' ಮುತ್ತಿನ ಮರ-ಮುತ್ತಿನ ಸರಗಳಾಗುವ ಅಚ್ಚರಿ, ರೊಟ್ಟಿಚೂರಿಗಾಗಿ ಹಾರಿ ಹಾರಿ ದಣಿಯುವ, ತಿಂದು ತಿಂದು ತಣಿಯುವ 'ನಾಯಿಮರಿ' (ಜಿ. ಪಿ. ರಾಜರತ್ನಂರ 'ನಾಯಿಮರಿ ನಾಯಿಮರಿ ತಿಂಡಿಬೇಕೇ ಎಂಬ ಹಾಡಿನಷ್ಟೇ ಚೆಲುವಾದದ್ದು) ಎಳೆ ಮಗುವನ್ನು ಪುಸಲಾಯಿಸಿ ರೂಪಾಯಿ ಗಂಟು ಹೊತ್ತು ಓಡಲೇಳಿಸಿ, ಕೈಯ ಗಂಟನ್ನೂ ಕಾಲ ಗಂಟನ್ನೂ ಜತೆಯಾಗಿ ಕಳಕೊಳ್ಳುವ ಕಳ್ಳನ

ಕತೆ ಹೇಳುವ 'ಪೆಪ್ಪರಮಿಂಟು'-ಇವನ್ನೆಲ್ಲ ಕನ್ನಡದ ಕಂದನು ಓದಿ ಸವಿಯದಿರಲು, ಸವಿದು ಚಪ್ಪರಿಸದಿರಲು, ಸಾಧ್ಯವೇ ಇಲ್ಲ!

ಜಿಲ್ಲೆಯ ವಿಶಿಷ್ಟಕಲೆ 'ಬಯಲಾಟ'ದ ಶಾಸ್ತ್ರೀಯ ವಿವೇಚನೆಯನ್ನು ಕೆಲವರು ಮಾಡಿರಬಹುದು ; ಆದರೆ ಅದರ ಲಾಸ್ಯ ವಿಲಾಸಗಳನ್ನು ಕುರಿತು ಕವಿತಾ ರಚನೆಗೆಯ್ದವರು ನಮ್ಮಲ್ಲಿ ವಿರಳ. (ಅಮೃತ ಸೋಮೇಶ್ವರರ 'ವನಮಾಲೆ' ಯಲ್ಲೊಂದು ಕವನ ಕುಸುಮವಿದೆ) ದಿ. ಲಕ್ಷ್ಮಣ ಪೈಯವರು 35-36 ವರ್ಷಗಳಷ್ಟು ಹಿಂದೆಯೇ ತಮ್ಮ ಶಿಶುಗೀತ ಮಾಲೆಯಲ್ಲಿ ಬಯಲಾಟದ ವಿಭವ-ವಿಭ್ರಮಗಳನ್ನು ಕಟ್ಟಿ ಹೆಣೆದಿದ್ದಾರೆ. ಚೆಂಡೆ-ಮದ್ದಳೆ-ಜಾಗಟೆಗಳ ಹೊಯ್ತದಲ್ಲಿ, ರಾಗದ ಹುಡಿಯನ್ನು ಎರಚಿ ಅಟ್ಟಹಾಸ ಮಾಡಿ ಗದ್ದುಗೆಯೇರಿ ಮೆರೆಯುವ ತಟ್ಟಿ ಕಿರೀಟದ ರಾಕ್ಷಸರಾಜ ರಾವಣನನ್ನು ಕಾಡ ಕಪಿ ಹನುಮಂತನು ಕೆಣಕಿ, ಹಾರಿ-ಕುಣಿದು ಲಂಕೆಯನ್ನು ಸುಟ್ಟು ರಕ್ಕಸರನ್ನು ಬೆಬ್ಬಳಿಗೊಳಿಸುವ ಅಬ್ಬರಗಳನ್ನೆಲ್ಲ ಕಣ್ಣಿಗೆ ಕಟ್ಟುವಂತೆ ಬಣ್ಣಿಸಿ 'ಸೋಜಿಗವಲ್ಲವೆ ಬಯಲಾಟ' ಎಂದು ಕವಿ ಹೇಳುವಾಗ, ತನ್ಮಯ ಬಾಲಕರು 'ಹೌದೌದು' ಎಂದು ತಲೆದೂಗಬೇಕು. ಹಾಗೆಯೇ 'ಆಟಿಕಳಂಜ' ನನ್ನು ಕುರಿತದ್ದೂ ಒಂದು ವಿಶಿಷ್ಟ ಕವನ. ಯಾರೂ ಪದ ಕಟ್ಟಿ ಹಾಡದ 'ಆಟಿಕಳಂಜ' ನಿಗೊಂದು ಎಡೆ ಮಾಡಿದ್ದಾರೆ ಪೈಯವರು. ಆಟಿ (ಕರ್ಕಾಟಕ) ತಿಂಗಳಲ್ಲಿ ಊರಲ್ಲೆಲ್ಲ ಅಲೆದಾಡಿ ಮಕ್ಕಳ ಕೇಕೆ-ಕೀಟಲೆಗಳಿಗೆ ಪಕ್ಕಾಗುವ ಆಟಿ ಕಳಂಜನ ಚಿತ್ರಣ ತುಂಬ ಚೆಲುವಾಗಿದೆ !

ಮನೆ ಮನೆ ಗೈದುತ ನಲಿದಾಡುವನು !
ಹಪ್ಪಳ, ಸಾಂತಣಿಗಳ ಬೇಡುವನು !
'ಭತ್ತವ ಕೊಡಿರೆ'ಂದುರೆ ಕಾಡುವನು !
ಹುಣಸೇ ಬೀಜಕೆ ಕೈನೀಡುವನು !

ಹಪ್ಪಳ, ಸಾಂತಣಿ, ಹುಣಸೇ ಬೀಜಗಳಲ್ಲಿ ತುಳುನಾಡಿನ ಸೊಂಪು-ಕಂಪುಗಳೂ ಸೇರಿ ಕೊಂಡು ಎಷ್ಟೊಂದು ಸಹಜವಾದ ಆವರಣ ಸೃಷ್ಟಿಯಾಗಿದೆ !

ಸಂಗ್ರಹದ ಕೊನೆಯಲ್ಲಿರುವ 'ಸುಳ್ಳನ್ನಾಡುವ ಜಾಣನಿಗೆ ಬಹುಮಾನ'-ಒಂದು ರೋಚಕವಾದ ಕಥನ ಕವನ : ಮಿಗಿಲಾದ ಸುಳ್ಳುಗಾರನಿಗೆ ನೂರು ವರಹದ ಬಹುಮಾನವನ್ನು ಸಾರುತ್ತಾನೆ ಒಬ್ಬ ಅರಸ. ಆಸ್ಥಾನಿಕರಲ್ಲಿ ಒಬ್ಬೊಬ್ಬರೂ, ಕಲ್ಲು ನೀರಲ್ಲಿ ತೇಲುವುದು, ಕೋಣ ಕರು ಹಾಕುವುದು ಮುಂತಾದ ನಂಬಲಾಗದ ಸುಳ್ಳುಗಳ ಸರಮಾಲೆ ಕಟ್ಟುವರು. ಆಗ ಆಸ್ಥಾನ ವಿದೂಷಕನು ಇದ್ದಕ್ಕಿದ್ದಂತೆ ಅರಸನನ್ನು 'ಪಾಪಿ' 'ಅಧಮ ಎಂದು ವಾಚಾನುಗೋಚರವಾಗಿ ಬಯ್ಯುವನು. ಕೇಳಿದ ಅರಸ ಸಿಟ್ಟು ಬೆಂಕಿಯಾಗಿ, ವಿದೂಷಕನ ತಲೆ ಹಾರಿಸುತ್ತೇನೆಂದು ಒದರುವನು. ವಿದೂಷಕನು ತಣ್ಣನೆ, "ಸ್ವಾಮೀ ಇಷ್ಟು ತಿಳಿಯಲಿಲ್ಲವೇ ? ನಾನಾಡಿದ್ದು ಸುಳ್ಳು" ಎಂದಾಗ ಎಲ್ಲರೂ ಬೆರಳು ಕಚ್ಚುವರು. ನಂಬುವಂತಹ ಸುಳ್ಳಾಡಿದುದಕ್ಕಾಗಿ ವಿದೂಷಕನು ಬಹುಮಾನಿತನಾಗುವನು. ಸುಳ್ಳನ್ನು

ಸುಳ್ಳೆಂದು ತೋರಗೊಡದೆ ಆಡುವುದೂ ಒಂದು ಕಲೆಗಾರಿಕೆ ಎಂದು ಪ್ರತಿಪಾದಿಸಿದ ರೀತಿ ಸ್ವಾರಸ್ಯಕರವಾಗಿದೆ.

ಪೈಯವರ ಗೀತೆಗಳಲ್ಲಿ ಕೆಲವು ಪರಾನುಕರಣವೆಂದು, ಇನ್ನೂ ಕೆಲವು ಅನ್ಯ ಪ್ರೇರಿತವೆಂದು ಕಾಣಬಹುದು. ಎಡೆ ಎಡೆಯಲ್ಲಿ ಪದ್ಯರೂಪದ ಗದ್ಯವೇ ಸವಾರಿ ಮಾಡು ವುದೂ ಇದೆ. ಕವಿಯು ತಾನೂ ಎಳೆಯನಾಗಿದ್ದು ಎಳೆಯರಿಗಾಗಿ ಏನನ್ನಾದರೂ ಬರೆದು ಬಡಿಸಲೇಬೇಕೆಂಬ ಹುಮ್ಮಸ್ಸಿನಲ್ಲಿ ಶಾಕ-ಪಾಕಗಳ ಉಚಿತ ಪರಿಜ್ಞಾನವಿಲ್ಲದೆ, ಅಡುಗೆ ಮಾಡಿದ ಕಾಲಕ್ಕೆ ಇಂತಹ ನ್ಯೂನತೆಗಳು ಅಸಂಭಾವ್ಯವಲ್ಲ; ಅಕ್ಷಮ್ಯವೂ ಅಲ್ಲ. ದೋಷಾಸ್ಪದವೆಂಬುದನ್ನು ಬಿಟ್ಟರೂ ನಾಲ್ಕು ಪುಸ್ತಕಗಳ ತೊಂಬತ್ತನಾಲ್ಕು ಗೀತಗಳಲ್ಲಿ ಅರ್ಧಾಂಶಕ್ಕಿಂತ ಹೆಚ್ಚಿನವುಗಳಲ್ಲಿ ಸ್ವೋಪಜ್ಞತೆಯಿದೆ, ನವೀನತೆಯಿದೆ, ರಸವತ್ತತೆ ಇದೆ ; ಅಂತಹ ರಚನೆಗಳು ನಾಡಿನ ಉತ್ತಮ ಬಾಲ ಸಾಹಿತ್ಯಕಾರರ ಮಟ್ಟಕ್ಕೆ ಪೈಯವರನ್ನೂ ಎತ್ತರಿಸುವಂತಿವೆ ಎಂದರೆ ಸಾಕು. ನನ್ನ, ನನ್ನ ಹಿಂದಿನ, ತಲೆಮಾರಿನ ಹಲವರು ಅಲ್ಲಿಯ ಎಷ್ಟೋ ಗೀತಗಳನ್ನು ಈಗಲೂ ಕುರುಕುತ್ತಿದ್ದಾರೆ ಎಂದರೆ ಲಕ್ಷ್ಮಣ ಪೈ ಚಿರಂಜೀವಿ!

# ೧೦. ಪಾಂಡೇಶ್ವರರ 'ಚೆಂಗಲವೆ'

'ರಾಷ್ಟ್ರಕವಿ ಗೋವಿಂದ ಪೈ' ಎಂಬ ಗ್ರಂಥದ ಆರಂಭದಲ್ಲಿ ಕಯ್ಯಾರ ಕಿಣ್ಣರೈಯವರು "ಕನ್ನಡದ ಕವಿಶ್ರೇಷ್ಠರಲ್ಲೊಬ್ಬರಾದ ಶ್ರೀ ಪಾಂಡೇಶ್ವರ ಗಣಪತಿರಾಯರು 1940ರಲ್ಲಿ ಪ್ರಕಟಿಸಿದ 'ಚೆಂಗಲವೆ' ಎಂಬ ಸಂಗ್ರಹದಲ್ಲಿ 'ಪಂಡಿತನಕ್ಕಿ' ಯನ್ನು ಸಂಭೋಧಿಸಿ ಹೀಗೆಂದು ಹಾಡೊಂದನ್ನು ಹಾಡಿದ್ದಾರೆ" ಎಂದು ಬರೆದು ಆ ಹಾಡಿನ ಕೆಲವು ಪಂಕ್ತಿಗಳನ್ನು ಉಲ್ಲೇಖಿಸಿದ್ದಾರೆ. ಕವಿ ಕಯ್ಯಾರರ ಉದ್ದೇಶ ಆ ಹಾಡು ಗೋವಿಂದ ಪೈಯವರ ಸ್ವಭಾವವನ್ನು ಕನ್ನಡಿಸುತ್ತದೆ ಎಂಬುದನ್ನು ವಿವರಿಸುವುದಾದರೂ ಈ ಲೇಖಕನು ಪಾಂಡೇಶ್ವರರ 'ಚೆಂಗಲವೆ' ಯನ್ನು ಕಂಡುಹಿಡಿದು, ಕೊಂಡು ಓದಿ ಸಂತುಷ್ಟನಾಗಲು ಪ್ರೇರಕವಾದದ್ದು ಆ ಉಲ್ಲೇಖ!

ಮೇಲಿನ ಪ್ರಸಂಗದಿಂದ ಎರಡು ವಿಷಯಗಳು ಸ್ಪಷ್ಟವಾಗುತ್ತವೆ: ಪಾಂಡೇಶ್ವರರು 1940ಕ್ಕಿಂತಲೂ ಹಿಂದೆಯೇ ಕಾವ್ಯಕರ್ಮವನ್ನು ಆರಂಭಿಸಿ ಆಗಲೇ ಪ್ರಸಿದ್ಧರಾಗಿದ್ದರಾಗಿದ್ದರೆಂಬುದು ಒಂದಾದರೆ 'ಪಂಡಿತನಕ್ಕಿ' ಯಂತಹ ಕವಿತೆಗಳು ಹೊಸಬನಲ್ಲೂ ಕವಿಯ ಬಗ್ಗೆ ಕುತೂಹಲನನ್ನು ಕೆರಳಿಸುವಂತಿವೆ ಎಂಬುದು ಮತ್ತೊಂದು. ಮೂವತ್ತಮೂರು ವರ್ಷಗಳಷ್ಟು ಹಿಂದೆ ಪ್ರಕಟವಾದ 'ಚೆಂಗಲವೆ' ಇಂದಿಗೂ ಚೆಲುವಾಗಿಯೇ ಹೊಸತಾಗಿಯೇ ಇದೆ. ಆ ಹೆಸರೇ ಸುಂದರ, ಮೋಹಕ. ಅದರ ಬಹಿರಂಗದ ಚೆಲುವು ಮುಖಚಿತ್ರದಲ್ಲಿ, ಬಾಸೆಲ್ ಮಿಶನ್ ಪ್ರೆಸ್ಸಿನ ಮುದ್ರಣಗಳಲ್ಲಾದರೆ, ಅಂತರಂಗದ ಸೊಬಗು ಎಪ್ಪತ್ತೇಳು ಪುಟಗಳ ಐವತ್ತೆರಡು ಕವಿತೆಗಳಲ್ಲಿ. ಪಾಂಡೇಶ್ವರರ ಕಾವ್ಯ ಗ್ರಂಥಗಳು 'ಚೆಂಗಲವೆ' ಗಿಂತ ಹಿಂದೆಯೂ, ಮುಂದೆಯೂ ಪ್ರಕಟವಾಗಿವೆ. ಆದರೆ 'ಚೆಂಗಲವೆ' ಮಾತ್ರ ಅನನ್ಯವಾದದ್ದು. ಒಂದು ಮೂಲೆಯಲ್ಲಿ ಒಂದೇ ನಾಯಕರತ್ನ. 'ಚೆಂಗಲವೆ' ಅಂತಹ ನಾಯಕ ರತ್ನ.

ಇಲ್ಲಿಯ ಪ್ರತ್ಯೇಕ ಕವಿತೆಗಳ ವಸ್ತುಗಳೆಲ್ಲವೂ ಸಾಮಾನ್ಯವಾಗಿ ನವೋದಯ ಕಾವ್ಯದಲ್ಲಿ ಕಾಣಬಹುದಾದವದ್ದೇ: ಬೆಳಗು-ಬೈಗು, ಕೋಗಿಲೆ-ವಸಂತ, ಹಗಲು-ಇರುಳು ಇತ್ಯಾದಿ. ಇವುಗಳ ಸುತ್ತ ಕವಿಯ ಮನಸ್ಸು ವಿಹರಿಸುತ್ತದೆ, ಕಲ್ಪನಾ ಜಾಲವನ್ನು ನೇಯುತ್ತದೆ; ಪ್ರಕೃತಿಯಲ್ಲಿ ರಮಿಸಿ ವಿರಮಿಸುತ್ತದೆ; ಮನುಷ್ಯ ಪ್ರಕೃತಿಗೆ ಇಣಿಕು ನೋಟ ಹಾಯಿಸುತ್ತದೆ. ಅನ್ಯತ್ರ ಕಾಣಬಹುದಾದದ್ದು ಇಲ್ಲೂ ಇದೆಯೆಂಬುದರಿಂದ ಹೀಗಳೆಯಲಾಗದು. ವರ್ಣಿತ ವಸ್ತು ಒಂದೇ ಇರಬಹುದು. ಆದರೆ ವರ್ಣನ ಕ್ರಮ ವರ್ಣನ ಶಕ್ತಿಗಳಲ್ಲಿ ತಾರತಮ್ಯವಿರಬಹುದು. 'ಮುಖೇ ಮುಖೇ ನವಾವಾಣೀ' ಎಂದು ಹಿಂದಿನವರು ಹೇಳಿಲ್ಲವೇ?–"ನೂರು ಮರ, ನೂರು ಸ್ವರ ಒಂದೊಂದೂ ಅತಿ ಮಧುರ" ಎಂಬ ಬೇಂದ್ರೆ ವಾಣಿ ಕವಿ ಕಲಕಂಠಗಳಿಗೂ ಅನ್ವಯಿಸುತ್ತವೆ.

ಸಂಗ್ರಹದ ಮೊದಲ ಕವಿತೆ 'ಮೊದಲ ಮಾತು.' ಅದು ಈ ಸಂಗ್ರಹಕ್ಕೆ ಅಲ್ಲ, ಕಾವ್ಯಪ್ರಕಾರಕ್ಕೇ ಮುನ್ನುಡಿ; ಕವಿಕರ್ಮರಹಸ್ಯಕ್ಕೆ ಕನ್ನಡಿ. ಕಾವ್ಯಸೃಷ್ಟಿಯನ್ನು

'spontaneous overflow of powerful feelings', 'emotions recollected in tranquility' ಎಂದೆಲ್ಲ ವಿವರಿಸುವುದುಂಟು. ಕವಿ ಕಂಡದ್ದು, ಉಂಡದ್ದೆಲ್ಲ ಅವನ ಮನಸ್ಸನ್ನು ಮುಟ್ಟಿ ಮೂದಲಿಸಿ 'ಇನ್ನು ತಡೆಯಲಾರೆ, ಬರೆಯದಿರಲಾರೆ,' ಎಂಬ ಕಾವಿನಿಂದ ಯಾವುದು ಪಾಕಗೊಳ್ಳುತ್ತದೋ ಅವೇ ಕಾವ್ಯ. ಅದನ್ನೇ ಪಾಂಡೇಶ್ವರರು–

ಎದೆಯ ಗುಹೆಯನು ತುಂಬಿ
ತುಂಬಿ ಹೊರಹೊಮ್ಮಿ
.... ... ... ... ...
ಮನದ ಮೌನದಿ ಮಿಂಚಿ
ಮಿಂಚಿ ಹೊರ ಚಿಮ್ಮಿ

ಇತ್ಯಾದಿಯಾಗಿ ವಿವರಿಸಿದ್ದಾರೆ. ಮುಂದಿನ ಕವಿತೆಗಳೆಲ್ಲವೂ ಹೀಗೆ ಎದೆಯ ಗುಹೆಯಿಂದ ಹೊಮ್ಮಿ, ಮನದ ಮೌನದಿಂದ ಚಿಮ್ಮಿ ಬಂದವುಗಳು. ಅದನ್ನೇ ಗೋವಿಂದ ಪೈಯವರು ತಮ್ಮ ಮುನ್ನುಡಿಯಲ್ಲಿ ಹೀಗೆ ವರ್ಣಿಸಿದುದು: "ಚೆಂಗಲವೆ"ಯಲ್ಲಿಯ ಕವಿತೆಗಳು ಹೃದಯದಿಂದ ಒಗುತ್ತವೆ, ಹೃದಯವನ್ನು ಹೊಗುತ್ತವೆ".

ನಮ್ಮ ಪ್ರಾಚೀನ ಕಾವ್ಯಗಳ ಆರಂಭದಲ್ಲಿ ಕವಿ–ಕಾವ್ಯ ವಿಚಾರಗಳೆಲ್ಲ ನಿಯತವಾಗಿ ಬರುತ್ತಿದ್ದು, ಆ ಪರಂಪರೆಯನ್ನು ಈ ಶತಮಾನದ ಒಂದೆರಡು ದಶಕಗಳಲ್ಲೂ ಗುರುತಿಸಬಹುದಾಗಿತ್ತು. ಪ್ರಕೃತ ಸಂಕಲನದ 'ಕಾವ್ಯ–ಪ್ರಾಸ,' 'ಕವಿತೆ'-ಇವು ಆ ಬಗೆಯವು. ಮುಂದಿನ 'ಪಾಡಿತವಕ್ಕಿ' ಯೆಂಬುದು ಅರ್ಥಭಾರದಿಂದ ತುಂಬಿ ತೊನೆಯುವ ಕವಿತೆ; ಅದೊಂದು ಬಗೆಯ ಅನ್ಯಾಪದೇಶ,–ಕವನ ಸಮರ್ಥರಾದ ಎಷ್ಟೋ ಮಂದಿ ಅನ್ಯಾಸಕ್ತರಾಗಿ ಕಾವ್ಯವನ್ನು ಕಡೆಗಣಿಸಿದರು ಎಂಬುದು ಹಲವರಂತೆ–ಈ ಕವಿಯ ದೂರು:

ಹಾಡುವುದ ಮರೆತಿಂತು
ಕುಳಿತೆಯೋ ಹಕ್ಕಿ ?
ಹಾಡಲರಿಯದೆ ನಾವು
ಅಳುತಿಹೆವು ಬಿಕ್ಕಿ !

ಎಂತಹ ಮಾರ್ಮಿಕ ವಿವೇಚನೆ !–ನಮ್ಮ ಕನ್ನಡದಲ್ಲೇ ಗೋವಿಂದಪೈ, ಕಡೆಂಗೋಡ್ಲು, ತೀ. ನಂ. ಶ್ರೀ, ಸೇಡಿಯಾಪು, ರಾಜರತ್ನಂ–ಹೀಗೆ ಇನ್ನೂ ಹಲವರು 'ಹಾಡ ಮರೆತು ಕುಳಿತ' ಹಕ್ಕಿಗಳೇ ಅಲ್ಲವೇ ?

ಪ್ರಕೃತಿಯ ನಾನಾ ವಿಲಾಸಗಳ, ಅದರ ಭದ್ರ ರುದ್ರ ಮುಖಗಳ ವರ್ಣನೆಗೆ ಮೀಸಲಾದ ಹಲವು ಕವಿತೆಗಳಿವೆ ಈ ಸಂಗ್ರಹದಲ್ಲಿ. ಕೋಗಿಲೆಗೆ, ಮಧುಮಾಸದು ದಯ, ಸುಮ್ಮನಿಹುದೇಕೆ, ರಾಸಲೀಲೆ, ರಾಗ, ಉಷೆ, ಒಂದು ಪ್ರಾತಃಕಾಲ, ಮಳೆಹನಿ, ಮಳೆ ಮುಗಿಲ ತಾರೆಗಳು, ಒಂದು ಸಂಜೆ, ಸಂಜೆ ಬಂತು, ಇರುಳು, ತಾರೆ ಮತ್ತು ಮುಗುಳು ಹೂಗಳು, ಮಲೆನಾಡಿನ ಒಂದು ಹಳ್ಳಿ, ಗೋವಳರು–ಇನೆಲ್ಲ ಒಂದು ಗುಂಪಿನ ಕವಿತೆ

ಗಳು. ಹಾಳೂರ ಕತೆ, ಅಕಾಲಮೃತ್ಯು, ಶ್ರೀರಂಗಪಟ್ಟಣ ಇವು ಇನ್ನೊಂದು ವರ್ಗದವು. ಇವೇ ಅಲ್ಲದೆ ಆತ್ಮ-ಪರಮಾತ್ಮ ವಿಷಯಕವಾದ ತನುಗೊಳಲು, ಪಡಿನುಡಿ, ಅನ್ವೇಷಣ, ಎಂತಿಹನೋ, ಎಲ್ಲಿರುವನೋ, ಗುರುದೇವ, ನೀತಿ, ಮಾಯೆ, ಯಾತ್ರಿಕರ ಹೊಳೆಯ ಪಯಣ ಇವು ಮತ್ತೊಂದು ಬಗೆಯವು. ಕವಿಯ ಸ್ವಂತ ನಂಬಿಕೆಯೋ, ಆಸೆ-ಕನಸು ಗಳೋ, ತಳಮಳ-ತಳ್ಳಂಕಗಳೋ ವ್ಯಕ್ತವಾಗುವ ಆರುನೀನೆಂದೆನ್ನ, ಕಡೆನುಡಿ, ಆಶೆ, ನಿರಾಶೆ, ವಿಧಿಗೆ, ವರುಷವಿಂತು ಕಳೆಯುತಿಹುದು, ದಿನವಿದಿಲ್ಲಿ ನಿಮಿಷವಾಯ್ತು, ಮನೆಯ ನೆನಪು, ದಾಂಪತ್ಯದ ಮುನ್ನುಡಿ, ಬೇಕು, ಸನ್ಯಾಸಿ, ಇತ್ಯಾದಿ ಕವಿತೆಗಳ ಬೇರೆ ಬೇರೆ ವರ್ಗೀ ಕರಣವನ್ನೂ ಮಾಡಬಹುದು. ಶಕುಂತಲಾ, ಕೃಷ್ಣಕುಮಾರಿ, ಕ್ರಿಸ್ತಜನ್ಮ, ಮಹಾತ್ಮಾ ಗಾಂಧಿಗೆ-ಇವು ಪ್ರತ್ಯೇಕ ವ್ಯಕ್ತಿಸಂಬಂಧವಾದ ಕವಿತೆಗಳು.

ಸ್ಥಾಲೀ ಪುಲಾಕ ನಿರ್ದೇಶನಾರ್ಥವಾಗಿ ಒಂದೊಂದು ಗುಂಪಿನ ಒಂದೆರಡು ಕವಿತೆ ಗಳನ್ನಿಲ್ಲಿ ವಿವರಿಸಬಹುದು-ಉಷ: ಕಾಲದ ತಂಗಾಳಿಗೆ ಮೈಯ್ಯೊಡ್ಡಿ, ಚೆಲುವಿಗೆ ಮನ ಸೋತು ಹಾಡಿ ತಣಿಯದ ಕವಿಗಳಿಲ್ಲ. ಒಂದೊಂದು ಕಣ್ಣಿಗೆ ಒಂದೊಂದು ಬಣ್ಣವಾಗಿ ಕಂಡಿದೆ ಬೆಳಗು. ಈ ಕವಿ ಉಷೆಯನ್ನು ಸ್ವಾಗತಿಸಿ ವರ್ಣಿಸುವ ರೀತಿಯಿದು:-

ಮೂಡಲ ಬಾವಿನ ಬಾಗಿಲ್ದೆರೆಯಿತು
ಹಾಡಿದುವೈ ಹೂ ಪರಿಮಳವ
ಹಾಡಿದ ಹೂಗಳ ಪರಿಮಳ ಗೀತದ
ಕೋಡಿವರೆದುದೈ ತಂಬೆಲರ.
ಹಾಡುವ ಹಕ್ಕಿಯು ಗೂಡಿಂದೆಬ್ಬಿಸಿ
ಗಾಳಿಯ ಘಟದವೊಲಟ್ಟಿಹಳು !
ನೋಡದೊ ಮಂಜಿನ ಮಣಿಗಳ ಹಾರವ,
ಕೋದು ಕೊರಲಿನೊಳು ತೊಟ್ಟಿಹಳು !

ಬೆಳಗನ್ನು ಕಂಡು, "ಇದು ಬರಿ ಬೆಳಗಲ್ಲೊ ಅಣ್ಣಾ !" ಎಂದು ಒಬ್ಬರು ಬೆರಗಾ ದರೆ, "ಸೂರ್ಯೋದಯ ಚಂದ್ರೋದಯ ದೇವರ ದಯೆಕಾಣೋ !" ಎಂದು ಮತ್ತೊ ಬ್ಬರು ಉದ್ಗರಿಸಿದ್ದಾರೆ. ತಮ್ಮ 'ಕಾಣ್ಕೆ' ಗೆ ತಕ್ಕಂತೆ ಬೆಳಗನ್ನು ಬಣ್ಣಿಸಿ, ಸಂಜೆಯ ಬರವನ್ನು ಪಾಂಡೇಶ್ವರರು ವಿವರಿಸುವುದು ಹೀಗೆ:-

ಹೊಳಲ ಹೂವ ಮುಗಿಸಿ ಬಂತು
ಬಾನಿನಲರ ನಗಿಸಿ ಬಂತು
ಕೊಳಲ ಕರೆಯ ಕೇಳಿ ಬಂತು
ಚೆಲುವ ಹಳ್ಳಿಗೆ-
ಹಳುವ ತೆರೆಯ ಸೀಳಿ ಬಂತು
ಹೊಳಲ ಗಲ್ಲಿಗೆ

' ಕೊಂಕಣ ಸೀಮೆಗೆ ತೆಂಕಣ ಗಾಳಿ 'ಯು ಬಂದ ಭರವನ್ನು ಪಂಜೆಯವರು ನುಡಿ ಚಿತ್ರಗಳಲ್ಲಿ ಪಡಿಮೂಡಿಸಿದಂತೆ, ಕಡಲ ಕರೆನಾಡಿನಲ್ಲಿ ಸಂಜೆಗೆಂಪು ಹಬ್ಬಿ ಹರಿದುದನ್ನು ಪಾಂಡೇಶ್ವರನು ಸಶಕ್ತವಾಗಿ, ಸಜೀವವಾಗಿ, ಚಿತ್ರಕ ಶೈಲಿಯಲ್ಲಿ ಬಿತ್ತರಿಸಿದ್ದಾರೆ.

ಕವಿಯ ಬಾಳ ಬಯಲಲ್ಲಿ ಬಿರುಗಾಳಿಯೆದ್ದು ಕಷ್ಟ-ನಷ್ಟಗಳನ್ನುಂಟುಮಾಡಿದಾಗ ಭರಿಸಲಾಗದ ದುಃಖದಿಂದ ' ಹಾಳೂರುಕತೆ 'ಯನ್ನು ಹೇಳಿದ್ದಾರೆ. ಕನ್ನಡದ ಇನ್ನಿತರ ಕವಿಗಳೂ ' ಹಾಳೂರ 'ನ್ನು ಕುರಿತು ಬರೆದುದುಂಟು. ಅವೆಲ್ಲವೂ ಹೃದಯ ಸ್ಪರ್ಶಿಯಾಗಿಯೇ ಇವೆಯಾದರೆ ಈ ಕವಿಯದ್ದು ಸ್ವಾನುಭವ; ಆದುದರಿಂದಲೇ ಇಲ್ಲಿಯ ಪಂಕ್ತಿ ಪಂಕ್ತಿಗೂ ಕವಿಯ ಕಂಬನಿ ಮೆತ್ತಿಕೊಂಡಿರುವುದನ್ನು ಕಾಣಬಹುದು. ಅಕಾಲಮೃತ್ಯು ಒಡಹುಟ್ಟಿದವರ ಮೃತಿಗಳೆಂಬ ಕವಿತೆಗಳೂ ಹೀಗೆಯೆ-ಕವಿಯ ಬಗೆಗಡಲನ್ನು ಕಲಕಿದ ಸನ್ನಿವೇಶಗಳನ್ನು ಒಳಗೊಂಡವು. ಹಂಪೀ-ವಿಜಯನಗರಗಳನ್ನು ಕಂಡು ಬೇಂದ್ರೆಯವರು ಬೆಗಡುಗೊಂಡಂತೆ, ಒಮ್ಮೆ ತಲೆಯೆತ್ತಿ ಸಿಂಹದಂತೆ ಮೆರೆದು ಮೊರೆದು ಈಗ ಬರಿದಾಗಿ ಬಿದ್ದಿರುವ ' ಶ್ರೀರಂಗಪಟ್ಟಣ 'ಕ್ಕಾಗಿ ಪಾಂಡೇಶ್ವರರು ಕರಗಿ ಕಣ್ಣೀರು ಹರಿಸಿದ್ದಾರೆ.

ಹೊರಗಿನ ಕಣ್ಣು-ಕಿವಿಗಳಿಗೆ ಕಾಣದೆ, ಕೇಳದೆ ಇದ್ದರೂ ಒಳಗಣ್ಣು-ಕಿವಿಗಳು ನೋಡಿ ಕೇಳಬಲ್ಲ ಹಜ್ಜೆ ಸಪ್ಪಳವನ್ನು ಪಾಂಡೇಶ್ವರರು ಗುರುತಿಸಿ ನಾಲ್ಕಾರು ಕವಿತೆಗಳಲ್ಲಿ ವಿವರಿಸಿದ್ದಾರೆ; ' ಅನ್ವೇಷಣ 'ವೇ ಮುಂತಾದ ಕವಿತೆಗಳಲ್ಲಿ ಇದು ಸ್ಪಷ್ಟವಾಗುತ್ತದೆ. ಎಳೆದಳಿರಿನ ಪಸದನದಲ್ಲಿ, ತಿಳಿನೀರಿನ ಕಾಳ್ಪುರದಲ್ಲಿ, ತಂಬೆಲರ ಸುಯ್ಯಲ್ಲಿ ಹೀಗೆ ನಿಸರ್ಗದ ನೂರಾರು ಆಟ-ನೋಟ-ಹೂಟಗಳಲ್ಲಿ ವಿಶ್ವರೂಪಿಯಾದ ಪರಮಾತ್ಮ ತಾನು ಮರೆಯಾಗಿದ್ದು, ನಮ್ಮ ನೆನಪನ್ನು ಕೆರಳಿಸುತ್ತಿದ್ದಾನೆ. ಬಾಳ್ಗಡಲ ಮಥನದಲ್ಲಿ ಹಾಲಾಹಲವಲ್ಲದೆ ಅಮೃತೋದ್ಭವವಾಗುವ ಭರವಸೆಯೇ ಇಲ್ಲವಾದಾಗ-' ಎನ್ನನೇತಕೆ ವಿಧಿಯೆ ಬರಿದೆ ಕಾಡಿಸುವೆ ?" ಎಂದು ಮೊರೆಯಿಡುವ ಕವಿ, ವಿಸ್ತಾರವಾದ ಈ ಧರಣಿಯಲ್ಲಿ ' ಆರು ನೀನೆಂದೆನ್ನ ಕೇಳಿದವರುಂಟೆ ' ಎಂದು ಮರುಗುತ್ತಾನೆ. " ವರುಷ ಹೋಯಿತು, ವರುಷ ಬಂದಿತು ಹರುಷ ಬಾರದು ಬಾರದು " ಎಂದು ವಿ. ಸೀ. ಯವರು ಹಾಡಿದ ಹಾಗೆ.

ಏಕೋ ಮನವಳುಕುತಿಹುದು
ಆಶೆಯ ಕೊರಲಾಂಕುತಿಹುದು
ಸಂಜೆಯ ಸುಮದಂತೆ ಬದುಕು
ಬಿಗಿಯುತಿರುವುದು-ಮುಗಿಯುತಿರುವುದು

ಎಂದು ಕಂಬನಿಯ ಉಪ್ಪನ್ನೇ ನುಂಗಿ ನಿಟ್ಟುಸಿರು ಬಿಡುತ್ತಾನೆ. ಅಳರಿನ ಕಡಲಿನ ನಡುವೆ ಸಂತಸದ ಒಂದೆರಡು ದಿಬ್ಬಗಳೂ ಕಾಣದಿಲ್ಲ. ಅಂತಹ ಸಂದರ್ಭದಲ್ಲಿ ಕವಿ

ದಿನವಿದಿಲ್ಲಿ ನಿಮಿಷವಾಯ್ತು
ಮನಕಿದಮಿತ ಹರುಷವಾಯ್ತು

ಎಂದು ಹಾಡಿ ಹಿಗ್ಗುತ್ತಾನೆ; ಹಿಗ್ಗಿ ಹಾಡುತ್ತಾನೆ-ಆದರೆ ಅಂತಹ ಸನ್ನಿವೇಶಗಳು ವಿರಳ.

ಹೀಗೆ ಕವಿಯ ನಿಜಜೀವನದಲ್ಲಿ ಕಾಣಿಸಿಕೊಂಡ ದುಃಖದ ಕರಿ ನೆರಳುಗಳು ಇಲ್ಲಿಯ ಹಲವು ಗೀತೆಗಳಲ್ಲಿ ಉದ್ದಕ್ಕೂ ಹಾದಿರುವುದನ್ನು ಗುರುತಿಸಬಹುದು.

ಇಲ್ಲಿ ಪ್ರತ್ಯೇಕವಾಗಿ ಹೆಸರಿಸಬೇಕಾದ ಕವಿತೆಗಳಲ್ಲಿ 'ಕ್ರಿಸ್ತಜನ್ಮ' ಪ್ರಮುಖವಾದುದು. ಕತ್ತಲ ಬಸಿರಿನಿಂದ ಬೆಳಕಿನ ಬೀಜವು ಒಗೆದು ಬರುವಂತೆ ಹಿಂಸೆ, ಕ್ರೌರ್ಯ, ಅನೈತಿಕತೆ, ಸ್ವಚ್ಛಂದತೆಗಳೆಲ್ಲ ತಾವೇ ತಾವಾಗಿ ವಿಕಟ ತಾಂಡವದಲ್ಲಿ ತೊಡಗಿರುವಾಗ "ಕ್ರಿಸ್ತ ಜನ್ಮಂ ಮುಗಿಯೆ ಗರ್ಭದಿಂದಿಳಿದುದಿಳೆಗೆ!"—ಗಂಭೀರ ಗತಿಯ ಹತ್ತು ವಾರ್ಧಕ ಷಟ್ಪದಿಗಳಲ್ಲಿ ಈ ವೃತ್ತಾಂತವನ್ನು ಭವ್ಯವಾಗಿ ನಿರೂಪಿಸಲಾಗಿದೆ. ಯದುನಾಥ ಕೃಷ್ಣ ಯೂದನಾಥ ಕ್ರಿಸ್ತರನ್ನು ವಿಶಾಲ ದೃಷ್ಟಿಯಿಂದ ಸಮೀಕರಿಸಿ, 'ಗೊಲ್ಗೊಥಾ'ದಂತಹ ರಸ ನಿರ್ಭರ ಖಂಡಕಾವ್ಯವನ್ನು ಬರೆದ ಗೋವಿಂದ ಪೈಯವರೇ 'ಕ್ರಿಸ್ತಜನ್ಮ' ದಿಂದ ಪ್ರೇರಿತರಾದರೆಂಬ ಅಭಿಪ್ರಾಯವಿದೆ. ಈ ಅಭಿಪ್ರಾಯದ ಸತ್ಯಾಸತ್ಯತೆಗಳೇನೇ ಇದ್ದರೂ 'ಕ್ರಿಸ್ತಜನ್ಮ'ವೊಂದು ಅದ್ವಿತೀಯವಾದ ಪ್ರಭಾವಶಾಲಿ ಕವಿತೆಯೆಂಬುದರಲ್ಲಿ ಸಂದೇಹವಿಲ್ಲ.

ಈ ಸಂಗ್ರಹದ ಕವಿತೆಗಳೆಲ್ಲ ಗಾತ್ರದಲ್ಲಿ ಒಂದೇ ರೀತಿಯವಲ್ಲ. ಆದರೆ ತೀರ ಕಿರು ಗವನಗಳಲ್ಲೇ ಆಗಿರಲಿ, (ಉದಾ–'ಒಂದು ಭಾವ' 'ಮಧು ಮಾಸದುದಯ') ಬಹು ದೀರ್ಘ ಕಥನಗಳೇ ಆಗಿರಲಿ (ಉದಾ–'ಮಲೆನಾಡಿನ ಹಳ್ಳಿ' 'ಸನ್ಯಾಸಿ') ಎಲ್ಲದರಲ್ಲೂ ಒಂದೇ ಕೈಗುಣ ವ್ಯಕ್ತವಾಗುತ್ತದೆ. ನಾನಾ ಭಾವರಸಗಳನ್ನು ಮೀಟಿ—ಮೊಗೆಯುವ ಶಕ್ತಿ ಆ ಕೈಗಿದೆ. ಕನ್ನಡದ ಕಾವ್ಯ ಕ್ಷೇತ್ರವಿನ್ನೂ ಬಹುಮಟ್ಟಿಗೆ 'ಕನ್ನೆ ನೆಲ'ವಾಗಿಯೇ ಇದ್ದಾಗ ಪಾಂಡೇಶ್ವರರು ಮಾಡಿದ ಉಳುವೆಯಾಗಲಿ, ಪಡೆದ ಬೆಳೆಯಾಗಲೀ ನಿಜವಾಗಿಯೂ ಆಶ್ಚರ್ಯಕರವಾದದ್ದು, ಅಭಿನಂದನೀಯವಾದದ್ದು. ಅವರ ಭಾಷಾಪ್ರಭುತ್ವ, ಶೈಲಿಯ ಅನನ್ಯತೆಗಳಂತೂ ಅತ್ಯಂತ ಮನೋಜ್ಞವಾಗಿವೆ. ಅವರ ಎಷ್ಟೋ ಕವಿತೆಗಳ ಭಾಷಾ ಶೈಲಿ 'ಲಲಿತ ಲವಂಗ ಲತಾಪರಿಶೀಲನ'ದಂತೆ ಸುಖಾನಹವಾಗಿದ್ದರೆ ಇನ್ನೆಷ್ಟೋ ಕವಿತೆಗಳಲ್ಲಿ ಅದು "ಗರ್ಜದ್ದುರ್ಜಯ ಗಂಧ ಸಿಂಧುರ ಘಟಾ ಸಂಘಟ್ಟನ"ದಂತೆ ವಿಶಿಷ್ಟಾರ್ಥ ವ್ಯಂಜಕವಾದ್ದು. ಶಬ್ದಗುಣ—ಅರ್ಥಗುಣಗಳೆರಡೂ ಕೂಡಿಕೊಂಡಿದ್ದರೆ ಕಾವ್ಯವು ಹೇಗೆ ತಾನೇ ಸೊಗಸದೆ ಇದ್ದೀತು ?

ಭಾಷಾ ಶೈಲಿಯಂತೆ ಛಂದೋ ಬಂಧಗಳಲ್ಲೂ ಪಾಂಡೇಶ್ವರರು ವೈವಿಧ್ಯವನ್ನು ತೋರಿದ್ದಾರೆ. ಷಟ್ಪದಿಯ ನಾನಾರೂಪಗಳು, ರಗಳೆಯ ವಿವಿಧ ಪ್ರಭೇದಗಳು, ಆದ್ಯಂತ ಪ್ರಾಸಗಳುಳ್ಳ ಹೊಸ ಹೊಸ ಬಂಧಗಳು ಇಲ್ಲಿವೆ. 'ಚೆಂಗಲವೆ' ಪ್ರಕಟವಾದದ್ದು 1940ರಲ್ಲಾದರೂ ಅದರಲ್ಲಿರುವ ಕವಿತೆಗಳು ಅದಕ್ಕಿಂತಲೂ ಹಿಂದಿನವು. ಹೊಸಗನ್ನಡ ಕಾವ್ಯಕ್ಕೂ ಕವಿಗಳಿಗೂ ಆಗಿನ್ನು ಕೌಮಾರ್ಯ. ಅಂತಹ ಕಾಲದಲ್ಲಿ ಪಾಂಡೇಶ್ವರರು ಕಾವ್ಯ ರಂಗವನ್ನು ಧೈರ್ಯದಿಂದ ಪ್ರವೇಶಿಸಿ, ಪ್ರದರ್ಶಿಸಿದ ಹಸ್ತ ಲಾಘವಕ್ಕೆ ಕೊಂಡಾಟದ ಮೆಚ್ಚುಗೆ ಸಲ್ಲಲೇ ಬೇಕು !

ತನ್ನ 'ಚೆಂಗಲವೆ'ಯನ್ನು 'ಕನ್ನಡ ತಾಯ ಪಾದಕ್ಕೆ' ಅರ್ಪಿಸುತ್ತಾ ಪಾಂಡೇಶ್ವರರು 'ಪಂಪ ರನ್ನರಂತೆ ಲಕ್ಷ್ಮೀಶ—ನಾರಣಪ್ಪರಂತೆ ನಿನ್ನನ್ನು ಹೊಗಳಲಾರೆ, ಹಾಡಲಾರೆ,

ಆದರೂ ಕಾಲ ಪುರುಷನೇ ಕೃತಿಯನ್ನು ಪರೀಕ್ಷಿಸಿ ನಿಜವನ್ನು ನುಡಿಯಬೇಕು ’ ಎಂಬ ವಿನಯದ ಮಾತುಗಳನ್ನು ಆಡಿದ್ದಾರೆ. ಆಗಿನ್ನೂ ಪಾಂಡೇಶ್ವರರು ತರುಣರು ; ಆ ಪ್ರಾಯಕ್ಕೆ ಈ ಅಭಿಪ್ರಾಯ ಸಹಜ, ಭೂಷಣ. ಮೂವತ್ತು ವರ್ಷಗಳ ಈ ಅವಧಿಯಲ್ಲಿ ಕಾಲ ಪುರುಷ ತೀರ್ಪು ನೀಡಿದ್ದಾನೆ-“ ಕನ್ನಡ ತಾಯ ಅಡಿಯಲ್ಲಲ್ಲ, ಮುಡಿಯಲ್ಲಿ ಮೆರೆಯುತ್ತಿದೆ ಚೆಂಗಲವೆ !”

# ೧೧. ಪಂಜೆಯವರ ‘ ಕೋಟಿ–ಚೆನ್ನಯು ’

ಇತ್ತೀಚೆಗೆ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ನೆರವೇರಿದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಶ್ರೀ ಜಿ. ಪಿ. ರಾಜರತ್ನಂ “ ಪಂಜೆ ಮಂಗೇಶರಾಯರು ಬರೆದ ‘ ಕೋಟಿ–ಚೆನ್ನಯ ’ ದಿಂದ ತನಗೆ ಹೊಸತೊಂದು ಲೋಕವೇ ತೆರೆದಂತಾಯಿತು ” ಎಂಬರ್ಥದ ಮಾತುಗಳನ್ನು ಆಡಿದರು. ಹೌದು, ಸುಮಾರು ನಲ್ವತ್ತು-ಐವತ್ತು ವರ್ಷಗಳಷ್ಟು ಹಿಂದೆ, ಜಾನಪದ ಸಾಹಿತ್ಯ ಸಂಪತ್ತು ಜನರ ಕಣ್ಮನಗಳನ್ನು ಅಷ್ಟಾಗಿ ಸೆಳೆಯದಿದ್ದಾಗ, ಪಂಜೆ ಮಂಗೇಶರಾಯರು ತುಳುವಿನಿಂದ ಆರಿಸಿ, ಪರಿಷ್ಕರಿಸಿ, ಅನುವಾದಿಸಿ ಪ್ರಕಟಿಸಿದ ‘ ಕೋಟಿ–ಚೆನ್ನಯು ’ ವನ್ನು ಓದುವಾಗ ಈಗಲೂ ತುಳುನಾಡಿನ ಸೊಂಪು ಕಣ್ಣಿಗೆ ಕಟ್ಟುತ್ತಿದೆ ; ಕಂಪು ಮೂಗಿಗೆ ಬಡಿಯುತ್ತಿದೆ. ಈಗೀಗ ಜಾನಪದ ಸಾಹಿತ್ಯವು ಪಾಮರರಿಗಷ್ಟೇ ಅಲ್ಲ ಪಂಡಿತರಿಗೂ ಪ್ರಿಯವೆನಿಸುತ್ತಿದೆ. ಜಾನಪದ ನಿಕ್ಷೇಪಗಳಿಂದ ಚಿನ್ನದ ಅದಿರುಗಳನ್ನು ಅಗೆದು ದಿವ್ಯಾಭರಣಗಳನ್ನು ತಯಾರಿಸಿ ಧರಿಸಿ ಸಂತೋಷ ಪಡುತ್ತಿರುವ ಸಾಹಿತ್ಯ ರಸಿಕರು ಹೆಚ್ಚುತ್ತಿದ್ದಾರೆ. ಅಂತಹವರಿಗೂ ಪಂಜೆಯವರು ಅಂದು ಮಾಡಿದ ಕೆಲಸವು ಒಂದು ಮಾದರಿಯಾಗಿದೆ. ಅದರಲ್ಲೂ ತುಳುನಾಡಿನ ಕಡುಗಲಿಗಳಾದ ಕೋಟಿ–ಚೆನ್ನಯರ ವೀರಗಾಥೆಯನ್ನು ಚಲಚ್ಚಿತ್ರೀಕರಿಸಿ* ಬೆಳ್ಳಿ ಪರದೆಯ ಮೇಲೆ ಪ್ರದರ್ಶಿಸುವ ಪ್ರಯತ್ನವಾಗುತ್ತಿದ್ದು ಆ ಪ್ರಯತ್ನವು ಜನರಲ್ಲಿ ಕುತೂಹಲವನ್ನು ಕೆರಳಿಸುತ್ತಿರುವ ಈ ಕಾಲದಲ್ಲಿ ಪಂಜೆಯವರ ಕುಸುರಿಗೆಲಸದ ಪರಿಚಯವು ಸಾಮಯಿಕವೂ ಆಗಬಹುದಲ್ಲವೇ ?

ಪಂಜೆಯವರು ಕೋಟಿ–ಚೆನ್ನಯರ ಕತೆಯನ್ನು ಸಂಗ್ರಹಿಸುವಲ್ಲಿ ತಾವು ವಹಿಸಿದ ಪರಿಶ್ರಮ, ಅದಕ್ಕೆ ತಗಲಿದ ಕಾಲಾವಧಿ, ಕಥಾ ನಿರೂಪಣೆಯಲ್ಲಿ ತಮ್ಮ ದೃಷ್ಟಿ ಮತ್ತು ಸೃಷ್ಟಿ ಇವನ್ನೆಲ್ಲ ಪುಸ್ತಕದ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಭೂತಗಳ ‘ ಸಂಧಿ ’ಯಲ್ಲಿ ಚೆದರಿ ಹೋದ ಮಣಿಗಳನ್ನು 1908ರಲ್ಲಿ ಹೆಕ್ಕಿಕೊಂಡು, ‘ ಇಂಡಿಯನ್ ಎಂಟಿಕ್ವೇರಿ ’ ಎಂಬ ಮಾಸಿಕದಲ್ಲಿ ಕತೆಯ ಆಂಗ್ಲಾನುವಾದನನ್ನು ಓದಿ, ಅದರ ಬೇರು ಡಾ. ಮೊಗ್ಲಿಂಗರ ‘ ಪಾಡ್ದೊನೆಳು ’ ಎಂಬ ಪುಸ್ತಕದಲ್ಲಿರುವುದನ್ನು ತಿಳಿದು, 1909ರಲ್ಲಿ ಆ ಪುಸ್ತಕವನ್ನೂ ಸಂಪಾದಿಸಿಕೊಂಡರು. ಅಷ್ಟೇ ಅಲ್ಲದೆ ತಾವು ಕಂಡ–ಕೇಳಿದ ಕೋಟಿ–ಚೆನ್ನಯ ವೃತ್ತಾಂತಗಳಲ್ಲಿ ಅನೇಕತೆಯಿದ್ದುದರಿಂದ ಕಥಾ ಕ್ಷೇತ್ರಗಳಾದ ಪಂಜ–ಪಡುಮಲೆ-ಎಣ್ಮೂರುಗಳನ್ನು ಸುತ್ತಿ, ವಿವಿಧ ಪಾಠಾಂತರಗಳನ್ನು ಸಂಗ್ರಹಿಸಿದರು. 1917ರಲ್ಲಿ ಮೊಗ್ಲಿಂಗರ ತುಳು ‘ ಪಾಡ್ದೊನೆ ’ ಯನ್ನು ಮಿತ್ರರೊಬ್ಬರಿಂದ ಕನ್ನಡಿಸುವ ಹಂಚಿಕೆ ಮಾಡಿದರು. ಆದರೂ ತಮ್ಮ ಮನಸ್ಸಿಗೆ ತೃಪ್ತಿಯಾಗದಿದ್ದಾಗ ತಾವು ಕಲೆ ಹಾಕಿದ ಮಾಹಿತಿಗಳನ್ನೆಲ್ಲ ಎಂಟು ವರ್ಷ ಹಾಗೆಯೇ ನೆನೆ ಹಾಕಿದರು. (ಇದು ಪಂಜೆಯವರ ವೈಶಿಷ್ಟ್ಯ). ಕಾಲಾಂತರದಲ್ಲಿ ಕೋಟಿ–ಚೆನ್ನೆಯ ವಿಷಯಕವಾದ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗುವು

---

*‘ ಕೋಟಿಚೆನ್ನಯ ’ ಸಿನೆಮಾ ಆಯಿತು ! ಆದರೆ ಅಲ್ಲಿರುವುದು ‘ ಸಿನಿಮಾ ಕತೆ ’ ನಾವು ಕಂಡು–ಕೇಳಿದ ಕತೆಯಲ್ಲ !

ದನ್ನು ಕಂಡು, ಧೈರ್ಯ ತಂದು, 'ಕಾಲಲಬ್ಧಿ' ಯಾಯಿತೋ ಎಂಬಂತೆ 1925ರ ಸುಮಾರಿಗೆ ಹಸ್ತಪ್ರತಿಯನ್ನು ಮತ್ತೊಮ್ಮೆ ಪರಿಷ್ಕರಿಸಿದರು. ಕಳೆಯೆಂದು ಕಂಡವುಗಳನ್ನು ಕಿತ್ತೆಸೆದು, ಮೂಲದ ಚೆಲುವನ್ನು ಆದಷ್ಟೂ ಉಳಿಸಿ, ಒಂದೆರಡು ಸಂಗತಿಗಳನ್ನು ಮಾತ್ರ ನೂತನವಾಗಿ ಸೇರಿಸಿ ಪುಸ್ತಕವನ್ನು ಮುದ್ರಿಸಿದರು.–ಇದಿಷ್ಟೂ ಪುಸ್ತಕದ ಹಿನ್ನೆಲೆ. ಹೀಗೆ, ಸ್ವತಂತ್ರ ಕೃತಿ ರಚನೆಯೆ ಆಗಲಿ ಅನುವಾದ ಕಾರ್ಯವೇ ಇರಲಿ ಅದಕ್ಕೆ ಎಷ್ಟು ಸಿದ್ಧತೆ ಆವಶ್ಯವೆಂಬುದನ್ನು ಪಂಜೆಯವರು ತೋರಿಸಿಕೊಟ್ಟಿದ್ದಾರೆ.

ಇನ್ನು ಪುಸ್ತಕದೊಳಗಿನ ತಿರುಳು–ಹುರುಳುಗಳೇನೆಂಬುದನ್ನು ನೋಡೋಣ: ಪಂಜೆಯವರು ಒಟ್ಟು ಕತೆಯನ್ನು ಮೂರು ಭಾಗಗಳಾಗಿ ಪಡುಮಲೆಯಲ್ಲಿ, ಪಂಜದಲ್ಲಿ, ಎಣ್ಮೂರಲ್ಲಿ ಎಂದು ಮಾಡಿದ್ದಾರೆ. ಪಡುಮಲೆಯ ಪೆರುಮಾಳು ಬಲ್ಲಾಳನು ಬೇಟೆಗೆ ಹೋದಾಗ ಕಾಲಿಗೆ ಮುಳ್ಳು ಚುಚ್ಚಿ, ನೋವು 'ಏರಿದಾಗ ದೇಯಿ ಬೈದಿತಿಯೆಂಬ ಗರ್ಭಿಣಿ ವಿದವೆ ನೋವಿಗೆ ಚಿಕಿತ್ಸೆ ಮಾಡಿದ್ದು, ಬಲ್ಲಾಳನು ಬೈದಿತಿಗೆ ಉಡುಗೊರೆಗಳನ್ನು ನೀಡಿದ್ದು, ಅವಳು ಬಲ್ಲಾಳನ ಆರೆಯಲ್ಲಿ ಕೋಟಿ–ಚೆನ್ನಯರೆಂಬ ಅವಳಿ ಮಕ್ಕಳನ್ನು ಹಡದದ್ದು, ಅವರು ಬಳೆದು ದೊಡ್ಡವರಾದದ್ದು, ಮಲ್ಲಯ ಬುದ್ಧಿವಂತನಿಗೂ ಕೋಟಿ–ಚೆನ್ನಯರಿಗೂ ಮನಸ್ತಾಪವುಂಟಾಗಿ ಚೆನ್ನಯನು ಮಲ್ಲಯನನ್ನು ಇರಿದು ಕೊಂದದ್ದು, ಅನಂತರ ಕೋಟಿ–ಚೆನ್ನಯರು ಬಲ್ಲಾಳನನ್ನು ಬೀಡಿನಲ್ಲಿ ಭೇಟಿಯಾಗಿ ತಮ್ಮ ತಾಯಿಗೆ ನೀಡಿದ್ದ ಮಾತು ಸಲ್ಲಿಸುವುದಕ್ಕೆ ಗಡುವು ಇಟ್ಟು ಊರು ಬಿಟ್ಟದ್ದು, ದಾರಿಯಲ್ಲಿ ಬ್ರಾಹ್ಮಣ ಜೋಯಿಸನೊಬ್ಬ ಭವಿಷ್ಯನುಡಿದದ್ದು, ಸುಂಕದ ದೇರೆ ಎಂಬುವನು ಕೋಟಿ ಚೆನ್ನಯರನ್ನು ಕೆಣಕಿ, ಮತ್ತೆ ಅವರಿಗೆ ಹೆದರಿ ತಲೆ ಮರೆಸಿದ್ದು–ಇದಿಷ್ಟು ಮೊದಲ ಭಾಗದ ಕತೆ.

ಎರಡನೆಯ ಭಾಗದಲ್ಲಿ–ಕೋಟಿ ಚೆನ್ನಯರು ತಮ್ಮ ಅಕ್ಕ ಕಿನ್ನಿದಾರುವನ್ನೂ ಭಾವ ಪಯ್ಯನನ್ನೂ ಭೇಟಿಯಾಗುವುದು, ಪಂಜದ ಬಲ್ಲಾಳನ ಆಪ್ತ ಸಚಿವ ಚೆಂದುಗಿಡಿಯು ಕೋಟಿ–ಚೆನ್ನಯರ ಶೌರ್ಯ ಸಾಹಸಗಳ ಕತೆ ಕೇಳಿ ಹೊಟ್ಟೆಕಿಚ್ಚು ಪಡುವುದು, ಅವನ ಕುತಂತ್ರದಿಂದಾಗಿ ಕೋಟಿ–ಚೆನ್ನಯರು ಬಲ್ಲಾಳನ ಅರಮನೆಯಲ್ಲಿ ಬಂದಿಗಳಾದರೂ, ಉಪಾಯದಿಂದ ತಪ್ಪಿಸಿಕೊಂಡು ಎಣ್ಮೂರನ್ನು ಸೇರುವುದು ಚಿತ್ರಿತವಾಗಿದೆ.

ಪಂಜದ ಕೇಮರ ಬಲ್ಲಾಳನ ಪಂಜರದಿಂದ ಹೊರ ನೆಗೆದ ಕೋಟಿ–ಚೆನ್ನಯರು ಕಿನ್ನಿಚೆನ್ನಯ್ಯನೆಂಬುವನ ಮಾಧ್ಯಸ್ಥದಿಂದಾಗಿ ಎಣ್ಮೂರಿನ ದೇವಬಲ್ಲಾಳನಲ್ಲಿ ಆಸರೆಯನ್ನು ಪಡೆಯುವುದೂ ಕೋಟಿ ಚೆನ್ನಯರು ಎಣ್ಮೂರನ್ನು ಸೇರಿದ ಸುದ್ದಿಯನ್ನು ತಿಳಿದು ಪಂಜ ಪಡುಮಲೆಗಳ ಬಲ್ಲಾಳರು ಅವರನ್ನು ಸೆರೆಹಿಡಿಯುವ, ಹಿಡಿಯದಿದ್ದಾಗ ಕೊಂದುಹಾಕುವ ನಾನಾ ಉಪಾಯಗಳನ್ನು ಮಾಡಿ ವಿಫಲರಾಗುವುದೂ ಕೋಟಿ–ಚೆನ್ನಯರ ಆಶಯದಂತೆ ದೇವ ಬಲ್ಲಾಳನ ಕಡೆಯವರು ತುಪ್ಪೆಕಲ್ಲು ಎಂಬ ಅಡವಿಯಲ್ಲಿ ಬೇಟೆಯಾಡಿದಾಗ ಎಣ್ಮೂರವರಿಗೂ ಪಂಜದವರಿಗೂ ಮಾತಿಗೆ ಮಾತು ಬೆಳೆದು ಜಗಳವಾಗುವುದೂ ಜಗಳದಲ್ಲಿ ಕೋಟಿ–ಚೆನ್ನಯರು ಜಯಗಳಿಸುವುದೂ ಸೋಲಿನಿಂದ ಅಪಮಾನಿತನಾದ ಕೇಮರ

ಬಲ್ಲಾಳನು ಚೆಂದುಗಿಡಿಯ ದುರ್ಮಂತ್ರದಂತೆ ಪಡುಮಲೆಯವರ ನೆರವಿನಿಂದ ಎಣ್ಮೂರಿನವರನ್ನು ಕಾಳಗಕ್ಕೆ ಕರೆಯುವುದೂ ಕಾಳಗದಲ್ಲಿ ಕೋಟಿ-ಚೆನ್ನಯರು ಅತ್ಯದ್ಭುತ ಪರಾಕ್ರಮವನ್ನು ಪ್ರದರ್ಶಿಸಿ ಎಣ್ಮೂರಬಲ್ಲಾಳನಿಗೆ ಗೆಲುವನ್ನು ತಂದರೂ, ಕೋಟಿಯು ವೈರಿಬಾಣದೇಟಿನಿಂದ ಸಾಯುವುದೂ ಚೆನ್ನಯನು ತನ್ನನ್ನು ಕೊಲ್ಲಲೆಳಸಿದ ಚೆಂದುಗಿಡಿಯ ಕಪಾಲಕ್ಕೆ ತುಳಿದ ಸಾಹಸಿ 'ಅಣ್ಣನಿಲ್ಲದೆ ತಾನು ಬಾಳಲಾರೆ'ನೆಂದು ತನ್ನನ್ನು ತಾನೇ ಕೊಂದುಕೊಳ್ಳುವುದೂ, ಎಣ್ಮೂರು ಪಡುಮಲೆಗಳ ಬಲ್ಲಾಳರು ಆ ವೀರರ ಮರಣಕ್ಕಾಗಿ ದುಃಖಿಸುವುದೂ ಮೂರನೆಯ ಭಾಗದಲ್ಲಿ ವರ್ಣಿತವಾಗಿದೆ.

ಎಳೆಯ ಮಕ್ಕಳನ್ನು ದೃಷ್ಟಿಪಥದಲ್ಲಿರಿಸಿ ಪಂಜೆಯವರು ಬರೆದ ಕತೆಯಿದು. ಎಳೆಯರಿಗಾಗಿ ಬರೆದುದನ್ನು ಬಳೆದವರೂ ಓದಿ ಮೆಚ್ಚಬಹುದಲ್ಲವೇ? ಪಂಜೆಯವರು ಕಟ್ಟಿದ ಸಾಹಿತ್ಯಮಾಲೆಯಲ್ಲಿ ಕೋಟಿ-ಚೆನ್ನಯ ನಾಯಕ ಮಣಿಯೆನ್ನಬಹುದು. ಭಾಷಾ ಶೈಲಿ, ವರ್ಣನಕ್ರಮ, ನಿರೂಪಣ ವಿಧಾನ ಮುಂತಾದುವುಗಳಿಂದ ಕೋಟಿ–ಚೆನ್ನಯ ಕನ್ನಡದ ಅತ್ಯುನ್ನತ ಕೃತಿಗಳಲ್ಲಿ ಒಂದಾಗಿದೆ. ಜಾನಪದವೋ ಗ್ರಾಮ್ಯವೋ ಆಗಿರುವಂತಹ ಕಥಾನಕವನ್ನು ಹೊಸ ಕಾಲಕ್ಕೆ, ಹೊಸ ರುಚಿಗೆ ಹೇಗೆ ಒಗ್ಗಿಸಿಕೊಳ್ಳಬಹುದೆಂಬುದಕ್ಕೆ ಕನ್ನಡಿಗರು 'ಕೋಟಿ–ಚೆನ್ನಯ'ವನ್ನು ಕಣ್ಣಮುಂದಿರಿಸಿಕೊಂಡರೆ ಸಾಕು.

ಪಂಜೆಯವರ ಭಾಷೆ, ಶೈಲಿ, ವರ್ಣನೆಗಳು ಸರಳವಾದದ್ದು, ಸುಂದರವಾದದ್ದು; ಗಂಟುಗಳನ್ನಾಗಲೀ ಪೆಡಸುತನವನ್ನಾಗಲೀ ಎಲ್ಲೂ ಕಾಣೆವು. ಕತೆಯ ಉದ್ದಕ್ಕೂ 'ತಿಳಿನೀರಿನ ಹರಿತ' 'ಮೊಗ ಕಾಣುವಷ್ಟು ತಿಳಿಯಾದ' ಭಾಷೆ ಶೈಲಿಗಳನ್ನೇ ಕಾಣುತ್ತೇವೆ. ಕೆಲವು ಉದಾಹರಣೆಗಳನ್ನು ನೋಡಿ: 'ಬೊಮ್ಮಯ ಬಲ್ಲಾಯನ ಬಲಿಯಾಯಿತು; ಅಮ್ಮಣ ಬೈದ್ಯನ ಮುದ್ದಾಯಿತು. ಆದರೆ ತಾನೇ 'ಏನು? ಬಲ್ಲಾಳನಿಗೆ ದಿನದಿನಕ್ಕೆ ಉರಿ ನೋವು, ಬೀಗು ಬಾವು, ಕೆಂಪು ಕೀವು ಹೆಚ್ಚುಹೆಚ್ಚಾಯಿತು. ಅನ್ನದಲ್ಲಿ ರುಚಿಯಿಲ್ಲ, ಹಾಸಿಗೆಯಲ್ಲಿ ಸುಖವಿಲ್ಲ'.......ಇದು ಪೆರುಮಾಳು ಬಲ್ಲಾಳನ ಕಾಲಿಗೆ ಮುಳ್ಳು ಚುಚ್ಚಿ ನಂಜು ತಲೆಗೇರಿದುದರ ವಿವರಣೆ. ತಾಯನ್ನು ಕೆಳಕೊಂಡ ಕೋಟಿ–ಚೆನ್ನಯ್ಯರನ್ನು ಬಲ್ಲಾಳನು ಸಲಹುವ ರೀತಿ: 'ಮಕ್ಕಳ ಸಾಕಣೆಗಾಗಿ ಬಿಂದಿಗೆ ತುಂಬ ಹಾಲು, ಹಾಲಿಗಾಗಿ ಹಸು, ಹಸು ಬತ್ತಿದರೆ ಎಮ್ಮೆ, ಮಕ್ಕಳಿಗೆ ಮಲಗಲಿಕ್ಕೆ ಮಂದರಿ, ಮಂದರಿ ಹರಿದರೆ ಹಚ್ಚಡ ಹಚ್ಚಡ ಹರಿದರೆ ಮಂದರಿ."....ಕೋಟಿ–ಚೆನ್ನಯರು ತಮ್ಮ ಪಾಲಿನ ಗದ್ದೆಯನ್ನು ಗೋರಿ ಬಿತ್ತಿದ ಬಳಿಕ:' ಕೋಟಿಯ ಗದ್ದೆಯು ನೀರು ತುಂಬಿ ರಾಮ ಸಮುದ್ರದಂತೆ ಕಾಣುತ್ತಿತ್ತು ಬುದ್ಧಿವಂತನ ಗದ್ದೆಯಲ್ಲಿ ಚಿಟ್ಟೆ ಕುಡಿಯಲು ಕೂಡ ನೀರು ಇಲ್ಲದೆ ಕೊಕ್ಕರೆ ಆಡುತಿತ್ತು? ಕೋಟಿ–ಚೆನ್ನಯರು ಪಡುಮಲೆ ಬಲ್ಲಾಳನ ಬೀಡಿಗೆ ನಡೆಯುವ ದೃಶ್ಯ: 'ಪಾಲೆದಾಟಿ, ಬೈಲು ಕಳೆದು, ಬೆಟ್ಟ ಹತ್ತಿ, ಹಿತ್ತಿಲಿಗೆ ಇಳಿದು, ಅಡ್ಡವನ್ನು ಅಡರಿ, ಹೊಡೆಯಲ್ಲಿ ಹೋಗಿ, ಹೊಳೆಯನ್ನು ಹಾಯ್ದು....ಬೆಳ್ಳಿಯ ಕಲಶದ ಬಿಳಿಯ ಉಪ್ಪರಿಗೆಯನ್ನು ಏರಿದರು.' ಕೋಟಿ-ಚೆನ್ನಯರಿಗೆ ಅಕ್ಕ ಕಿನ್ನಿದಾರುವಿನ ಉಪಚಾರ: 'ಆ ದಿನ ಅಕ್ಕನ ಮನೆಯ ಬಿಳಿಯ ಅನ್ನವೇನು, ಬೆಲ್ಲದ ಪಾಯಸವೇನು, ಹಲಸಿನ ಸುಟ್ಟವೆಯೇನು, ತುಪ್ಪದ ಒಗ್ಗ

ರಣೆಯೇನು, ಬೆಣ್ಣೆಯ ಮೊಸರೇನು, ಉಪ್ಪಿನಕಾಯಿಯೇನು ?’–ಅಡುಗೆಯ ಈ ಬಣ್ಣನೆಯೇ ಬಾಯಲ್ಲಿ ನೀರೂರಿಸುವಂತಿದೆ.

ಸರಳ ಸುಂದರ ಭಾಷಾಶೈಲಿಯಿಂದ ಪಂಜೆಯವರ ವರ್ಣನೆಗಳೂ ಹೃದ್ಯವೆನಿಸುತ್ತವೆ. ಕೋಟಿ–ಚೆನ್ನಯರ ನಿಲವು ಚೆಲವುಗಳು ಹೇಗಿದ್ದುವು ಎಂಬುದಕ್ಕೆ–‘ಆ ವೀರಕುಮಾರರ ಬಿಳಿನಗುವಿನ, ನಗುಮೊಗದ, ಮೊಗಸಿರಿಯ, ಸಿರಿಯ ಸಿಂಗಾರವನ್ನು ನೋಡುವುದಕ್ಕೆ ನೂರು ಕಣ್ಣು, ಬಣ್ಣಿಸುವುದಕ್ಕೆ ನೂರು ನಾಲಗೆ ಇದ್ದರೂ ಸಾಲದು.’ ಕಣ್ಣಿಗೆ ಚೆಲುವರು, ಜನರಿಗೆ ಮರುಳರು ; ಜನಿಸಿದವರಲ್ಲಿ ಇಲ್ಲ. ಇನ್ನು ಜನಿಸಲಿಕ್ಕಿಲ್ಲ. ಅವರಿದ್ದ ರಾಜ್ಯದಲ್ಲಿ ಒಂದು ಊರು ಉಳಿಸಬಹುದು, ಒಂದು ಊರು ಅಳಿಸಬಹುದು–ಈ ವ್ಯಕ್ತಿ–ವರ್ಣನೆಯ ತಿಳಿನೀರಿನ ಅಡಿಯಲ್ಲಿ ಕೋಟಿ–ಚೆನ್ನಯರ ಶೀಲ–ಸ್ವಭಾವಗಳೂ ಎಷ್ಟೊಂದು ಪರಿಸ್ಫುಟವಾಗಿ ಹೊಳೆಯುತ್ತಿವೆ! ಶೀಲವರ್ಣನೆಯ ಇನ್ನೊಂದೆರಡು ಚಿತ್ರಗಳನ್ನು ನೋಡಿ : ಚೆಂದುಗಿಡಿಯೂ ಕೇಮರ ಬಲ್ಲಾಳನೂ ಒಂದೇ ಹಟ್ಟಿಯಲ್ಲಿ ಹೋರಿದ ಹೋರಿಗಳು ಒಂದೇ ಗರಡಿಯಲ್ಲಿ ಕಲಿತ ಬಂಟರು. ಕೇಮರ ಬಲ್ಲಾಳನಿಗೆ ‘ಹಿತ್ತಾಳೆಯ ಕಿವಿ ; ಕೆಸರು ಕಂಬದ ಮನಸ್ಸು ; ಭಂಗಿಕೋರರ ಬುದ್ಧಿ. ‘ಗಿಳಿ ಮೂಗು, ಕುಡಿತೆ ಕವಿ, ಜಳ್ಳು ಹೊಟ್ಟೆ, ಅಂಡೆಕಾಲು. ಎಣ್ಮೂರಿನ ದೇವಬಲ್ಲಾಳನು ಪೆರುಮಾಳು ಬಲ್ಲಾಳನಷ್ಟು ರಣಶೂರನೂ ಅಲ್ಲ, ಪಂಜದ ಕೇಮರ ಬಲ್ಲಾಳನಷ್ಟು ರಣಭೀರುವೂ ಅಲ್ಲ’–ಹೀಗೆ ಎಷ್ಟೊ ಸಾಲುಗಳನ್ನು ಉದಹರಿಸಬಹುದು. ಗದ್ಯವಾದರೂ ಪದ್ಯದಲ್ಲಿರುವಂತೆ ಅಲ್ಲಲ್ಲಿ ಬರುವ ಪ್ರಾಸಾನುಪ್ರಾಸಗಳು, ಪುನರುಕ್ತಿ ಮುಂತಾದುವುಗಳು ಕಿರಿಯರ ಕಿವಿಗಳು ಒಲಿವಂತೆಯೂ ಹಿರಿಯರ ತಲೆಗಳು ಒಲೆಯುವಂತೆಯೂ ಮಾಡುತ್ತವೆ. ಸಾಮಾನ್ಯವಾಗಿ ಒಂದೆರಡೇ ವಾಕ್ಯಗಳಲ್ಲಿ, ಒಮ್ಮೊಮ್ಮೆ ನಾಲ್ಕಾರು ಪಂಕ್ತಿಗಳಲ್ಲಿ ಒಂದು ಸನ್ನಿವೇಶವನ್ನೋ ವ್ಯಕ್ತಿಯ ಗುಣಸ್ವಭಾವವನ್ನೋ ಕೆತ್ತಿ ನಿಲ್ಲಿಸಿದಂತೆ ಖಚಿತವಾಗಿ ರಮ್ಯೋಜ್ವಲವಾಗಿ ಚಿತ್ರಿಸಬಲ್ಲ ಸರಸಾಗ್ರ ಲೇಖನಿ ಪಂಜೆಯವರದ್ದು.

ಒಂದು ಕತೆಯನ್ನೋ ಕವಿತೆಯನ್ನೋ ಓದುವಾಗ ಒಂದು ಚಿತ್ರ ಕಣ್ಣಿಗೆಕಟ್ಟಿದಂತಿರಬೇಕು. ಇದು ಪಂಜೆಯವರ ದೃಷ್ಟಿ ಈ ದೃಷ್ಟಿಗೆ ಪಂಜೆಯವರ ಕತೆ, ಕವಿತೆಗಳೆ–(ಉದಾ ಮೂರು ಕರಡಿಗಳು, ಆಗೊಳಿಮಂಜಣ್ಣ ತೆಂಕಣಗಾಳಿಯಾಟ, ನಾಗರಹಾವು, ದೊಂಬರ ಚೆನ್ನಿ ಇತ್ಯಾದಿ) ದೃಷ್ಟಾಂತ. ಕೋಟಿ–ಚೆನ್ನಯವೂ ಹಾಗೆಯೇ ಎಂಬುದನ್ನು ಮೇಲಿನ ಉದಾಹರಣೆಗಳಿಂದ ಕಂಡುಕೊಳ್ಳಬಹುದು. ಮಾತ್ರವಲ್ಲ, ಅದರಲ್ಲಿ ಅಲ್ಲಲ್ಲಿ ಬರುವ ಸಂಭಾಷಣೆಗಳೂ ಕತೆಗೊಂದು ನಾಟಕೀಯ ಗುಣವನ್ನು ನೀಡಿ, ಚಿತ್ರವು ಇನ್ನಷ್ಟು ಜೀವಂತವೂ, ಸುಸ್ಪಷ್ಟವೂ ಆಗುವಂತೆ ಮಾಡಿವೆ. ಅಂತಹ ಒಂದೆರಡು ಸಂದರ್ಭಗಳನ್ನು ಗಮನಿಸಬಹುದು. ಕೋಟಿ–ಚೆನ್ನಯರು ತಮ್ಮ ತಾಯ ಬಯಕೆಯನ್ನು ಸಲಿಸುವಂತೆ ಪೆರುಮಾಳು ಬಲ್ಲಾಳನೊಂದಿಗೆ ವಾದಿಸುವ ಸನ್ನಿವೇಶ : ಬಲ್ಲಾಳ–“ಏನುಬೇಕು ಕೇಳಿ, ಕೊಡುತ್ತೇನೆ” ಕೋಟಿ “ಬೀಡಿನ ಮುಂದಿನ ಬಾಪ ಮೂರುಗದ್ದೆ”. ಬಲ್ಲಾಳ “ಅದಾಗದು” ಕೋಟಿ–“ಹಾಲು ಬತ್ತದ ಸರಳೆಮ್ಮೆ”. ಬಲ್ಲಾಳ– “ಅದು ನಮಗೆ

ಬೇಕು"....ಚೆನ್ನಯ–"ನಿಮ್ಮ ಇಬ್ಬರು ಹೆಂಡಿರ ಹೂದೋಟಗಳನ್ನು ಕೊಡಿಸಿ" ಬಲ್ಲಾಳ–"ಏನೆಂದೆ?" ಚೆನ್ನಯ್ಯ–"ನಿಮ್ಮ ಪಟ್ಟದ ಕತ್ತಿ"–ಕೋಟಿ–ಚೆನ್ನಯರು ಏನನ್ನು ಕೇಳುತ್ತಾರೋ, ಬಲ್ಲಾಳನು ಏನನ್ನು ಕೊಡುತ್ತಾನೋ ಎಂಬ ಓದುಗರ ಕುತೂಹಲವನ್ನು ಹಂತಹಂತವಾಗಿ ಏರಿಸುತ್ತ, ಈ ಪ್ರಸಂಗವು ಬಲ್ಲಾಳ–ಚೆನ್ನಯರ ಸಂವಾದದಲ್ಲಿ ಮುಗಿಲನ್ನು ಮುಟ್ಟುವಂತಿದೆ.

ಕೋಟಿ–ಚೆನ್ನಯರು ಪಂಜದಲ್ಲಿ ಮೊದಲಬಾರಿಗೆ ತಮ್ಮ ಅಕ್ಕ ಕಿನ್ನಿದಾರುವನ್ನು ಕಂಡಾಗ–ಅಕ್ಕ ಹೌದೋ ಅಲ್ಲವೋ ಎಂಬುದನ್ನು ತಿಳಿದುಕೊಳ್ಳುವ ಭಾಗ: ಕೋಟಿ–"ತಾಯಿ ಯಾರು?" ಹೆಂಗಸು–"ಬಿರ್ಮಣ್ಣ ಬೈದ್ಯನಮಗಳೇ ನನ್ನ ತಾಯಿ" "ತಾಯಿಯ ಹೆಸರು" ಹೆಂಗಸು–"ದೇಯಿ" ಕೋಟಿ–"ತಂದೆಯ ಹೆಸರು?" ಹೆಂಗಸು–"ಕಾಂತಣ್ಣ" ಕೋಟಿ–"ಮೂಲಸ್ಥಳ?" ಹೆಂಗಸು–"ಕೆಮ್ಮಲಜೆಯ ಬ್ರಹ್ಮರ ಎಂದು ಹೇಳುವುದನ್ನು ಕೇಳಿದ್ದೇನೆ. ನಾನು ನೋಡಲಿಲ್ಲ"–ಈ ಪ್ರಶ್ನೋತ್ತರಗಳು ಹೀಗೆಯೇ ಬೆಳೆದು ಕೋಟಿ–ಚೆನ್ನಯರ ಸಂಶಯವು ಸಡಿಲಾದಾಗ ಚೆನ್ನಯ–"ಅಕ್ಕಾ, ನಿನ್ನ ಹೆಸರು? ಹೆಂಗಸು–"ನನ್ನ ಹೆಸರು ಕಿನ್ನಿದಾರು" ಕೂಡಲೇ ಕೋಟಿಚೆನ್ನಯರು ಎದ್ದು–"ಅಕ್ಕ ಎಂದರೆ ನೀವೇ ಸೈ, ತಮ್ಮ ಎಂದರೆ ನಾವೇ ಸೈ"–ಎಂದು ಅವಳ ಪಾದಕ್ಕೆರಗುವರು–ಈ ಸಂವಾದ ಸಂದರ್ಭವೂ ಮೇಲಿನವರಷ್ಟೇ ರಮಣೀಯವಾಗಿದೆ. ಈ ಪುಸ್ತಕದಲ್ಲಿ ಇಂತಹವು ಇನ್ನೂ ಎಷ್ಟೋ ಇವೆ.

ಅರವತ್ತನಾಲ್ಕು ಪುಟಗಳ ಪುಟ್ಟ ಪುಸ್ತಕ 'ಕೋಟಿ–ಚೆನ್ನಯ'. ಆದರೆ ಇದರಲ್ಲಿರುವ ಗಾದೆಮಾತುಗಳೂ, ನುಡಿಗಟ್ಟುಗಳೂ ಅಸಂಖ್ಯಾತವಾಗಿವೆ; ಹೊಸಗನ್ನಡ ಗದ್ಯಕ್ಕೆ ಪಂಜೆಯವರ ಕೊಡುಗೆಗಳಾಗಿವೆ. ಅವುಗಳಲ್ಲಿ ಕೆಲವು ಹಳತಾದರೂ ಕೆಲವು ಹೊಸತು, ಪಂಜೆಯವರದೇ ಸೃಷ್ಟಿ: "ಏಟು ಎತ್ತಿನ ಬೆನ್ನಿಗೆ, ನೋವು ಮಾತ್ರ ನಮ್ಮ ಎದೆಗೆ" "ಎಣಿಲ ಕಾಲದ ಉಪ್ಪನ್ನು, ಸುಗ್ಗಿ ಕಾಲದ ಮಳೆ ಬೆಳೆ", "ತಲೆಗೆ ಹೊಯ್ದ ನೀರು ಕಾಲಿಗೆ ಇಳಿಯುತ್ತದೆ. ಕಾಲಿಗೆ ಎರೆದ ನೀರು ತಲೆಗೆ ಏರುವುದೇ?" "ಬಳ್ಳಿಯಷ್ಟು ಬಾವು ಇಲ್ಲ ಮೊಗ್ಗೆಯಷ್ಟು ಮೊನೆ ಇಲ್ಲ" "ಇದ್ದಾಗ ನಾವು ಓಲಗದ ಬಂಟರು; ಸತ್ತರೆ ವೈಕುಂಠದ ನಂಟರು." "ಸುಳ್ಳು ನುಡಿದು ಬಾಯಿ ಹೊಲಸು ಮಾಡಬಾರದು. ಕಳ್ಳು ಕುಡಿದು ಮೈಹಾಳು ಮಾಡಬಾರದು," ಬಿತ್ತಿದಗದ್ದೆಗೆ ತೆವರಿ ಗಟ್ಟಿ ಇರಬೇಕು. ಹುಟ್ಟಿದ ಹೆಣ್ಣಿಗೆ ತವರು ಗಟ್ಟಿ ಇರಬೇಕು." "ಕಿಚ್ಚಿನ ಕಿಡಿ ಎಂದು ಗೊತ್ತಿದ್ದೂ ಕಚ್ಚೆಯಲ್ಲಿ ಕಟ್ಟಿಕೊಳ್ಳುವುದೇ?" "ನೆರಳಂತೆ ಗಿಡ್ಡವಾಗು" "ಜಗಳದ ಮಣೆಯನ್ನು ಮೆಟ್ಟು," "ಜಗವು ಇರುವಷ್ಟುಕಾಲ ಜಗಳ ಇದೆ." "ಹಣೆಯನ್ನು ಕಡಿದು ಮಣೆಯಾಗಿ ಇಡು–ಹೀಗೆ ಎಷ್ಟನ್ನೂ ಪಟ್ಟಿ ಮಾಡಬಹುದು. ಮೇಲಿನದು ಸ್ಥಾಲೀಪುಲಾಕ ನಿರ್ದೇಶನ ಅಷ್ಟೆ.

"ಕೋಟಿ–ಚೆನ್ನಯ್ಯ" ತುಳು ಪಾಡ್ದನದಿಂದ ಎತ್ತಿಕೊಂಡ ಕತೆಯಲ್ಲವೆ?–ಆದುದರಿಂದಲೇ ಪಂಜೆಯವರು ತಮ್ಮ ಅನುವಾದದಲ್ಲಿ ಮೂಲ ಭಾಷೆಯ ಸತ್ವ; ಸ್ವತ್ವಗಳು ಎದ್ದು ಕಾಣುವಂತೆ ಶ್ರಮಿಸಿದ್ದಾರೆ, ಅದರಲ್ಲಿ ಸಫಲರಾಗಿದ್ದಾರೆ. ಕತೆಯಲ್ಲಿ ಬರುವ

ಮದ್ದು ಮಾಟ, ಕಂಬಳ ಬೇಟೆ, ಬೀಡು ಚಾವಡಿಗಳಲ್ಲೆಲ್ಲ ತುಳುನಾಡಿನ 'ಮಣ್ಣಿನ ವಾಸನೆ' ಹೊಡೆಯುತ್ತಿದೆ. ಪಂಜೆಯವರು ತುಳು ಶಬ್ದಗಳನ್ನೂ ಯಥೇಚ್ಛವಾಗಿ ಯಥೋಚಿತವಾಗಿ ಬಳಸಿದ್ದಾರೆ–ಅಗೆ, ಅಡ್ಕ, ಆಯನ, ಕಲ್ಲಾಳ, ಗುತ್ತು, ಗೋರು, ತಡಮೆ, ದೋಟಿ, ಪಾಲೆ, ಪೂಕರೆ, ಬಲ್ಲೆ, ಬಾಕಿಮಾರು, ಸುಟ್ಟವು ಮುಂತಾದ ಶಬ್ದಗಳು ತುಳುವಿನವು, ಅಥವಾ ತುಳುನಾಡವರಿಗೆ ಮಾತ್ರ ಅರ್ಥವಾಗುವಂತಹವು. ಹೀಗೆ ತುಳು ಭಾಷೆಗೆ 'ಪರಕಾಯ ಪ್ರವೇಶ'ವನ್ನು ಯಶಸ್ವಿಯಾಗಿ ಮಾಡಿಸಿದ್ದಾರೆ ಪಂಜೆಯವರು.

ಬಾನಿನಿಂದ ಸಿಡಿದು ಬಂದರೋ ನೆಲವನ್ನು ಒಡೆದು ಬಂದರೋ ಎಂಬಂತೆ ಹುಟ್ಟಿ ಬೆಳೆದು, ಇಲಿಯಂತೆ ಬಾಳಲೊಪ್ಪದೆ ಹುಲಿಯಂತೆ ಹೋರಾಡಿ ಸತ್ತು ಕೈಲಾಸಕ್ಕೆ ಸಂದ ಕೋಟಿ–ಚೆನ್ನಯರ ರೋಮಾಂಚಕಾರಿ ಕಥೆಯನ್ನು ಪಂಜೆಯವರು ವೀರ–ಕರುಣ ರಸಗಳ ಪಾಕದಲ್ಲಿ ಅದ್ದಿ ಕನ್ನಡಿಗರ ಕೈಯಲ್ಲಿರಿಸಿದ್ದಾರೆ. ಕತೆಯನ್ನೋದಿ ಮುಗಿಸುವಾಗ ಓದುಗನ ಕಣ್ಣುಗಳೆರಡೂ ಕಂಬನಿಯ ಕಾರಂಜಿಗಳಾಗುತ್ತವೆ. ಹಾಗಿದ್ದೂ ಪುಸ್ತಕದ ಮುನ್ನುಡಿಯಲ್ಲಿ ಪಂಜೆಯವರು–"ತುಳುನಾಡಿನ ಒಕ್ಕಲಿಗನು....ಹಾಡುವ ಪಾಡ್ದೊನೆಯನ್ನು ಕೇಳಿ ಉಂಟಾಗುವ ರಸಾಸ್ವಾದನೆಯು ಈ ಕನ್ನಡ ಕಥೆಯ ಒಣ ಮಾತುಗಳನ್ನು–"ಓದುವುದರಿಂದ ಉಂಟಾಗಲಾರದು..." ಎಂದು ಹೇಳಿದ್ದಾರೆ! ಇದು ಪಂಜೆಯವರಿಗೇ ಸಹಜವಾಗಿದ ನಮ್ರ ಭಾವ !

–ಕನ್ನಡಿಗರು ಮರೆಯಬಾರದ ಪುಸ್ತಕ : "ಕೋಟಿ–ಚೆನ್ನಯ"

## ೧೨. ಎಂ. ಆರ್. ಶ್ರೀಯವರ 'ರಂಗಣ್ಣನ ಕನಸಿನ ದಿನಗಳು'

"ಸಾಹಿತ್ಯದಲ್ಲಿ ರುಚಿ ಹೇಗೆ ಬೇಕೋ ಹಾಗೆ ಶುಚಿಯೂ ಬೇಕು. ಕದ್ದು, ಮರೆಯಲ್ಲಿ, ತಮ್ಮವರಿಂದ ಅಡಗಿ ಕುಳಿತು ಓದುವ ಸಾಹಿತ್ಯ ರುಚಿಯಾದ ಸಾಹಿತ್ಯವಾಗಿರಬಹುದು. ಅದಂತೂ ಶುಚಿಯಾದ ಸಾಹಿತ್ಯದ ಲಕ್ಷಣವಲ್ಲ"–ಇದು ಶಿವರಾಮ ಕಾರಂತರ ಮಾತು ; ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಮೈಸೂರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನದಿಂದ ಅವರು ಆಡಿದ್ದು,–"ಸಾಹಿತ್ಯಪಥ"ದ ರೀತಿ ನೀತಿಗಳನ್ನು ಅರಿಯದೆ ಮುನ್ನುಗ್ಗುತ್ತಿರುವ ಉತ್ಸಾಹಿಗಳಿಗೆ ಕಾಣಲೆಂದು ಆ ಎತ್ತರದ ಸ್ಥಾನದಿಂದ ಕಾರಂತರೊಂದು ಕೆಂಪು ಬಾವುಟವನ್ನು ಎತ್ತಿ ಹಾರಿಸಿದರು. ಆದರೆ ಜನ ಮಾತ್ರ ಅದನ್ನು ಕಂಡೂ ಕಾಣದಂತೆ ನುಗ್ಗುತ್ತಲೇ ಇದ್ದಾರೆ ; ಅಪಘಾತಗಳು ಆಗುತ್ತಲೇ ಇವೆ ! ನಮ್ಮಲ್ಲಿ "ರುಚಿ ಶುಚಿ" ಗಳ ಪ್ರಜ್ಞೆ ಬೆಳೆಯಬೇಕಾದರೆ ಸಾಹಿತ್ಯ ಕ್ಷೇತ್ರದಲ್ಲಿ ಇನ್ನೆಷ್ಟು "ಸಾರಿಗೆ ಸಪ್ತಾಹ" ಗಳನ್ನು ಆಚರಿಸಬೇಕೋ ? ಸಾಹಿತ್ಯದಲ್ಲಿ ಶುಚಿಯೆಂದಾಗ "ಇಸ್ಸೀ !" ಎಂದು ಕಿವಿ ಮುಚ್ಚಿ, "ರುಚಿ" ಯೆಂದಾಕ್ಷಣ ಬಾಯಿ ಚಪ್ಪರಿಸುವವರು ಇರುವಷ್ಟು ದಿನ ನಮ್ಮ ಸಾಹಿತ್ಯವು ತುರಾಂಚಿ ಗಿಡಗಳಂತೆ ಹುಲುಸಾಗಿ ಬೆಳೆಯಬಲ್ಲುದೇ ವಿನಾ, ಪೂಜಿಸಿದರೆ ಪುಣ್ಯಪ್ರದವೂ, ಸೇವಿಸಿದರೆ ಆರೋಗ್ಯ ವರ್ಧಕವೂ, ಆಗಿರುವ ತುಲಸೀ ಗಿಡದಂತಲ್ಲ.

ಸಾಹಿತ್ಯವು ತುಲಸೀ ದಳದಂತೆ, ಗಂಗಾ ಜಲದಂತೆ "ಬಾಹ್ಯಾಭ್ಯಂತರ ಶುಚಿ"ಗೆ ಕಾರಣವೆಂದು ತಿಳಿದು ನಡೆದವರಲ್ಲಿ ದಿ| ಎಂ. ಆರ್. ಶ್ರೀನಿವಾಸ ಮೂರ್ತಿಯೊಬ್ಬರು. ಎಂ. ಆರ್. ಶ್ರೀ ಎಂಬುದು ಅವರ ಸಂಕ್ಷಿಪ್ತನಾಮ. ಬಿ. ಎಂ. ಶ್ರೀ, ತೀ. ನಂ. ಶ್ರೀಯವರಂತೆ ಎಂ. ಆರ್. ಶ್ರೀಯವರೂ ಕನ್ನಡ ಸಾಹಿತ್ಯವು ಸಮೃದ್ಧವಷ್ಟೇ ಅಲ್ಲ ಸತ್ವ ಸಂಪನ್ನವೂ ಆಗುವಂತೆ ದುಡಿದವರು. "ಭಕ್ತಿ ಭಂಡಾರಿ ಬಸವಣ್ಣನವರು", "ವಚನ ಧರ್ಮಸಾರ" ಗಳ ಮೇಲೆ ಅವರ ಹೆಸರು ದೊಡ್ಡದಾಗಿ ನಿಂತಿವೆ. ಅವರ "ಧರ್ಮದುರಂತ", "ನಾಗರಿಕ" ನಾಟಕಗಳ ಯೋಗ್ಯತೆಯೂ ಕಡಮೆಯದ್ದೇನಲ್ಲ. ಎಂ. ಆರ್. ಶ್ರೀಯವರು ಮೂರು ಕಾದಂಬರಿಗಳ ರಚಕರೂ ಹೌದು. "ಸಾವಿತ್ರಿ", "ರಂಗಣ್ಣನ ಕನಸಿನ ದಿನಗಳು" ಮತ್ತು "ಮಹಾತ್ಯಾಗ" ಎಂಬವೇ ಆ ಮೂರು. ("ಮಹಾತಾಗ್ಯ"ವು ಚಲಚ್ಚಿತ್ರವಾಗಲಿದೆಯೆಂಬ ಸುದ್ದಿ ಪ್ರಕಟವಾಗಿದೆ. ಅದು ಚಿತ್ರವಾಗುತ್ತದೋ ಚಿತ್ರಹಿಂಸೆಯಾಗುತ್ತದೋ ಎಂಬುದನ್ನು ಕಾದು ನೋಡಬೇಕಾಗಿದೆ.)* ಅವುಗಳಲ್ಲಿ "ರಂಗಣ್ಣನ ಕನಸಿನ ದಿನಗಳು" ಪ್ರಸ್ತುತ ವಿಷಯ.

ಎಂ. ಆರ್. ಶ್ರೀಯವರ ಕೊನೆಯ ಕಾದಂಬರಿ (ಅದು ಅವರ ಕೊನೆಯ ಸಾಹಿತ್ಯ ಸೇವೆಯೂ ಹೌದು). "ಮಹಾತ್ಯಾಗ" ಕ್ಕೆ "ಸ್ನೇಹದ ಮಾತು"–ಮುನ್ನುಡಿ–ಬರೆಯುತ್ತಾ ಡಿ. ವಿ. ಗುಂಡಪ್ಪನವರು ದಿವಂಗತರ ಸಾಹಿತ್ಯಲಕ್ಷಣ–ವ್ಯಕ್ತಿ ಲಕ್ಷಣಗಳನ್ನು ಹೀಗೆ ವರ್ಣಿಸಿದ್ದಾರೆ : "ಈ ಪುಸ್ತಕವನ್ನೋದುವವರಲ್ಲಿ ಯಾರು ಮೂರ್ತಿಯ ಸ್ವಭಾವವನ್ನರಿತವರೋ ಅವರಿಗೆ–ಮೂರ್ತಿಯ ಮಿಕ್ಕ ಲೇಖನಗಳಂತೆಯೇ–ಇದು ಆತನ ನೈಜ

* ಈ ಲೇಖನ ಕಾಲಕ್ಕೆ 'ಮಹಾತ್ಯಾಗ' ಸಿನಿಮಾ ಆಗಿರಲಿಲ್ಲ.

ಲಕ್ಷಣಗಳಿಂದ ತುಂಬಿದ್ದೆಂದು ತಾನಾಗಿ ತೋರಿಬಂದೀತು. ಮೂರ್ತಿ ಎಲ್ಲ ವಿಷಯಗಳಲ್ಲೂ ಚೊಕ್ಕಟವಾದ ವ್ಯಕ್ತಿ. ದೇಹ ನಿರ್ಮಲವಾದ ಕಾಂತಿಯುಳ್ಳದ್ದು ; ಮುಖ ಪ್ರಸನ್ನವಾದದ್ದು ; ಮನಸ್ಸು ಉದಾರವಾದದ್ದು ಮತ್ತು ಉನ್ನತ ದೃಷ್ಟಿಯುಳ್ಳದ್ದು ; ಮಾತು ಸರಸವಾದದ್ದು.....ಈ ಎಲ್ಲ ಲಕ್ಷಣಗಳೂ ಅವರ ಈ ಕಥೆಯಲ್ಲಿ ಕಾಣಬರುತ್ತವೆ. ಜನವನ್ನು ಮೆಚ್ಚಿಸಲಿಕ್ಕಾಗಿ ಶೃಂಗಾರದ ಹಸಿ ಹಸಿಯನ್ನಾಗಲೀ ಸಮಾಜ ಪರಿಸ್ಕರಣಾಪುರದ ಬಿಸಿ ಬಿಸಿಯನ್ನಾಗಲಿ ಕಥೆಯಲ್ಲಿ ತುಂಬಬೇಕೆಂದು ಅವರಿಗೆ ಮನಸ್ಸಾಗಿದ್ದಿದ್ದರೆ ಅಂಥ ರಸಾಭಾಸಗಳನ್ನು ತುಂಬಲು ಸಂದರ್ಭ ಕಲ್ಪಿಸಿಕೊಳ್ಳುವುದು ಅವರಿಗೇನೂ ಕಷ್ಟದ ಕೆಲಸವಾಗಿರಲಿಲ್ಲ. ಅಂಥ ಮನಸ್ಸು ಅವರದ್ದಲ್ಲ. ಅವರಿಗೆ ಬೇಕಾದಷ್ಟು ಶುಚಿಯಾದ ಸೊಗಸು, ಚಿತ್ತೋತ್ಕರ್ಷಕವಾದ ಸೊಗಸು, ಅಂಥ ಸೊಗಸು ಈ ಕಥೆಯಲ್ಲಿ ಕಾಣಬರುತ್ತದೆ "–ಇಲ್ಲಿ ಬರುವ " ಈ ಪುಸ್ತಕ " " ಈ ಕಥೆ " ಎಂಬುದು " ಮಹಾತ್ಯಾಗ " ಕ್ಕೆ ಹೇಗೆ ಅನ್ವಯವೋ ಹಾಗೆಯೇ ಅಷ್ಟೇ ಚೆನ್ನಾಗಿ " ರಂಗಣ್ಣನ ಕನಸಿನ ದಿನಗಳಿ " ಗೂ ಒಪ್ಪಬಲ್ಲುದು. ಏಕೆಂದರೆ ಇವೆರಡನ್ನೂ ಬರೆದವರು ಒಂದೇ ಮನೋಧರ್ಮದ ಒಂದೇ ವ್ಯಕ್ತಿಯಲ್ಲವೇ ?

" ರಂಗಣ್ಣನ ಕನಸಿನ ದಿನಗಳ " ಲ್ಲಿ ಕಥೆಯಿದ್ದರೂ ಅದನ್ನು ಕಾದಂಬರಿ ಎನ್ನುವಂತಿಲ್ಲ. ಲೇಖಕನ ವಿವಿಧ ಅನುಭವಗಳ ಒಂದು ಸರಮಾಲೆಯದು. ಈ ಅನುಭವಗಳಾದರೂ ಶಿಕ್ಷಣಕ್ಷೇತ್ರಕ್ಕೆ ಸಂಬಂಧಿಸಿದ್ದು ಅಥವಾ ಅದು ಕೇಂದ್ರವಾಗಿ ಉಳ್ಳದ್ದು. ಎಂ. ಆರ್. ಶ್ರೀಯವರು ಪಂಜೆ ಮಂಗೇಶರಾಯರಂತಹ ವ್ಯಕ್ತಿ–ಸಾಹಿತಿ. ಶಾಲಾ ಅಧ್ಯಾಪಕನಾಗಿ, ವಿಧ್ಯಾಧಿಕಾರಿಯಾಗಿ ಆಯಾ ವೃತ್ತಿರಂಗಗಳ ನಿಕಟ ಪರಿಚಯ ಇದ್ದವರು. ಪಂಜೆ ಮಂಗೇಶರಾಯರ " ಹಳೆಯ ಸಬ್ ಅಸಿಸ್ಟಾಂಟಿನ ಸುಳ್ಳು ಡೈರಿ " ಯು ಹೇಗೆ ಅವರ ಅನುಭವಸಂಚಯವೋ ಹಾಗೆಯೇ " ರಂಗಣ್ಣನ ಕನಸುಗಳು " ಎಂ. ಆರ್ ಶ್ರೀಯವರ ಅನುಭವ ಕಥನ. " ಸುಳ್ಳು ಡೈರಿ " ಎಂಬುದಾಗಲೀ " ಕನಸಿನ ದಿನಗಳು " ಎಂಬುದಾಗಲೀ ವಾಚಕರ ಕುತೂಹಲವನ್ನು ಹೆಚ್ಚಿಸಿ, ಕಥನ ಸ್ವಾರಸ್ಯವನ್ನು ಇಮ್ಮಡಿಸುವ ವಿಶೇಷಣಗಳು. ನಿಜವಾಗಿಯೂ ಅವುಗಳಲ್ಲಿರುವುದು " ಸುಳ್ಳೂ " ಅಲ್ಲ " ಕನಸುಗಾರಿಕೆ " ಯೂ ಅಲ್ಲ–ಅನುಭವ ಸತ್ಯ, ವಸ್ತುಸ್ಥಿತಿ ವರ್ಣನೆ.

" ಕನಸಿನ ದಿನಗಳಲ್ಲಿ " ರಂಗಣ್ಣ ಪ್ರಧಾನ ವ್ಯಕ್ತಿ, ಅಥವಾ ಕಥಾನಾಯಕ. ಅವನು ಜನಾರ್ದನಪುರಕ್ಕೆ ವಿದ್ಯಾಧಿಕಾರಿ (ಇನ್ಸ್‌ಪೆಕ್ಟರ್) ಆಗಿ ಬರುವಲ್ಲಿಂದ ಕಥೆ ಆರಂಭ. ಅಲ್ಲಿಂದ ವರ್ಗವಾಗಿ ಪದೋನ್ನತಿಯಾಗಿ ಬೆಂಗಳೂರಿಗೆ ತೆರಳುವುದರಲ್ಲಿ ಕಥೆಯು ಮುಗಿತಾಯ. ಈ ಮಧ್ಯಾವಧಿಯಲ್ಲಿ ರಂಗಣ್ಣನಿಂದ ಜನಾರ್ದನಪುರ ಮತ್ತು ಸುತ್ತಮುತ್ತಲಿನ ಶಾಲೆಗಳ ಪರೀಕ್ಷಣ, ಅದಕ್ಕೆ ಸಂಬಂಧಿಸಿದಂತೆ ಅವನಿಗೆ ವಿವಿಧ ಅಧ್ಯಾಪಕರ, ಸಾರ್ವಜನಿಕರ ನಿಕಟ ಸಂಪರ್ಕ; ಉತ್ಸಾಹಾಧಿಕ್ಯದಿಂದ ಒಮ್ಮೊಮ್ಮೆ ದುಡುಕಿದರೂ, ಕೆಲವರ ದ್ವೇಷ ಸಂಪಾದನೆಯಾದರೂ ಕ್ರಿಯಾಶೀಲತೆ, ತತ್ವನಿಷ್ಠೆ, ಶಾಲೆ ಮತ್ತು ಸಮಾಜದ ಅಭಿವೃದ್ಧಿಯಲ್ಲಿ ಅವನಿಗಿದ್ದ ನೈಜ ಆಸಕ್ತಿ ಮತ್ತು ಅದಕ್ಕಾಗಿ ಅವನ ಪ್ರಾಮಾಣಿಕ ಶ್ರಮ

ಇವುಗಳಿಂದ ರಂಗಣ್ಣನು ಬಹುಜನಪ್ರಿಯನೂ ಬಹುಮಾನ್ಯನೂ ಆಗುವುದು ಇಲ್ಲಿ ಚಿತ್ರಿತವಾಗಿದೆ. "ಹೊಸ ಸಾಹೇಬ್ರು ಹೇಗೋ, ಏನೋ" ಎಂದು ಮೊದಲು ಭಯ ಕಾತರರಾದ ಹಳ್ಳಿಯ ಅಧ್ಯಾಪಕರಿಂದಲೇ, "ತಮ್ಮಂಥ ಧಣಿಗಳು ನಮಗೆ ಮುಂದೆ ಬರೋದಿಲ್ಲ ಸಾರ್" ಎಂದು ಕಂಠಪೂರ್ತಿಯಾಗಿ ಹೇಳಿಸಿಕೊಂಡು, ಕಣ್ಣೀರಿನ ಸೇವೆಯನ್ನು ತಳಿಸಿಕೊಂಡು ರೈಲುಹತ್ತಿ ಬೆಂಗಳೂರಿಗೆ ಹೊರಡುವ ಒಬ್ಬ ಅಧಿಕಾರಿಯನ್ನು-ರಂಗಣ್ಣನನ್ನು ಇಲ್ಲಿ ಕಾಣುತ್ತೇವೆ.

ರಂಗಣ್ಣನ ಸುಖ ಸಂತೋಷಗಳಲ್ಲೂ, ದುಗುಡ ದುಮ್ಮಾನಗಳಲ್ಲೂ ಪಾಲುಗೊಂಡು, "ಮಿತ್ರ ಸಂಮಿತ" ನಾಗಿ ಹಿತವಾದ ಮಾಡಿ ನೆರವಾಗುವವನು ತಿಮ್ಮರಾಯಪ್ಪ–ಇನ್ನೂರು ಪೌಂಡು ತೂಕದ ದಢೂತಿ ಆಳು ; ಅಷ್ಟೇ ದೊಡ್ಡದು ಅವನ ಮನಸ್ಸು ; ಅಷ್ಟೇ ತೂಕವಾದದ್ದು ಅವನ ಆಲೋಚನೆ. ಗಂಡನ ಅಧಿಕಾರಜೀವನದಲ್ಲಿ ಅವನಿಗೆ ಲಾಭವೋ, ಉನ್ನತಿಯೋ ಆದರೆ ಅದೆಲ್ಲ ತನ್ನ ಪಾತಿವ್ರತ್ಯದ ಮಹಿಮೆ, ಗಂಡನು ಏನಾದರೂ ಒಳ್ಳೆಯದನ್ನು ಮಾಡಿದರೆ ಅದಕ್ಕೆ ಹೆಣ್ಣಿನ ಉಪದೇಶವೇ ಕಾರಣ–ಎನ್ನುವವಳು ರಂಗಣ್ಣನ ಮಡದಿ ; ಸಹಜವಾಗಿ ಸ್ತ್ರೀ ಪಕ್ಷಪಾತಿ; "ಕಾಂತಾಸಮ್ಮಿತ" ವಾಗಿ ಗಂಡನನ್ನು ಒಲಿಸಿ, ನಲಿಸಬಲ್ಲ ಚತುರೆ.

ಈ ಗ್ರಂಥದಲ್ಲಿ ನಾವು ಮುಖ್ಯವಾಗಿ ಕಾಣಬಹುದಾದದ್ದು ಶಾಲೆಗಳ ಅದರಲ್ಲೂ ಹಳ್ಳಿ ಶಾಲೆಗಳ ವಾತಾವರಣ. ಅಧ್ಯಾಪಕರ ಸರಳ ಜೀವನ, ಸ್ನೇಹಪರತೆ ಒಂದು ಮುಖವಾದರೆ ಪರಸ್ಪರ ಮಾತ್ಸರ್ಯ, ಅಂತಃಕಲಹ ಇನ್ನೊಂದು ಮುಖ. ಸ್ವಾರ್ಥ ಸಾಧಕರಾದ "ಪ್ರತಿಷ್ಠಿತ" ವ್ಯಕ್ತಿಗಳ ಆಕ್ರಮ ಪ್ರವೇಶ ಮತ್ತೊಂದು ಮುಖ. ಮನೆತನದಲ್ಲಿ ಅಗಸನಾಗಿ, ವೃತ್ತಿಯಲ್ಲಿ ಅಧ್ಯಾಪಕನಾಗಿ ಮಡಿಮಾಡಲು ತಂದ ಬಟ್ಟೆಗಳನ್ನೇ ತೊಟ್ಟುಕೊಂಡು, ರಂಗಣ್ಣನನ್ನು ಮರುಳು ಮಾಡುವ ಮೇಷ್ಟ್ರು ರಂಗಪ್ಪ– "ಅಗಸಾ ತೊಳೆದಂತೆ ಸೆದಿಹುದು" ಎಂದು ಪದ್ಯವನ್ನು ತಿದ್ದಿ ಹೇಳುವ ಅವನ ಪಾಠವೈಖರಿ ; ತಲೆಗೆ ಸುತ್ತುವ ರುಮಾಲನ್ನೇ ಬೋರ್ಡ್ ಒರಸುವುದಕ್ಕೂ ಉಪಯೋಗಿಸುವ ಮೇಷ್ಟ್ರು ಕೆಂಚಪ್ಪನ ಶೋಚನೀಯಸ್ಥಿತಿ ; ಶಾಲೆಯ ಪಕ್ಕದಲ್ಲೆ ಕ್ಷೌರದಂಗಡಿಯನ್ನು ಇರಿಸಿಕೊಂಡು ಹೊಟ್ಟೆ ಹೊರೆಯುತ್ತ ಇನ್ಸೆಪೆಕ್ಟರ್ ರಂಗಣ್ಣನಿಗೂ ಮುಖಕ್ಷೌರ ಮಾಡುವ ಮೇಷ್ಟ್ರು ಮುನಿಸ್ವಾಮಿ, ತಾಯನ್ನು ಕಳಕೊಂಡ ತನ್ನ ಹಸುಮಕ್ಕಳನ್ನು ಮನೆಯಲ್ಲಿ ಬಿಡಲಾಗದೆ ಶಾಲೆಗೆ ಕರೆದುಕೊಂಡು ಬರುವ ತಿಪ್ಪೇನ ಹಳ್ಳಿಯ ಮೇಷ್ಟ್ರ ಕರುಣ ಕಥೆ ; ಮಾತು ಒರಟಾಗಿದ್ದರೂ ಹೃದಯ ಮೃದುವಾಗಿರುವ, ಎಳನೀರಿನಂತಹ ವ್ಯಕ್ತಿ ವೆಂಕಟಸುಬ್ಬಯ್ಯ–ಇಂತಹ ವಿವಿಧ ರೀತಿನೀತಿಗಳ ಅಧ್ಯಾಪಕರನ್ನು,ಅವರ ಸಹಜ ಸುಂದರ ಚಿತ್ರಗಳನ್ನು ಈ ಗ್ರಂಥದ ಉದ್ದಕ್ಕೂ ಕಾಣಬಹುದು. ಯಾರಿಗೂ ಸಗ್ಗದೆ, ಬಗ್ಗದೆ ತುಂಡರಸನಂತೆ ಹಾರಾಡುವ, ಹೆಸರಿಗೆ ತಕ್ಕಂತಹ "ಉಗ್ರಪ್ಪ" ಮೇಷ್ಟ್ರರನ್ನೂ ಇಲ್ಲಿ ಕಾಣಬಹುದು. ಇಂತಹ "ದುರ್ಯೋಧನ" ರನ್ನು, ಹಿಂದೆ ನಿಂತು ಎತ್ತಿ ಕಟ್ಟುವ ದುಶ್ಶಾಸನ, ಜಯದ್ರಥ, ಶಕುನಿಗಳಂತಹ ಚೆನ್ನಪ್ಪ, ಕರಿಯಪ್ಪ, ಕಲ್ಲೇಗೌಡರದ್ದು ಒಂದು ಗುಂಪಾದರೆ, ಕುಚೇಲ, ವಿದುರ, ಧರ್ಮ

ರಾಯರಂತಹ ಕರಿಹೈದ, ಬೋರೇಗೌಡ, ಸಿದ್ದಪ್ಪ, ಗಂಗೇಗೌಡರದ್ದು ಇನ್ನೊಂದು ಗುಂಪು.

ಹಳ್ಳಿಯೂರುಗಳಲ್ಲಿ ಹಳ್ಳಿಯದೇ "ಪಾಲಿಟಿಕ್ಸ್." ಇದಕ್ಕೆ ಉದಾಹರಣೆ ಯೆಂಬಂತೆ ಗರುಡನಹಳ್ಳಿ–ಹನುಮನಹಳ್ಳಿಯವರ ಜಗಳ. ಜಗಳಕ್ಕೆ ಕಾರಣ ಹಳ್ಳಿ ಶಾಲೆ ಎಲ್ಲಿರಬೇಕೆಂಬುದು. 'ಗಂಡ ಹೆಂಡಿರ ಜಗಳದಲ್ಲಿ ಕೂಸು ಬಡವಾಯಿತು' ಎಂಬಂತೆ ಇಂತಹ ಗುಂಪುಗಾರಿಕೆ, ಒಳಜಗಳಗಳಿಂದ ಶಾಲೆಗಳದ್ದಷ್ಟೇ ಅಲ್ಲ ಊರುಗಳ ಸ್ಥಿತಿಯೂ ಹೀನವಾಗುತ್ತದೆ ಎಂಬುದನ್ನು ಲೇಖಕರು ಈ ಗ್ರಂಥದಲ್ಲಿ ಮಾರ್ಮಿಕವಾಗಿ ವಿವೇಚಿಸಿದ್ದಾರೆ. ಕೈಯ ಐದೂ ಬೆರಳುಗಳು ದೂರ ದೂರ ನಿಲ್ಲಬಾರದು, ಒಟ್ಟುಸೇರಿ ಒಂದು ಮುಷ್ಟಿಯಾಗಬೇಕೆಂದು ಸಾರಿದ್ದಾರೆ,

"ಕನಸಿನ ದಿನಗಳ" ಲ್ಲಿ ಲೇಖಕರು ಹಾಸ್ಯದ ಕಿಡಿಗಳನ್ನು ಧಾರಾಳವಾಗಿ ಸಿಡಿಸಿದ್ದಾರೆ: ರಂಗಣ್ಣ—ತಿಮ್ಮರಾಯಪ್ಪರ ಸಂಭಾಷಣೆಯಲ್ಲಿ, ಶಾಲಾ ಮೇಷ್ಟ್ರುಗಳ ಸ್ವಭಾವ ವರ್ಣನೆಯಲ್ಲಿ, ಅವರ ಪಾಠಕ್ರಮದಲ್ಲಿ ಎಂ. ಆರ್. ಶ್ರೀಯವರು ಹಾಸ್ಯವನ್ನು ಕಂಡಿದ್ದಾರೆ; ಓದುಗರಿಗೂ ಕಾಣಿಸಿ ಅವರನ್ನು ನಗಿಸುತ್ತಾರೆ. "ಶಾಲೆ ಎಲ್ಲಿದೆ" ಎಂದು ಕೇಳಿದರೆ ಅರ್ಥವಾಗದ ಹಳ್ಳಿಜನ "ಸ್ಕೂಲೆ" ಎಂದಾಗ "ಓಹೋ! ಇಸ್ಕೋಲಾ? ಹೈಕ್ಳ ಮನೆ"—ಎಂದು ವ್ಯಾಖ್ಯಾನ ಮಾಡುವುದಾಗಲೀ, "ನಮ್ಮಳ್ಳಿಗೊಂದು 'ಇನ್‌ಫೆಂಟ್ರಿ' ಸ್ಕೋಲ್ ಕೊಡಬೇಕು ಮಾಸ್ವಾಮಿ"—ಎಂದು ಮನವಿಯೊಪ್ಪಿಸುವುದಾಗಲೀ ("ಇನ್ ಫೆಂಟ್ರಿ" ಎಂಬುದು ಹಳ್ಳಿ ಬಾಯಲ್ಲಿ "ಇನ್‌ಫೆಂಟ್" ಎಂಬುದರ ಅಪಭ್ರಂಶ!) ಪಕ್ಕೆ ಬಿರಿಯುವಷ್ಟು ನಗು ತರಿಸುತ್ತವೆ. ಕಥೆಯ ಕೊನೆಯಲ್ಲಿ ತಿಮ್ಮರಾಯಪ್ಪ ರಂಗಣ್ಣನನ್ನು ಬಾಚಿ ತಬ್ಬಿಕೊಳ್ಳುವಾಗ, "ದೇವರೇ! ನಾನು ನೂರತೊಂಬತ್ತು ಪೌಂಡು ತೂಕ ಇಲ್ಲ! ನಾನು ಅಪ್ಪಚ್ಚಿಯಾಗಿ ಹೊಗ್ತೀನೆ?" ಎನ್ನುವನು. ತಿಮ್ಮರಾಯಪ್ಪ ಇನ್ನೂರು ಪೌಂಡು, ಅವನ ಹೆಂಡತಿ ನೂರತೊಂಬತ್ತು ಪೌಂಡು, ಎಂಬುದರ ಸೂಚನೆ ಗ್ರಂಥಾರಂಭದಲ್ಲಿ ಬಂದಿದೆ. ಆ ಮಾತನ್ನೇ ರಂಗಣ್ಣ ಇಲ್ಲಿ ಹೀಗೆ ನೆನಪಿಗೆ ತರುವುದು ಹಾಸ್ಯಗರ್ಭಿತವಾಗಿದೆ—"ನನ್ನನ್ನಲ್ಲ ನಿನ್ನ ಹೆಂಡತಿಯನ್ನು ತಬ್ಬಿಕೋ" ಎಂಬುದು ಇಲ್ಲಿ ಸೂಚಿತವಾಗಿದೆ. ಇಂತಹ ಸನ್ನಿವೇಶಗಳು ಇನ್ನೆಷ್ಟೋ ಇವೆ.

ಹಾಸ್ಯರಸವಷ್ಟೇ ಅಲ್ಲ, ಅನುಭವಾಮೃತದ ಸೀರ್ಪನಿಗಳೂ ಅಲ್ಲಲ್ಲಿ ಸಿಡಿಯುವುದನ್ನು ಕಾಣಬಹುದು. ಉದಾ: ರಂಗಣ್ಣನು, ರಂಗೇ ಗೌಡರೆಂಬ ಸಭ್ಯ ಗೃಹಸ್ಥನೊಂದಿಗೆ "ನೀವು ಸ್ವತಂತ್ರ ಭಾರತದ ಪ್ರಧಾನಿಗಳಾಗಬೇಕು" ಎಂಬ ಸನ್ನಿವೇಶವೊಂದಿದೆ. ಅದಕ್ಕುತ್ತರವಾಗಿ ಗೌಡರು, "ಅಯ್ಯೋ ಸ್ವಾಮಿ! ಅದೆಲ್ಲ ನನಗೇಕೆ? ನಾನು ಒಕ್ಕಲ ಮಗ! ದುಡಿಯೋ ರೈತ! ಮುಂದೆ ಪ್ರಜಾಧಿಕಾರ ಬಂದರೂ ಕಚ್ಚಾಟ ತಪ್ಪೋದಿಲ್ಲ ಸ್ವಾಮಿ! ದ್ರೌಪದಿಗೆ ಐದು ಜನ ಗಂಡಂದಿರಿದ್ದು ಒಬ್ಬೊಬ್ಬರು ಒಂದೊಂದು ವರ್ಷ ಸರದಿಯ ಮೇಲೆ ಗಂಡನಾಗಿರಬೇಕು ಎಂದು ನಿಗದಿ ಮಾಡಿದ್ದಾರಲ್ಲಾ! ಜ್ಞಾಪಕಕ್ಕೆ ಬರುತ್ತೆ ಸ್ವಾಮಿ! ಮುಂದೆ ಸರದಿಯ ಮೇಲೆ ದಿನಕ್ಕೊಬ್ಬೊಬ್ಬ ಗಂಡ ನಾನು ತಾನು ಎಂದು ನೂರಾರು

ಜನ ಕಚ್ಚಾಡುತ್ತಾರೆ" ಎನ್ನುವರು. ಗೌಡರ ಭವಿಷ್ಯವಾಣಿ ನಿಜವಾಗಿದೆ. ನಮ್ಮ ದೇಶದ ರಾಜಕೀಯ ಪಕ್ಷಗಳ ಒಳಜಗಳ, ಪಕ್ಷದಿಂದ ಪಕ್ಷಕ್ಕೆ ಜನರ ನೆಗೆದಾಟ, ಶಾಸನ ಸಭೆಗಳಲ್ಲಿ ಚುನಾಯಿತ ಪ್ರತಿನಿಧಿಗಳ ಗುದ್ದಾಟ ಅಲ್ಲಲ್ಲಿ ಸರಕಾರಗಳ ಉರುಳಾಟ ಮುಂತಾದವನ್ನೆಲ್ಲ ಕಾಣುವಾಗ ಗೌಡರ ಮಾತು ನೆನಪಿಗೆ ಬರಲೇಬೇಕು !

ಗ್ರಂಥದ ನಾಯಕ ರಂಗಣ್ಣನೆಂದರೆ ಸ್ವತಃ ಎಂ. ಆರ್. ಶ್ರೀನಿವಾಸಮೂರ್ತಿಯವರೇ ಎಂಬುದನ್ನು ಹೇಳಬೇಕಿಲ್ಲ. ವಿದ್ಯಾರಂಗದ ಒಳಹೊರಗುಗಳ ಸಮೀಪ ಪರಿಚಯವಿದ್ದುದರಿಂದಲೇ ಅವರಿಗೆ ಇಂತಹ ಸರಸ ಗ್ರಂಥನಿರ್ಮಾಣವು ಸಾಧ್ಯವಾಗಿದೆ. ಸುಮಾರು ಇಪ್ಪತ್ತು—ಮೂವತ್ತು ವರ್ಷಗಳ ಹಿಂದಿನ ನಮ್ಮ ಹಳ್ಳಿ ಶಾಲೆಗಳ ಸ್ಥಿತಿ—ಗತಿಗಳಿಗೆ (ಈಗಲೂ ಬಹಳಷ್ಟು ಸುಧಾರಣೆಯಾಗಿಲ್ಲ—ಏಕೋಪಾಧ್ಯಾಯ ಶಾಲೆಗಳು ತುಂಬಿ ತುಳುಕುವ ಕ್ಲಾಸ್ ರೂಮುಗಳು, ಮಾಡು ಗೋಡೆಯಿಲ್ಲದ ಕಟ್ಟಡಗಳು, ಸಂಬಳ ಸಾರಿಗೆ ಸಾಲದೆ ನರಳಾಡುವ ಶಿಕ್ಷಕರು, ವಿದ್ಯಾಸಂಸ್ಥೆಗಳಲ್ಲಿ ಅನವಶ್ಯಕ ಹಸ್ತಕ್ಷೇಪ ಮಾಡುವ ಊರ ಮುಖಂಡರು—ಎಲ್ಲವೂ ಎಲ್ಲರೂ ಹಿಂದಿನಂತೆಯೇ ಈಗಲೂ !) ಅವರು ಕನ್ನಡಿ ಹಿಡಿದಿದ್ದಾರೆ. ಅವರ "ಮುನ್ನುಡಿ"ಯಲ್ಲಿ "ಪಾಠಶಾಲೆಯೆಂಬ ಒಡಲಿಗೆ ಉಪಾಧ್ಯಾಯರೇ ಜೀವ" ಎಂಬ ಮಾತಿದೆ. ಆ ಮಾತಿನ ವಿವೇಚನೆ, ಸಮರ್ಥನೆ ಈ ಗ್ರಂಥದಲ್ಲಿದೆ. ಉಪಾಧ್ಯಾಯರ ಹಲವು ಸಮಸ್ಯೆಗಳನ್ನು ಲೇಖಕರು ಚರ್ಚಿಸಿದ್ದಾರೆ. ಅವುಗಳಿಗೆ ನಿವಾರಣೋಪಾಯಗಳನ್ನು ಸೂಚಿಸಿದ್ದಾರೆ. "ಶ್ರೇಯಾಂಸಿ ಬಹು ವಿಘ್ನಾನಿ" ಎಂಬುದನ್ನು ತಿಳಿದುಕೊಂಡಿದ್ದರೂ, "ಸತ್ಕಾರ್ಯಗಳಿಗೆ ಸೋಲಿಲ್ಲ" ಎಂಬ ಧೈರ್ಯದಿಂದ ವಿಘ್ನಗಳಿಗೆ ಸೊಪ್ಪು ಹಾಕದೆ ಮುನ್ನಡೆಯುವ ಧೀರ ರಂಗಣ್ಣ. ಶಾಲೆಗಳಿಗೂ, ಹಳ್ಳಿಗಳಿಗೂ ನಿಕಟ ಸಂಪರ್ಕವೇರ್ಪಡಿಸಿ, ಅಧ್ಯಾಪಕರು ಪರಸ್ಪರ ಸಹಕಾರ ಸಾಮರಸ್ಯಗಳಿಂದ ಬಾಳಬೇಕೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಹಳ್ಳಿ ಶಾಲೆಗಳ ನ್ಯೂನತಾತಿಶಯಗಳೇನು ಎಂಬುದನ್ನು ತನಗಿಂತ ವರಿಷ್ಠರ ಗಮನಕ್ಕೆ ತಂದು, ಅವರ ಅನುಕಂಪ—ಸಹಾಯಗಳನ್ನು ಸಂಪಾದಿಸಿದ್ದಾನೆ. ಇಂತಹ ಅಧಿಕಾರಿ ವರ್ಗದಿಂದಲೇ ಸಮಾಜದ ಸಮುನ್ನತಿ, ದೇಶದ ಸರ್ವತೋಮುಖ ಅಭಿವೃದ್ಧಿ.

ಗ್ರಂಥದಲ್ಲಿ ದೋಷಭಾಗಗಳು ಇಲ್ಲವೆಂದಲ್ಲ. ಅಲ್ಲಲ್ಲಿ ಬರುವ ದೀರ್ಘ ಭಾಷಣಗಳು ಈಗಿನವರಿಗೆ, ವಿದ್ಯಾ ಕ್ಷೇತ್ರದ ಹೊರಗಿರುವವರಿಗೆ ಬೇಸರ ತರಬಹುದು. 'ಅತಿ ಆದರ್ಶ' 'ಅವಾಸ್ತವಿಕ' ಎಂಬ ಟೀಕೆಗೆ ಒಳಗಾಗುವ ಮಾತು—ಕತೆ—ನೀತಿ—ನಡತೆಗಳೂ ಅಲ್ಲಲ್ಲಿ ಇರಬಹುದು. ಶುದ್ಧ ಪುಡಾರಿಯಾಗಿದ್ದ ಉಗ್ರಪ್ಪನು ಇದ್ದಕ್ಕಿದ್ದಂತೆ ಶಾಂತವೀರಸ್ವಾಮಿಯಾಗಿ ಪರಿವರ್ತನೆ ಹೊಂದುವುದು ಸ್ವಲ್ಪ ಕೃತಕ, ನಾಟಕೀಯವಾಗಿ ತೋರಬಹುದೇನೋ ? ಆದರೆ ಅವೆಲ್ಲ ಗೌಣ. ಗ್ರಂಥದ ಒಟ್ಟಿನ ಚೆಲುವಿನಲ್ಲಿ ಅವು ಕರಗಿ ಮರೆಯಾಗಿಬಿಡುತ್ತವೆ.

ಗ್ರಂಥದ ಭಾಷೆ ಸರಳ, ಶೈಲಿ ಸುಲಲಿತ. ಇಲ್ಲಿಯದು "ಹೃದ್ಯವಾದ ಗದ್ಯ"–ಎಂತಹವರೂ ಓದಿ ತಿಳಿಯುವಂತೆ ತಿಳಿಯಾದದ್ದು, ತಿಳಿದು ಮೆಚ್ಚಬಹುದಾದ್ದು. ಅಧ್ಯಾಪನದಲ್ಲಿ ಆಸಕ್ತರೂ ಶಿಕ್ಷಣ ಸಂಸ್ಥೆಗಳನ್ನು ನಿರ್ವಹಿಸುವವರೂ ಶಿಕ್ಷಣ ತಜ್ಞರೆನ್ನಿಸಿಕೊಂಡವರೂ ಅತ್ಯವಶ್ಯಕವಾಗಿ ಓದಬೇಕಾದ ಗ್ರಂಥವಿದು. ಅಂತಹವರ ಕಣ್ಣು ತೆರೆಯಿಸುವ, ಎಲ್ಲರ ತಲೆದೂಗಿಸುವ ಎಷ್ಟೋ ಸ್ವಾರಸ್ಯ ಸಂಗತಿಗಳು ಇದರಲ್ಲಿವೆ.

# ೧೩. ರಾಜರತ್ನಂರ 'ಗಂಡುಗೊಡಲಿ'

ರಾಜರತ್ನಂ ಎಂದೊಡನೆ 'ರತ್ನನ ಪದ'ಗಳನ್ನು ನಾಲಗೆ ಒಂದೊಂದಾಗಿ ಗುಣು ಗುಣಿಸುತ್ತದೆ. ಕನ್ನಡದಲ್ಲಿ ತೀರ ಜನಪ್ರಿಯವಾಗಿರುವ ಕವನ ಸಂಗ್ರಹಗಳಲ್ಲಿ 'ರತ್ನನ ಪದ'ಗಳು ಒಂದಾಗಿರುವುದೇ ಇದಕ್ಕೆ ಕಾರಣ. 'ರತ್ನನ ಪದ'ಗಳ ರತ್ನಪ್ರಭೆಯಲ್ಲಿ, ರಾಜರತ್ನಂ ತಮ್ಮ ಎದೆಗಡಲಿನಿಂದ ಹೆಕ್ಕಿ ತಂದ ಇನ್ನೆಷ್ಟೋ ಹರಳುಗಳು ಕನ್ನಡಿಗರ ಕಣ್ಮರೆಯಾಗಿ ಬಿಟ್ಟವೆ ಅಥವಾ ಕಾಂತಿಹೀನವಾಗಿ ತೋರಿವೆ—ಅಂತಹವುಗಳಲ್ಲಿ ಅವರ 'ಗಂಡುಗೊಡಲಿ' ಯೆಂಬ ರೂಪಕವೂ ಒಂದು. 1932ರಲ್ಲಿ ಮೊದಲಬಾರಿ ಪ್ರಕಟವಾಗಿ ಈ ವರೆಗೆ ಒಟ್ಟು ನಾಲ್ಕು ಸಲ ಪುನರ್ಮುದ್ರಿತವಾಗಿದ್ದರೂ, ವಾಚಕರಾಗಲೀ—ವಿಮರ್ಶಕರಾಗಲೀ ಅಷ್ಟಾಗಿ ಅದನ್ನು ಕೊಂಡಾಡಿದಂತಿಲ್ಲ. ಅದು ರಂಗದ ಮೇಲೆ ಮೆರೆದದ್ದೂ ಕಡಮೆಯೇ.

ನಮ್ಮವರು ಕಾವ್ಯ (ಅಥವಾ ಸಾಹಿತ್ಯ)ವನ್ನು 'ದೃಶ್ಯ'ವೆಂದೂ 'ಶ್ರವ್ಯ'ವೆಂದೂ ವಿಭಜಿಸಿ, 'ದೃಶ್ಯಕಾವ್ಯ'ವನ್ನು "ಚಾಕ್ಷುಷ ಯಜ್ಞ"ವೆಂದರು; "ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕ ಸಮಾರಾಧನಂ" ಎಂದು ವರ್ಣಿಸಿದರು. ಕಣ್ಣು-ಕಿವಿ-ಮನಸ್ಸುಗಳೆಲ್ಲವನ್ನೂ ತುಂಬಿ ನಿಲ್ಲಬಲ್ಲ ಕಲೆಯೆಂದರೆ 'ರೂಪಕ' (ನಾಟಕ).-ರಾಜರತ್ನಂರ 'ಗಂಡುಗೊಡಲಿ' ಆರು ದೃಶ್ಯಗಳ ಒಂದು ಪುಟ್ಟ ಏಕಾಂಕ ರೂಪಕ. ಕೂದಲನ್ನೂ ಸೀಳಿ ನೋಡಬಲ್ಲ ವಿಮರ್ಶಕ ವಿದಗ್ಧರಿಗಾಗಲಿ, 'ಅಬದ್ಧ'-'ಸುಬದ್ಧ'ಗಳೆಂದು ವಾದದಲ್ಲೇ ರಸಾಸ್ವಾದ ಮಾಡುವ ತಂತ್ರಜ್ಞರಿಗಾಗಲಿ 'ಗಂಡುಗೊಡಲಿ'ಯಲ್ಲಿ ಅನೇಕ ದೋಷಗಳು ಕಾಣಬಹುದು. 'ಹಸುವಿನ ಜಾತಿಗಿಂತ ಹಾಲಿನ ಗುಣ ಮುಖ್ಯ'ವೆಂಬ ಸರಳವಾದ ತತ್ತ್ವವನ್ನು ಕಣ್ಣು ಮುಂದಿರಿಸಿಕೊಂಡರೆ 'ಗಂಡುಗೊಡಲಿ'ಯೊಂದು 'ಸಮಾರಾಧನ'ವೇ ಸರಿ!

'ಗಂಡುಗೊಡಲಿ' ಹೆಸರೇ ಸೂಚಿಸುವಂತೆ ಜಮದಗ್ನಿ ಪುತ್ರ ಕೊಡಲಿರಾಮನ ವೀರ ಕಥೆ. ತಂದೆಯ ಮಾತಿನಂತೆ ತಾಯಿಯ ಕೊರಳನ್ನು ತರಿದ ಪಿತೃಭಕ್ತ; ತಂದೆಯ ಸಾವಿಗೆ ಕಾರಣನಾದ ಕಾರ್ತವೀರ್ಯನ ಸಹಸ್ರ ಬಾಹುಗಳನ್ನು ಕತ್ತರಿಸಿದ ಶೂರ; ಕಾರ್ತವೀರ್ಯ ಕ್ಷತ್ರಿಯನೆಂಬುದರಿಂದ ಇಪ್ಪತ್ತೊಂದು ಬಾರಿ ಕ್ಷತ್ರಿಯ ವಂಶವನ್ನೆಲ್ಲ ಹುಡುಕಿ-ತುಡುಕಿ ಕೊಂದ ಛಲಗಾರ; ಕೊನೆಯಲ್ಲಿ ದಶರಥ ರಾಮನಿಂದ ಭಂಗಿತನಾಗಿ, ಶಸ್ತ್ರತ್ಯಾಗ ಮಾಡಿ ಮಹೇಂದ್ರಾಚಲಕ್ಕೆ ತಪಸ್ಸಿಗೆ ತೆರಳಿದ ಸಾಧಕ-ಪರಶುರಾಮ. ಆತ ಪುರಾಣಪ್ರಸಿದ್ಧ ಮಹದ್ವ್ಯಕ್ತಿ. ನಾವು ನಂಬಿ ನಡೆಯುತ್ತಿರುವ ಭಗವಂತನ ಅವತಾರಗಳಲ್ಲಿ ಆರನೆಯವನು. 'ಕತೆ ಪರಿದಾದೊಡಂ ಕತೆಯ ಮೆಯ್ಗೆಡಲೀಯದ' ಪಂಪನಂತೆ ಪುರಾಣಕ್ಕೆ ಅಪಚಾರವಾಗದಂತೆ, ತಮ್ಮ ಉದ್ದೇಶಕ್ಕೆ ಭಂಗ ಬಾರದಂತೆ ಈ ಕಿರುನಾಟಕವನ್ನು ರಾಜರತ್ನಂ ರಚಿಸಿದ್ದಾರೆ. ಹೊಸ ಆವರಣದಲ್ಲಿ ಹಳೆ ಕತೆಯ ಅವತರಣವಾಗಿದೆ. ರಾಮಕೊಡಲಿಯ ಮಸೆದನು, ಪಿತೃವಾಕ್ಯ ಪರಿಪಾಲಕ, ಭೀಷ್ಮ ಭಾರ್ಗವ, ರೇಣುಕೆಯ

ರಕ್ಷೆ, ಪರಶುರಾಮ ಪ್ರತಿಜ್ಞೆ, ಅಸ್ತಮಯವಾಯ್ತು-ಎಂಬುದು ರೂಪಕದ ಆರು ದೃಶ್ಯಗಳು. ಮೇಲುನೋಟಕ್ಕೆ ಪುರಾಣ ಕತೆಯನ್ನೇ ರಾಜರತ್ನಂ ಅನುಸರಿಸಿದಂತೆ ಕಂಡರೂ ' ಒಳಹೊಕ್ಕು ನೋಡಿ 'ದರೆ ಬೇರೆಯೇ ಒಂದು ಅರ್ಥಪ್ರಪಂಚವು ಸುರುಳಿ ಬಿಚ್ಚುತ್ತದೆ.

ಈ ರೂಪಕದಲ್ಲಿ ಹಳೆಯ ಕತೆಯನ್ನು ಹೊಸತಾಗಿ ಹೇಳುವುದೊಂದೇ ಲೇಖಕರ ಉದ್ದೇಶವಲ್ಲ. ಅದೇನೆಂಬುದು ಗ್ರಂಥದಿಂದಲೇ ಸ್ಪಷ್ಟವಾಗುತ್ತದಾದರೂ, ರಾಜರತ್ನಂರ (ಆತ್ಮಕಥೆ) ' ಹತ್ತು ವರುಷ 'ವನ್ನು ಓದಿದ ಅನಂತರ ಆ ಉದ್ದೇಶ ಸ್ಪಷ್ಟತರವಾಗುತ್ತದೆ. ' ಗಂಡುಗೊಡಲಿ 'ಯ ಹುಟ್ಟಿನ ಹಿನ್ನೆಲೆ ' ಹತ್ತು ವರುಷ 'ದಲ್ಲಿದೆ :–1930–31ರ ಸಾಲು–ಸ್ವಾತಂತ್ರ್ಯಾಂದೋಲನವು ಭರತ ವರ್ಷದಲ್ಲಿ ಸರ್ವವ್ಯಾಪಿಯಾಗಿದ್ದ ಕಾಲವದು. ಅಂತಹ ಕಾಲದಲ್ಲಿ ನಿಜಾಮರ ಹೈದರಾಬಾದಿನಲ್ಲಿ ರಾಜರತ್ನಂರಿಗೆ ಅದೊಂದು ಕಹಿ ಅನುಭವವೂ, ಬೆಂಗಳೂರಿನಲ್ಲಿ ಒಂದು ಬೆಳಗ್ಗೆ ಪಂಡಿತ ನೆಹರೂರ ವೀರವಾಣಿಯನ್ನು ಅವರು ಕೇಳಿ ಪುಳಕಿತರಾದದ್ದೂ ಈ ' ರೂಪಕ 'ಕ್ಕೆ ಬೀಜ. ಭರತಖಂಡವನ್ನು ತನ್ನ ದಬ್ಬಾಳಿಕೆಯ ಮುಷ್ಟಿಯಲ್ಲಿ ಬಿಗಿದಿದ್ದ ಆಂಗ್ಲ ಪ್ರಭುತ್ವವೇ ಕಾರ್ತವೀರ್ಯ ; ಅವನ ರುಂಡವನ್ನು ತುಂಡರಿಸಿದ ಪರಶುರಾಮನೇ ಭಾರತೀಯ ಕ್ರಾಂತಿವೀರ ಎಂದು ನಾವಿಲ್ಲಿ ಅನ್ವಯಿಸಿಕೊಳ್ಳಬಹುದು. ನಾಟಕದುದ್ದಕ್ಕೂ ಬರುವ ' ದಬ್ಬಾಳಿಕೆ '– ' ಕ್ರಾಂತಿ 'ಗಳೆಂಬ ಪದಗಳಿಂದ ಈ ಅಭಿಪ್ರಾಯಕ್ಕೆ ಇನ್ನಷ್ಟು ಬಲ ಬರುತ್ತದೆ.–ಎಂದರೆ ಪರತಂತ್ರ ಭಾರತದ ಆಗಿನ ಸ್ಥಿತಿಯನ್ನು ' ಪ್ರತಿಮಾ ' ವಿಧಾನದಲ್ಲಿ ಈ ರೂಪಕ ಚಿತ್ರಿಸುತ್ತದೆ.

ಸಾಕಷ್ಟು ಶ್ರಮ ವಹಿಸಿದರೆ ಈ ರೂಪಕವನ್ನು ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರದರ್ಶಿಸಬಹುದು. ವಾಚಕನ ಮನೋರಂಗದಲ್ಲಂತೂ ಇದು ತೀರ ಪರಿಣಾಮಕಾರಿ ರೂಪಕ. ಇಲ್ಲಿಯ ಒಂದೊಂದು ನುಡಿಯೂ ಗುಂಡಿನಂತೆ ಎದೆಯನ್ನು ಬಡಿಬಡಿದು ಮೊಳಗುತ್ತದೆ. ಪರಶುರಾಮನ ಸಾತ್ವಿಕತೇಜ–ಸದಾಗ್ರಹಗಳು ಓದುಗನಲ್ಲಿ ನವಿರೆಬ್ಬಿಸಿ, ಅವನನ್ನು ಮಾತೃಭೂಮಿ ಸೇವೆಗೆ, ಅನ್ಯಾಯ-ದೌರ್ಜನ್ಯಗಳ ಪ್ರತಿಭಟನೆಗೆ ಹುರಿಗೊಳಿಸುತ್ತವೆ. ದೃಶ್ಯಾರಂಭದಲ್ಲೇ ಪರಶುರಾಮನು ಹಾಡುವ ಕ್ರಾಂತಿಗೀತವಾಗಲೀ ಅದಕ್ಕೆ ವಟುಗಳು ಕೂಡಿಸುವ ದನಿಯಾಗಲೀ ಬಂಕಿಮರ ' ವಂದೇ ಮಾತರಂ ' ಉದ್ಘೋಷದಂತೆ ವಾಚಕನ ಕಿವಿಯನ್ನು ತಟ್ಟಿ, ಎದೆಯನ್ನು ಮುಟ್ಟಿ ಅವನಲ್ಲಿ ಕೆಚ್ಚನ್ನು ಕೆರಳಿಸುತ್ತದೆ :

ಮಸೆಯಲಿ ಕ್ರಾಂತಿಯ ಕ್ರೂರಕುಠಾರಂ
ನೆಲಸಮವಾಗಲಿ ವೈರಿ ವಠಾರಂ !
ನಗೆಯನು ಹೊಂದಲಿ ಅಶ್ರುಮದಾಸ್ಯಂ
ಇಂದೇ ಮುಗಿಯಲಿ ಹಾಳೀ ದಾಸ್ಯಂ
ದಬ್ಬಾಳಿಕೆ ಈ ಮಾಹಿಷ್ಮತಿಯ–
ಅರ್ಜುನನಲ್ಲಿ ಮೀರಿದೆ ಮಿತಿಯ

ನಾಡಿನ ಪೀಡೆಯು ದೂಡಲಿಕಾವು-
ಕ್ರಾಂತಿಯ ತರಬೇಕಿಲ್ಲವೆ ಸಾವು !

ಪರಶುರಾಮನ ಈ ವೀರ ಘೋಷವು ಒಂದು ಕಾಲದಲ್ಲಿ ಭಾರತೀಯ ಸ್ವಾತಂತ್ರ್ಯ ಯೋಧರ ರಣಘೋಷವೂ ಆಗಿತ್ತು. ಅದರಲ್ಲೂ ಉಗ್ರಪಂಥೀಯರಾದ ಕ್ರಾಂತಿಕಾರಿಗಳು ಪರುಶುರಾಮನಂತೆ, ಬಯಸುತ್ತಿದ್ದುದು 'ಕ್ರಾಂತಿ' ಇಲ್ಲವೇ 'ಸಾವು' ಎಂಬುದನ್ನು ಇತಿಹಾಸವೇ ಸಾರಿ ಹೇಳುತ್ತಿದೆಯಲ್ಲವೇ ?

ಪರಶುರಾಮನು ಕೊಡಲಿ ಮಸೆಯುವಾಗ ಹಾಡುವ ವೀರಗೀತವೂ ಅಷ್ಟೇ ಆವೇಶಪೂರ್ಣವಾದದ್ದು ; ಉತ್ತೇಜಕವಾದದ್ದು :

ಅರೆಯ ಮೇಲೆ ಅಲಗನಿಟ್ಟು
ಮಸೆ ! ಮಸೆ ! ಕೊಡಲಿ ಮಸೆ !
ನಾವು ನಾಡಗಂಡರೆಂದು
ಮಸೆ ! ಮಸೆ ! ಕೊಡಲಿ ಮಸೆ !

ಕೊಡಲಿಯ ಮಸೆತಕ್ಕೆ ಸರಿಯಾಗಿದೆ ಹಾಡಿನ ಹರಿತ. ಇದೇ ರೀತಿ ಕಾರ್ತವೀರ್‍ಯನ ದೌರಾತ್ಮ್ಯಗಳನ್ನು ಕಂಡು ತನ್ನ ನೆತ್ತರು ಕುದಿಯುತ್ತಿದೆ ಎಂದು ಪರಶುರಾಮನು ಹೇಳುವ ರೀತಿಯಾದರೂ ತುಂಬ ಶಕ್ತಿಪೂರ್ಣವಾಗಿದೆ. ಒಂದೊಂದು ಪದ್ಯದ ಕೊನೆಯಲ್ಲೂ 'ಧುಮುಧುಮುಧುಮು ದುಡಿಯುತಲಿದೆ ಬಿಸಿರಕ್ತದ ಧಮನಿ' ಎಂಬ ಸಾಲು ಪಲ್ಲವಿಯಂತೆ ಬಂದು, ಒಟ್ಟು ಭಾವವನ್ನೇ ಸಜೀವ ಸಮುಜ್ವಲಗೊಳಿಸುತ್ತದೆ.

ಕಾರ್ತವೀರ್ಯನ ಕೆಡುಗಣ್ಣು ರೇಣುಕೆಯ ಮೇಲೆ ಹರಿಯಿತು. ಅವನ ವಿಲಾಸ-ವಿಭ್ರಮಗಳನ್ನು ಕಂಡು ರೇಣುಕೆ 'ಮನದಿ ಜಾರೆಯಾದಳು' ಎಂಬುದಕ್ಕಾಗಿ ತಂದೆ ಜಮದಗ್ನಿಯ ಮಾತಿನಂತೆ ತಾಯಿಯನ್ನು ಕೊಲ್ಲುತ್ತಾನೆ ಪರಶುರಾಮ. ಅದಾದ ಮೇಲೆ ಜಮದಗ್ನಿ-ಪರಶುರಾಮರ ನಡುವೆ ನಡೆಯುವ ಸಂಭಾಷಣೆಯಲ್ಲಿ ರಾಜ್ಯ-ರಾಜ ವಿಚಾರದ ಮಥನವಾಗಿದೆ. 'ನಾ ವಿಷ್ಣುಃ ಪೃಥಿವೀಪತಿಃ' ಎಂಬುದು ಹಳೆಯ ನಂಬಿಕೆ, ಹೇಳಿಕೆ. ಆದರೆ ಪೃಥಿವೀಪತಿ ಪ್ರಜಾಪೀಡಕನಾದರೆ ?-ಸರ್ವಥಾ ದಂಡನೀಯ—ಇದು ಪರಶುರಾಮನವಾದ :—

ರಾಜನದು ರಾಜ್ಯವಲ್ಲ, ರಾಜ್ಯ ದೇವನದು
.....................................
ದೊರೆಯೆಂಬ ಹೆಸರೊಂದು ತಗುಲಿಕೊಂಡಾಕ್ಷಣವೆ
ಸ್ವೈರ ವೃತ್ತಿಯನ್ನೆತ್ತಿ ಕುಣಿಯಲೆಂದಿದೆಯೋ ?
ನಮ್ಮ ಮನೆಯಲಿ ನಮಗೆ ಸ್ವಾತಂತ್ರವಿಲ್ಲವೋ

ತನ್ನ 'ಅಮ್ಮನಿಗೆ ಕಣ್ಣಿಟ್ಟ' ಎಂಬುದರಿಂದಲೇ ಪರಶುರಾಮನಿಗೆ ರಾಜನಲ್ಲಿ

ಸಿಟ್ಟಲ್ಲ. 'ಕಲ್ಲು ಕಣ್ಣೀರಿಡುವ ನಾಡ ಸಂಕಟ ಕಂಡು' ಅವನೆದೆಯಲ್ಲಿ ಎದ್ದಿದೆ ಬೇಗೆ. ಅನ್ಯಾಯ ಆಕ್ರಮಗಳನ್ನು ಕಂಡು ಕಣ್ಣು ಮುಚ್ಚಿ ತಣ್ಣಗಿರುವುದು ಜಿತಾತ್ಮತೆಯಲ್ಲ, ನಪುಂಸಕತೆ–ಇದು ಪರಶುರಾಮನ ವಿಚಾರಪಥ. ಅವನದಿನ್ನೂ ಎಳೆ ಹರೆಯ, ಬಿಸಿರಕ್ತ. ಜಮದಗ್ನಿಯೋ ಕಳಿತ ಹಣ್ಣು, ತುಂಬು ಅನುಭವಿ. ಮಗನ ಉತ್ಸಾಹದ ಕುದುರೆಗೆ ಇವನು ವಿವೇಕದ ಕಡಿವಾಣ. 'ಅರಸನಿಗೆ ಕೋಟೆ–ಕೊತ್ತಲವುಂಟು, ಮಂದಿ–ಮಾರ್ಬಲವುಂಟು. ನೀನೋ ಏಕಾಂಗಿ, ಕೊಂಚ ಕಾಲ ತಡೆ. ಅದರಲ್ಲೂ "ಸಮರಮಾರಿಯ ಸಂಗವೊಮ್ಮೆ ಮಾಡಿದರಾಯ್ತು–ಎಂದೆಂದುಮವಳು ಬಿಡಳು'–ಎಂದು ಎಚ್ಚರಿಸುವವನು. –ಜಮದಗ್ನಿಯ ಪ್ರವೇಶ ಎರಡನೆಯ ದೃಶ್ಯದಲ್ಲಿ ಮಾತ್ರ. ಅಷ್ಟೇ ಆದರೂ, ಅವನಾಡುವ ನಾಲ್ಕು ಮಾತಿನಲ್ಲಿ ಅವನ ವ್ಯಕ್ತಿತ್ವವು ಕೆತ್ತಿ ನಿಲ್ಲುತ್ತದೆ. ದುಡುಕು ಸಲ್ಲದು, ತಾಳ್ಮೆ ಮುಖ್ಯ ಎಂಬ ಅನುಭವೀವೃದ್ಧ ಜಮದಗ್ನಿ. ಜತೆಯಲ್ಲಿ ತಪಸ್ವೀಜನ ಸಹಜವಾದ ದಯಾರ್ದ್ರ ಹೃದಯನೂ ಹೌದು.

ಕಾರ್ತವೀರ್ಯನ ಹುಟ್ಟಡಗಿಸಲು ಹೊಂಚುತ್ತಿದ್ದ ಪರಶುರಾಮ. ತಾಪಸ ಜಮದಗ್ನಿ ಕಾರ್ತವೀರ್ಯನ ಕತ್ತಿಗೆ ತುತ್ತಾದದ್ದೇ ತಡ; ಭುಗಿಲೆದ್ದ ಭಾರ್ಗವ–'ಮದ ಗಜದ ಮೂಳೆ ಮುರಿಯಲಿಕಿದುವೆ ಕೊನೆಯು ಕಡ್ಡಿ'–'ಮೈಯಲ್ಲಿ ಕಸುವುಂಟು ಎದೆಯಲ್ಲಿ ಕೆಚ್ಚುಂಟು ನನ್ನ ಬಲದೋಳಿನಲಿ ಪೂರ ನಂಬುಗೆಯುಂಟು. ಧರ್ಮ ನನ್ನೊಡೆಗುಂಟು ಬಲ ಹೆಗಲ ಮೇಲುಂಟು ಕೈದುಗಳ ಮಣಿಮುಕುಟ ಕೂರಲಗು ಗಂಡುಗೊಡಲಿ'.

'ಗಂಡುಗೊಡಲಿಯ ಗಂಡನೆಂದಿಳೆಯು ತತ್ತರಿಸೆ
ಭೂಚಕ್ರಮುಂ ತಿರುಗಿ ಮುಯ್ಯೇಳುಸೂಳೆ
ಬುಡಸಹಿತ ಕ್ಷಾತ್ರಮುಂ ಕಿತ್ತು ರಿಪಿ–ತೂರುವೆನು"

ಎಂದು ಮುನ್ನುಗ್ಗುವನು. ಹೀಗೆ ಹೊರಡುವ ಮಗನನ್ನು ತಾಯಿ ರೇಣುಕೆ ಹರಸುತ್ತಾಳೆ.

'ಧನ್ಯಾತ್ಮ ಭಾರ್ಗವ; ನಿನ್ನದೇ ನಾಡಭಕ್ತಿ
ಹೆಚ್ಚೇನು; ನಾಡ ಬಿಡುಗಡೆ ತಾನೆ ನಮಗೆಲ್ಲ ಸಗ್ಗ
.............................................
ಜಾಮದಗ್ನ್ಯಂ ಗೆಲ್ಗೆ!
ಜಯಮಕ್ಕೆ ಕ್ರಾಂತಿಗೆಂದುಂ!

—ಇಲ್ಲಿಯ ಪರಶುರಾಮ ಋಷಿಕುಮಾರನಷ್ಟೇ ಅಲ್ಲ, ನಾಡ ಬಿಡುಗಡೆಗೆ ಹೊರಟಿರುವ ವೀರ; ಕ್ರಾಂತಿಮಂತ್ರವನ್ನು ಎಡೆಬಿಡದೆ ಮೊಳಗುವ ತುತ್ತೂರಿ.

ನುಡಿದಂತೆ ನಡೆದನು ಪರಶುರಾಮ. ಆದರೂ ಅವನ ಎದೆಗಿಚ್ಚು ನಂದದು, ಕೊಡಲಿಯ ನೆತ್ತರ ತೃಷೆ ಹಿಂಗದು. ಹಿಂದೆಯೇ ಹೇಳಿದ್ದನಲ್ಲವೇ ಜಮದಗ್ನಿ: "ಸಮರ

ಮಾರಿಯ ಸಂಗ......" ಈಗ ಅವನನ್ನು ತಡೆಯಲು ಜಮದಗ್ನಿಯಲ್ಲ- ಕಶ್ಯಪ ಮುಂದಾಗುತ್ತಾನೆ :—

ಕ್ಷಾತ್ರಮಂ ಸಮರಿದುದು ಹೆಚ್ಚಲ್ಲ ಭಾರ್ಗವ,
ಲೋಕಮಂ ಕಾಪಿಡುವುದದಕಿಂತ ಮುಖ್ಯತಮ,
ಆಳಲಿಕೆ ಪಾತ್ರಗಳ ನಾಯುವುದುಮುಖ್ಯತಮ—

ಎಂದು ಎಚ್ಚರಿಸುತ್ತಾನೆ. (ಆಂಗ್ಲರು ಭಾರತದಿಂದ ತೊಲಗಿದರು, ದೇಶ ಸ್ವತಂತ್ರ ವಾಯಿತು. ಜತೆಯಲ್ಲೇ ಗಾಂಧೀಜಿ ಹಂತಕನ ಗುಂಡೇಟಿಗೆ ಬಲಿಯಾದರು, ನಾಯ ಕತ್ವಕ್ಕಾಗಿ ಒಳಗೊಳಗೆ ಅತೃಪ್ತಿ ಹೊಗೆಯಾಡಿತು....ಇನ್ನೂ ಹೊಗೆಯುತ್ತಲೇ ಇದೆ: ಅಲ್ಲವೇ ?) ಕಶ್ಯಪನ ನುಡಿ ಭಾರ್ಗವನ ಹೃತ್ತಂತಿಯನ್ನು ಮೀಟಿತು.

'ಕ್ಷಾತ್ರಕೆದುರೆತ್ತಿದೆನು ಲೋಕಕಲ್ಯಾಣಕ್ಕೆ, ಮತ್ತಿದನೆ ತೊರೆಯುವೆನು ಲೋಕ ಕಲ್ಯಾಣಕ್ಕೆ'ಎಂದು ತನಗೆ ಅತಿಪ್ರಿಯವಾದ ಕೊಡಲಿಯನ್ನು ಮಡುವೊಂದಕ್ಕೆ ಎಸೆದುಬಿಡು ವನು. ಇದೀಗ ಶ್ಲಾಘ್ಯವಾದ ಗುಣ ; ನಿರ್ಲಿಪ್ತತೆಯೆಂದರೆ ಇದು. (ಗಾಂಧೀಜಿಯೂ ಹೀಗೆಯೇ ಹೇಳಿದ್ದರಲ್ಲವೇ ?– 'ಕಾಂಗ್ರೆಸ್ ಸ್ವಾತಂತ್ರ್ಯ ಸಂಪಾದನೆಗೊಂದು ಸಾಧನ ಮಾತ್ರ. ಸ್ವಾತಂತ್ರ್ಯ ಪ್ರಾಪ್ತಿಯೊಂದಿಗೆ ಅದನ್ನು ವಿಸರ್ಜಿಸಿ ಬಿಡಿ'–ಆದರೆ ಗಾಂಧೀ ಜಿಯ ನಿಸ್ಪೃಹತೆ ನಮಗೆಲ್ಲಿ ಬರಬೇಕು ?) ಹೀಗೆ ಕೊಡಲಿಯನ್ನು ತೊರೆದ ಪರಶುರಾಮ ಆತ್ಮಸುಖಾರ್ಥಿಯಾಗಿ ಮಹೇಂದ್ರಾಚಲಕ್ಕೆ ತೆರಳುವನು.

'ಗಂಡುಗೊಡಲಿ'ಗೆ ಪುರಾಣಕಥೆ ಆಧಾರವಾದರೂ, ರಾಜರತ್ನಂ ಅಲ್ಲಲ್ಲಿ ಉಚಿತ ಪರಿವರ್ತನೆಗಳನ್ನು ಮಾಡಿಕೊಂಡಿದ್ದಾರೆ. ಆ ಬಗ್ಗೆ ಅವರೇ "ಪುರಾಣ ಪ್ರಸಿದ್ಧನಾದ ಪರಶುರಾಮನ ಪ್ರತಿಬಿಂಬ ಈ ರೂಪಕದಲ್ಲಿ ರೂಪಭೇದವಿಲ್ಲದೆ ಕಾಣದಿರಲು ಕಾರಣ ವನ್ನೂ ದೂರ ಅರಸಬೇಕಾದುದಿಲ್ಲ ; ದರ್ಶನಕ್ಕೆ ದೃಷ್ಟಿಭೇದವೂ ದೃಷ್ಟಿವಿಶೇಷಕ್ಕೆ ಮನ ಸ್ಸಿನ ಪರಿಸ್ಥಿತಿಯೂ ಕಾರಣವೆಂಬ ಸತ್ಯ ಇಂದಿನದಲ್ಲ, ಬಹು ಹಿಂದಿನದು" ಎಂದು ಸಕಾರಣ ಸಮರ್ಥನೆಯನ್ನೂ ನೀಡಿದ್ದಾರೆ. ರಾಜರತ್ನಂ ಹೇಳುವ 'ಮನಸ್ಸಿನ ಪರಿಸ್ಥಿತಿ' ಏನೆಂಬುದನ್ನು ಈ ಮೊದಲೇ ವಿವರಿಸಿದ್ದಾಗಿದೆ. ಅದೆಂದರೆ ಕೃತಿ ರಚನೆಯ ಕಾಲದ ರಾಜಕೀಯ ಸ್ಥಿತಿ ಗತಿ. ಗಾಂಧೀಜಿ ರಾಜಕೀಯ ರಂಗವನ್ನು ಪ್ರವೇಶಿಸಿದ ಅನಂತರ ಅಹಿಂಸಾಯುತ ಹೋರಾಟಕ್ಕೆ ಬಲ ಬಂತಾದರೂ, ಆಂಗ್ಲರ ಹಿಂಸೆಗೆ ಪ್ರತಿ ಹಿಂಸೆಯನ್ನು ಮಾಡಬೇಕೆಂಬ ಉಗ್ರಗಾಮಿಗಳೂ, ಕ್ಷಿಪ್ರ ಫಲ ಸಿದ್ಧಿಗೆ ಕ್ರಾಂತಿಯೊಂದೇ ದಾರಿಯೆಂದು ನಂಬಿದ್ದ ಉತ್ಸಾಹಿಗಳೂ ಇಲ್ಲದಿರಲಿಲ್ಲ. ಅಂತಹವರ ದೃಷ್ಟಿಯನ್ನು ಒಪ್ಪದಿದ್ದವರೂ, ಅವರ ಅಕಲಂಕ ದೇಶಪ್ರೇಮ, ನಿಸ್ವಾರ್ಥ ಸೇವಾಬುದ್ಧಿಗಳನ್ನಾದರೂ ಕೊಂಡಾಡಲೇ ಬೇಕಾಗುತ್ತದೆ. ಪರಶುರಾಮನ ಚಿತ್ರಣವು ಎರಡನೆಯ ಗುಂಪಿನ ಪ್ರತೀಕವೆಂದು ತೋರು ತ್ತಿದೆ. ಕವಿಯೂ ಇಲ್ಲಿ ಅದರ ಪಾರಿ—ವಾದಗಳನ್ನೇ ಬೆಂಬಲಿಸುವಂತಿದೆ. ಹಾಗೆಯೇ

ಜಮದಗ್ನಿ, ಕಶ್ಯಪರ ವಾದಸರಣಿಯೂ ವಿಚಾರಣೀಯ; ಎರಡೂ ವಾದಗಳನ್ನು ವಿಮರ್ಶಿಸಿ, ಸ್ವೀಕರಿಸುವುದು ವಿಚಾರವಂತರಿಗೆ ಸೇರಿದ್ದು.

'ಗಂಡುಗೊಡಲಿ'ಯ ಭಾಷೆ ವೀರ್ಯವತ್ತಾದುದು. ಒಂದೊಂದು ಮಾತೂ ಕಿಡಿಯಂತೆ ಸಿಡಿಯುತ್ತದೆ. ಮಕ್ಕಳಿಗಾಗಿ ತುತ್ತೂರಿ, ಕಡಲೆಪುರಿ, ಕಲ್ಲುಸಕ್ಕರೆಗಳನ್ನು ಹಂಚಿದ ರಾಜರತ್ನಂ 'ಗಂಡುಗೊಡಲಿ'ಯ ಭಾರ್ಗವ ರಾಮನೇ ಆಗಿಬಿಟ್ಟಿದ್ದಾರೆ ಇಲ್ಲಿ. ಸರಳ ರಗಳೆಯನ್ನು ಬಳಸುವಲ್ಲೆಲ್ಲ ರಾಜರತ್ನಂ ವಿಶೇಷ ಸ್ವಾತಂತ್ರ್ಯ ವಹಿಸಿದ್ದಾರೆ. ಮಾತಿಗೆ–ಭಾವದ ಏರಿಳಿತಕ್ಕೆ ತಕ್ಕಂತೆ ರಗಳೆಯ ಸಾಲುಗಳು ಹಿಗ್ಗುತ್ತವೆ, ಕುಗ್ಗುತ್ತವೆ. 'ಉತ್ತಮವೆಲ್ಲ ಕಿರಿದು' ಎಂಬುದು ಒಂದು ಕವಿಸೂಕ್ತಿ. 'ಗಂಡುಗೊಡಲಿ' ಅಂತಹದೊಂದು ಸತ್ಕೃತಿ; ಕನ್ನಡದಲ್ಲೊಂದು ಗಂಡು ರೂಪಕ;

# ೧೪. ದೇವುಡು ಅವರ ‘ ಮಯೂರ ’

ಒಂದು ನಾಡಿನ ಗತಕಾಲದ ಘಟನೆಗಳನ್ನು ಗುರುತಿಸಿ ಎಣಿಸುವುದೇ ‘ ಇತಿಹಾಸ ’; ಜನತೆಯ ಜೀವನವರ್ಣನೆಯೇ ‘ ಚರಿತ್ರೆ.’ ಕನ್ನಡನಾಡಿನ ಇತಿಹಾಸವು ಸುದೀರ್ಘವಾದದ್ದು, ಚರಿತ್ರೆಯು ಭವ್ಯವಾದದ್ದು. ಈ ಸುದೀರ್ಘ ಇತಿಹಾಸದಿಂದ, ಈ ಭವ್ಯ ಚರಿತ್ರೆಯಿಂದ ಪುಲಕಿತರಾಗಿ, ಪ್ರಚೋದಿತರಾಗಿ ತಮ್ಮ–ತಮ್ಮ– ತೆಕ್ಕೆಗೆ ತಕ್ಕಂತೆ ಸಾಧನಗಳನ್ನು ಬಳಸಿಕೊಂಡು ಕಥೆ–ಕವನ–ಕಾದಂಬರಿಗಳನ್ನು ಬರೆದವರಿದ್ದಾರೆ. ಹೊಸಗನ್ನಡ ಸಾಹಿತ್ಯದಲ್ಲಿ ಇಂತಹ ಐತಿಹಾಸಿಕ (ಅಥವಾ ಚಾರಿತ್ರಿಕ) ಕಥನಗಳದ್ದೇ ಒಂದು ದೊಡ್ಡ ಪ್ರಕಾರವಿದೆ. ದಿ| ದೇವುಡು ನರಸಿಂಹ ಶಾಸ್ತ್ರಿಯವರ ‘ ಮಯೂರ ’ ಅಂತಹ ಒಂದು ಕಾದಂಬರಿ; ಕದಂಬೇತಿಹಾಸ ನಿಕ್ಷೇಪದಿಂದ ಎತ್ತಿ ತಂದು ಕನ್ನಡತಾಯಿಯ ಮುಡಿಗೆ ತೊಡಿಸಿದ ಒಂದು ಉಜ್ವಲರತ್ನ.

ಹೊಸಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮೊದಮೊದಲಿಗೆ ಹೆಚ್ಚಾಗಿ ಬೆಳೆದ ಬೆಳೆಗಳೆಂದರೆ ಐತಿಹಾಸಿಕ ಕಾದಂಬರಿಗಳದ್ದು. ಅಷ್ಟೇ ಏಕೆ, ಕೆಂಪುನಾರಾಯಣನ ‘ಮುದ್ರಾ ಮಂಜೂಷ ’ವು ಕನ್ನಡದ ಮೊತ್ತಮೊದಲ ಐತಿಹಾಸಿಕ ಕಾದಂಬರಿಯೆಂದರೂ ತಪ್ಪಾಗದಲ್ಲವೇ ? ಗಳಗನಾಥ, ವೆಂಕಟಾಚಾರ್ಯ, ಎಂ. ಎಸ್. ಪುಟ್ಟಣ್ಣ ಮತ್ತು ಕೆರೂರ ವಾಸುದೇವಾಚಾರ್ಯರು ಸುಮಾರು 1890ರಿಂದ 1930ರವರೆಗಿನ ಕಾಲಾವಧಿಯಲ್ಲಿ ಸ್ವತಂತ್ರವೋ ಅನುವಾದಿತವೋ ಆದ ಹಲವಾರು ಐತಿಹಾಸಿಕ ಕಾದಂಬರಿಗಳನ್ನು ಪ್ರಕಟಿಸಿದರು. ಗಳಗನಾಥರು ಹರಿನಾರಾಯಣ ಆಪ್ಟೆಯವರ ಮರಾಠಿ ಕಾದಂಬರಿಗಳಲ್ಲೂ ವೆಂಕಟಾಚಾರ್ಯರು ಬಂಕಿಮಚಂದ್ರರ ಬಂಗಾಳೀ ಕೃತಿಗಳಲ್ಲೂ ಹೆಚ್ಚಿನ ಒಲವನ್ನು ತೋರಿ, ಅವನ್ನು ಕನ್ನಡಕ್ಕೆ ತಂದರು. ಗಳಗನಾಥರ ಕಾದಂಬರಿಗಳಲ್ಲಿ ವಿಜಯನಗರಕ್ಕೆ ಸಂಬಂಧಿಸಿದ ಮಾಧವ ಕರುಣಾವಿಲಾಸ, ಕನ್ನಡಿಗರ ಕರ್ಮಕಥೆ, ಕುಮುದಿನಿ ಮತ್ತು ಚಿತ್ರದುರ್ಗವನ್ನು ಕುರಿತ ದುರ್ಗದ ಬಿಚ್ಚುಗತ್ತಿ ಗಳೂ ಸೇರಿಕೊಂಡಿರುವುದು ಒಂದು ವಿಶೇಷ ಸಂಗತಿ. ಮಾತ್ರವಲ್ಲ ಇವುಗಳಲ್ಲಿ ಒಂದೆರಡು ಸ್ವತಂತ್ರವೂ ಆಗಿವೆ. ವಾಸುದೇವಾಚಾರ್ಯ ಮತ್ತು ಪುಟ್ಟಣನವರ ಕೃತಿಗಳಲ್ಲಿ ಮೈಸೂರು ಇತಿಹಾಸದ ಕೆಲವು ಎಳೆಗಳನ್ನು ಗುರುತಿಸಬಹುದಾಗಿದೆ.

ಹೊಸಗನ್ನಡದ ಆರಂಭ ಕಾಲದಲ್ಲಿ ಐತಿಹಾಸಿಕ ವಸ್ತುಗಳಿಗೆ ಪ್ರಾಧಾನ್ಯವು ದೊರೆತದ್ದು ಉಚಿತವಾಗಿಯೇ ಇದೆ. ಭರತವರ್ಷದ ಉದ್ದಗಲಕ್ಕೂ, ಸ್ವಾತಂತ್ರ್ಯಾಂದೋಲನವು ವ್ಯಾಪಿಸಿದ್ದ ಕಾಲವದು. ಭಾರತೀಯರಲ್ಲಿ ತಮ್ಮ ಪ್ರಾಚೀನ ಇತಿಹಾಸ, ಸಂಸ್ಕೃತಿ, ಪರಂಪರೆಗಳ ಪ್ರಜ್ಞೆ ಮೂಡಿ, ದೇಶಕ್ಕಾಗಿ ತಮ್ಮ ಸರ್ವಸ್ವವನ್ನೂ ಮುಡಿಪಾಗಿಟ್ಟ ವೀರಪುರುಷರ ಚರಿತ್ರೆಯಿಂದ ಉತ್ತೇಜಿತರಾಗಿ ಪರದಾಸ್ಯ ಶೃಂಖಲೆಯನ್ನು ಕಡಿದೊಗೆಯಲು ಅವರು ಸಿದ್ಧರಾಗುವುದು ಅತ್ಯವಶ್ಯವಾಗಿತ್ತು–ಆದುದರಿಂದಲೇ ಅತ್ತ ಬಂಗಾಳದಲ್ಲಿ ಬಂಕಿಮರು ‘ ಆನಂದಮಠ ’ ವನ್ನು ಬರೆದು “ ವಂದೇಮಾತರಂ ” ಎಂದು ಉದ್ಘೋಷಿಸಿದರು. ಇತ್ತ ಮಹಾರಾಷ್ಟ್ರದಲ್ಲಿ ಆಪ್ಟೆಯವರು ಛತ್ರಪತಿ ಶಿವಾಜಿಯ ಹಾಗೂ ಅವನ ವೀರ

ಮರಾಠ ಸರದಾರರ ದೇಶಭಕ್ತಿಯ ವೀರಗಾಥೆಗಳನ್ನು ಹಾಡಿದರು. ರಜನೀಕಾಂತ ಗುಪ್ತರೇ ಮುಂತಾದವರು ರಜಪೂತರ ತ್ಯಾಗಮಯ ವೀರ ಜೀವನವನ್ನು ವರ್ಣಿಸಿದರು. ಕನ್ನಡಕ್ಕೂ ಇಂತಹ ಸಾಹಿತ್ಯದ ಅವಶ್ಯಕತೆಯಿತ್ತು. ಸಹಜವಾಗಿ, ಆ ಕಾಲದಲ್ಲಿ ಜನಪ್ರಿಯವಾಗಿದ್ದ ಬಂಗಾಳಿ–ಮಹಾರಾಷ್ಟ್ರ-ರಾಜಾಸ್ಥಾನಗಳ ಇತಿಹಾಸ ಗ್ರಂಥಗಳು ಗಳಗನಾಥರೇ ಮೊದಲಾದವರ ದೃಷ್ಟಿಯನ್ನು ಸೆಳೆದುಕೊಂಡುವು. ಕಾಲಾಂತರದಲ್ಲಿ–ಅನ್ಯ ಸಾಹಿತ್ಯದ ಅನುವಾದವೇ ಏಕೆ, ಕನ್ನಡಿಗರ ಇತಿಹಾಸವೂ ಪ್ರಾಚೀನವಲ್ಲವೇ, ಅವರ ಸಂಸ್ಕೃತಿ–ಪರಂಪರೆಗಳೂ ಉಜ್ವಲವಲ್ಲವೇ ಎಂಬ ಭಾವವು ಮೊಳೆತಾಗ–ವಿಜಯನಗರ–ಚಿತ್ರದುರ್ಗ ಬಾದಾಮಿ–ಬನವಾಸಿ–ತಲಕಾಡು–ಮಾನ್ಯಖೇಟ–ದ್ವಾರಸಮುದ್ರ–ಮೈಸೂರುಗಳ ಇತಿಹಾಸ–ಚರಿತ್ರೆಗಳು ಲೇಖಕರನ್ನು ಕೈಬೀಸಿ ಕರೆದುವು. ಅವುಗಳ ಏಳು–ಬೀಳುಗಳ ಕಥನಕ್ಕೆ ಕನ್ನಡಿಗರ ಲೆಕ್ಕಣಿಕೆಗಳು ಸಜ್ಜಾದುವು. ಹಾಗೆ ಹುಟ್ಟಿ ಬಂದದ್ದು ಕನ್ನಡದ್ದೇ ಆಗಿರುವ ಐತಿಹಾಸಿಕ ಕಾದಂಬರಿಗಳು. ಸ್ವಾತಂತ್ರ್ಯ ಪೂರ್ವದಲ್ಲಿ ಐತಿಹಾಸಿಕ ಪ್ರಜ್ಞೆಗಿಂತ ದೇಶಭಕ್ತಿ ಪ್ರಚೋದನೆಗೆ ಪ್ರಾಶಸ್ತ್ಯವಾಗಿದ್ದರೆ, ಸ್ವಾತಂತ್ರ್ಯಾನಂತರ ಇತಿಹಾಸದ ಯಥಾರ್ಥ ಚಿತ್ರಣವೇ ಪ್ರಧಾನವಾಗಿ ಕಾದಂಬರಿಗಳು ಪ್ರಕಟವಾದುವು, ಆಗುತ್ತಿವೆ–ಹೀಗೆ ಪ್ರಕಟವಾದ ಐತಿಹಾಸಿಕ ಕಾದಂಬರಿಗಳು ಕೆಲವು ಕನ್ನಡ ಸಾಹಿತ್ಯ ಚರಿತ್ರೆಗೆ ನೂತನ ಅಧ್ಯಾಯವನ್ನು ಸೇರಿಸಬಲ್ಲಷ್ಟು ಸಮರ್ಥವಾಗಿವೆ–ಮಾಸ್ತಿಯವರ ಚೆನ್ನಬಸವ ನಾಯಕ, ಚಿಕ್ಕವೀರ ರಾಜೇಂದ್ರ, ಅನಂದಕಂದರ ರಾಜಯೋಗಿ, ಅಶಾಂತಿಪರ್ವ, ಮಲ್ಲಿಕಾರ್ಜುನ, ತ.ರಾ.ಸು. ರವರ ನೃಪತುಂಗ, ಹಂಸಗೀತೆ, ಕಂಬನಿಕುಯಿಲು, ರಕ್ತರಾತ್ರಿ, ಕೆ. ವಿ. ಅಯ್ಯರರ ಶಾಂತಲಾ ಇವು ಅಂತಹ ಕೆಲವು ಕಾದಂಬರಿಗಳು.

ದೇವುಡು ಅವರಿಗೆ ಕನ್ನಡದಲ್ಲಿ ವಿಶಿಷ್ಟವಾದ ಸ್ಥಾನಮಾನವಿದೆ. ಅದಕ್ಕೆ ಅವರ ಗ್ರಂಥವೈವಿಧ್ಯವೇ ಕಾರಣ. ಅವರು ಸೃಷ್ಟಿಸಿದ ಲಲಿತಸಾಹಿತ್ಯದಲ್ಲಿ ಅಂತರಂಗ, ಕಳ್ಳರ ಕೂಟ, ಅವಳ ಕತೆ, ಡಾ. ವೀಣಾ, ಮಲ್ಲಿ, ಮಹಾಬ್ರಾಹ್ಮಣ, ಮಹಾದರ್ಶನ ಮಹಾಕ್ಷತ್ರಿಯ- ಇವೆಲ್ಲ ಒಂದೊಂದು ವರ್ಗಕ್ಕೆ ಸೇರಿದ ಕೃತಿಗಳು. ಅವರ ' ಮಯೂರ ' ಈ ಶತಮಾನದ ಮೂರನೇ ದಶಕದಲ್ಲಿ ಪ್ರಕಟವಾಯಿತು. ಗಳಗನಾಥ ವೆಂಕಟಾಚಾರ್ಯರೇ ಮುಂತಾದ ಆದ್ಯರ ಕಾಲವು ಕಳೆದು, ಕಾರಂತ, ಅ.ನ.ಕೃ. ಗಳ ಸಾಮಾಜಿಕ ಕಾದಂಬರಿಗಳು ಜನಪ್ರಿಯವಾಗುತ್ತಿದ್ದ ಕಾಲವದು. ವಾಚಕರ ರುಚಿ ಪಲ್ಲಟವೋ ಏನೋ ಕಾರಣವಾಗಿ ಐತಿಹಾಸಿಕ ಕಾದಂಬರಿಗಳ ರಚನೆ ಇಳಿಮುಖವಾಗಿತ್ತು. ಅಂತಹ ಕಾಲದಲ್ಲಿ ದೇವುಡು ಅವರ ' ಮಯೂರ 'ವು ಪ್ರಕಟವಾಗಿ ವಾಚಕಲೋಕದಲ್ಲಿ ಮಯೂರ ನರ್ತನ ಮಾಡಿತು; ಚಿತ್ತಮೋಹಕವೆನಿಸಿತು.

ಮೊದಲೇ ಸೂಚಿಸಿದಂತೆ, ' ಮಯೂರ 'ವು ಬನವಾಸಿಯ ಕದಂಬ ಇತಿಹಾಸಕ್ಕೆ ಸಂಬಂಧಿಸಿದ ಕಾದಂಬರಿ. ಲೇಖಕರು, " ಮಯೂರವು ಕಥೆ, ಚರಿತ್ರೆಯಲ್ಲ, ಇದರಲ್ಲಿ ದಿಟಕ್ಕಿಂತಲೂ ದಿಟವಂತೆ ತೋರುವ ಸಟೆಯೇ ಹೆಚ್ಚು" ಎಂದು ಅರಿಕೆ ಮಾಡಿದ್ದಾರೆ. ಇದು ಕೇವಲ ದೇವುಡುರವರ ಕೃತಿಗೆ ಮಾತ್ರವಲ್ಲ ' ಐತಿಹಾಸಿಕ ' ಕಾದಂಬರಿವಿಶೇಷಕ್ಕೇ

ಅನ್ವಯಿಸುವ ಮಾತು. ಲೇಖಕನು ಸತ್ಯಸಂಗತಿಗಳಿಗೇ ಅಂಟಿಕೊಂಡರೆ, ಅವನದ್ದು ಇತಿಹಾಸ ಗ್ರಂಥವಾದೀತೇ ವಿನಾ ಕಾದಂಬರಿಯಾಗದು. ಆದುದರಿಂದ ಅವನು ಸತ್ಯಸಂಗತಿಗೆ ಕಲ್ಪನೆಯ ಸಕ್ಕರೆಯನ್ನು ಮೆತ್ತಿ ರೋಚಕಗೊಳಿಸಬೇಕಾಗುತ್ತದೆ–ಇದು ಅನಿವಾರ್ಯ. ಇಂತಹ ಕಲ್ಪನೆಯಲ್ಲಿಯೇ ಅವನ ಸ್ವೋಪಜ್ಞತೆಯೂ ಸೇರಿಕೊಂಡು, ಅದೊಂದು ಒರೆಗಲ್ಲಾಗುತ್ತದೆ. ಎಷ್ಟೋ ಮಂದಿ ಐತಿಹಾಸಿಕ ಕಾದಂಬರಿಕಾರರಿಗೆ ಒಂದು ಪುರಾತನ ಶಾಸನ ವಾಕ್ಯವೋ ತಾಳೆಗರಿಯ ಒಂದು ಗೆರೆಯೋ, ಗೆಜೆಟಿಯರುಗಳ ಒಂದು ಉಲ್ಲೇಖವೋ, ವೀರಗಲ್ಲು-ಮಾಸ್ತಿಗಲ್ಲುಗಳೋ ಸಾಕಾಗಿಬಿಡುತ್ತವೆ; ಅವುಗಳ ಸುತ್ತ ರೇಶ್ಮೆ ಹುಳುವಿನಂತೆ ತಮ್ಮ ಕಲ್ಪನಾ ಜಾಲವನ್ನು ನೆಯ್ದು ಬಿಡುತ್ತಾರೆ. ಕುತೂಹಲ ಪ್ರಚೋದನೆಯೊಂದೇ ಇಂಥವರ ದಾರಿ, ಗುರಿ. ಆದರೆ ಇದು ಅಪಾಯದ ದಾರಿಯೂ ಹೌದು. ಐತಿಹಾಸಿಕ ಸತ್ಯವೊಂದು, ಇವರ ಚಿತ್ರಣ ಇನ್ನೊಂದು ಎಂದಾಗಬಾರದಲ್ಲ! ಕಾದಂಬರಿಯ ಪಂಕ್ತಿ ಪಂಕ್ತಿಗೂ ಇತಿಹಾಸದ ಆಧಾರ, ಸಮರ್ಥನೆಗಳು ಅನಿವಾರ್ಯ, ಅಪೇಕ್ಷಣೀಯ. ದೇವುಡುರವರ 'ಮಯೂರ'ದಲ್ಲಿ ಇತಿಹಾಸದ ಅಸ್ಥಿಪಂಜರವು ದೃಢವಾಗಿಯೇ ಇದೆ. ಲೇಖಕರ ಕಲ್ಪನಾ ಶಕ್ತಿಯೂ ಪ್ರಗಲ್ಭವಾದುದು. ಹೀಗಾಗಿ, ಇತಿಹಾಸಕ್ಕೆ ಅಪಚಾರವಾಗಿಲ್ಲ; ವಾಚಕನಿಗೆ ಯಾವ ಸಂಶಯವೂ ಬರುವಂತಿಲ್ಲ, ಅಥವಾ ಯಾವುದೋ ಗುಂಪಿಗೆ ಅಪಮಾನವಾಗಿ ಕಾದಂಬರಿಯನ್ನು ಬಹಿಷ್ಕರಿಸುವಂತೆಯೂ ಇಲ್ಲ!

ಬ್ರಾಹ್ಮಣ ಕುಮಾರನೊಬ್ಬನು ಒಂದು ನವಿಲನ್ನು ಕೊಂದು ಅದರ ನೆತ್ತರನ್ನು ಕುಡಿದನೆಂದೂ ಆನೆಯೊಂದು ಅವನ ಕೊರಳಿಗೆ ಮಾಲೆ ಹಾಕಿತೆಂದೂ ಅದರಿಂದಲೇ ಬ್ರಾಹ್ಮಣ ಶರ್ಮನು ಕ್ಷತ್ರಿಯ ವರ್ಮನಾಗಿ ರಾಜನಾದನೆಂದೂ ಅವನೇ ಕದಂಬವಂಶ ಸ್ಥಾಪಕ ಮಯೂರವರ್ಮನೆಂದೂ ಕೆಲವರ್ಷಗಳ ಹಿಂದೆ ಯಾವುದೋ ಪ್ರಾಥಮಿಕ 'ಚರಿತ್ರೆ ಪುಸ್ತಕ'ದಲ್ಲಿ ಪ್ರಕಟವಾಗಿತ್ತು. ಅದನ್ನು ನಾನೋದಿದ್ದೆ. ಕದಂಬವಂಶ ವಿಚಾರವು ಸಂದಿಗ್ಧವಾಗಿರುವುದೇ ಇಂತಹ ದಂತಕಥೆಗಳಿಗೆ-ಊಹಾಪೋಹಗಳಿಗೆ ಕಾರಣ. ಪ್ರಕೃತ ಕಾದಂಬರಿಯಲ್ಲೂ ಮಯೂರನು ಶರ್ಮನೋ ವರ್ಮನೋ ಎಂಬ ಪ್ರಸ್ತಾವವಿದೆ. ಬ್ರಾಹ್ಮಣ ವೇಷದಲ್ಲಿದ್ದ ಕ್ಷತ್ರಿಯ ಕುಮಾರನೇ ಮಯೂರನೆಂಬ ಸಮಾಧಾನವೂ ಇದೆ. ಈ ಸಮಾಧಾನಕ್ಕೆ ಸಮರ್ಥನೆಯೂ ಇದೆ. ಇತಿಹಾಸದ ಸಿಕ್ಕುಗಳನ್ನೆಲ್ಲ ತಮ್ಮ ಕುಶಾಗ್ರ ಬುದ್ಧಿಯಿಂದ ಬಿಡಿಸಿ, ಓರಣಗೊಳಿಸಲು ಯತ್ನಿಸಿದ್ದಾರೆ ದೇವುಡು. ಫಲವಾಗಿ ಓದುಗನಲ್ಲಿ ಕದಂಬ ರಾಜ್ಯ ಸ್ಥಾಪನೆಯ ಕಥೆಯು ಹೀಗಿಯೇ–ಈ ಕಾದಂಬರಿಯಲ್ಲಿರುವಂತೆಯೇ ನಡೆದಿರಬಹುದೆಂಬ ಭಾವವು ಬಲಿತು ನಂಬಿಕೆಯು ಬೆಳೆಯುತ್ತದೆ.

'ಮಯೂರ'ದ ಕಥೆಯನ್ನು ಸ್ಥೂಲವಾಗಿ ಹೀಗೆ ಸಂಗ್ರಹಿಸಬಹುದು :— ಪಲ್ಲವ ರಾಜಧಾನಿಯಾದ ಕಾಂಚೀಪುರದಲ್ಲಿ ಈಶಭಟ್ಟನ ಆಶ್ರಯದಲ್ಲಿದ್ದ ಮಯೂರನು ಸಂದರ್ಭವಶಾತ್ ರಂಗಾಜೆಟ್ಟಿಯ ಗರಡಿ ಮನೆ ಸೇರುವನು. ಮುಂದೊಂದು ದಿನ ಅವನು ಪಲ್ಲವ ರಾಜಕುಮಾರನನ್ನು ಕೆಣಕಿ, ಅರಸನ ಆಗ್ರಹಕ್ಕೆ ಒಳಗಾದರೂ, ತಲೆತಪ್ಪಿಸಿಕೊಳ್ಳುವನು. ಹಾಗೆ ತಲೆತಪ್ಪಿಸಿಕೊಂಡ ಮಯೂರನು ಕರ್ಮಧರ್ಮ ಸಂಯೋಗದಿಂದ ಸ್ಥಾನಭ್ರಷ್ಟ

ರಾಗಿ ವನಾಂತರದಲ್ಲಿ ಅಲೆಯುತ್ತಿರುವ ವೈಜಯಂತಿಯ (ಬನವಾಸಿ) ಮಂತ್ರಿ ಷಡಾನನ ಶರ್ಮ, ಸೈನ್ಯಾಧ್ಯಕ್ಷ ನರಸಿಂಹದತ್ತ ಹಾಗೂ ರಾಜಗುರು ವೀರಶರ್ಮರನ್ನು ಸೇರು ವನು. ಅವರೆಲ್ಲರೂ ಬನವಾಸಿ ಈಗ ಪಲ್ಲವಾಧೀನವಾಗಿದ್ದರೂ, ಅದನ್ನು ಸ್ವತಂತ್ರ ಗೊಳಿಸಿ, ಹಿಂದಣ ಅರಸ ಚಂದ್ರವರ್ಮನ ಸಂತತಿಗೇ ಒಪ್ಪಿಸಿ ಅನ್ನದ ಋಣ ತೀರಿಸ ಬೇಕೆಂದು ಹೊಂಚು ಹಾಕುತ್ತಿದ್ದವರು. ಕ್ಲುಪ್ತ ಕಾಲದಲ್ಲಿ ಮಯೂರನಿಗೆ ತಾನೊಬ್ಬ ನಾಡಾಡಿಯಲ್ಲ, ಬ್ರಾಹ್ಮಣನೂ ಅಲ್ಲ-ಬನವಾಸಿಯ ರಾಜವಂಶದ ಕುಡಿಯೆಂಬುದು ಗೊತ್ತಾಗುತ್ತದೆ. ಮೇಲಿನ ಮೂವರ ಮಂತ್ರ-ತಂತ್ರಗಳಿಂದಲೂ ಬನವಾಸಿಯ ವಿಧೇಯ ಪ್ರಜೆಗಳ ಸಹಕಾರ, ಸ್ವಸಾಮರ್ಥ್ಯದಿಂದಲೂ ಮಯೂರನು ಪಲ್ಲವರ ಒಂದೊಂದೇ ಕಟ್ಟು ಗಳನ್ನು ಸಡಿಲಿಸುವನು. ದೊಂಬರವನ ಹಾಗೆ, ನೀಲಕಂಠ ಗುಪ್ತನೆಂಬ ವಣಿಜನ ಹಾಗೆ ವೇಷಾಂತರಿಸಿಕೊಂಡು, ಮಯೂರನು ಪಲ್ಲವರಿಗೂ ಪಲ್ಲವಾಧಿಕಾರಿಗಳಿಗೂ ಪ್ರಿಯ ನಾಗಿದ್ದು ಹೊತ್ತು ಸಾಧಿಸಿ, ಶ್ರೀಶೈಲ, ಬನವಾಸಿಗಳನ್ನು ಹಿಡಿದು ಬಿಡುವನು. ಹೆಚ್ಚು ಸದ್ದು ಗದ್ದಲಗಳಿಲ್ಲದೆ, ರಕ್ತಪಾತವೂ ಇಲ್ಲದೆ ಪಲ್ಲವ ಸೇನೆ ಸೋಲೊಪ್ಪುವಂತೆ ಮಾಡು ವನು. ಹಾಗೆಯೇ ಒಂದು ಸಾಹಸಪ್ರಸಂಗದಲ್ಲಿ, ಪಲ್ಲವ ರಾಜಕುಮಾರಿ ಪ್ರೇಮಾವತಿಯ ದರ್ಶನವೂ ಮಯೂರನಿಗೆ ಆಗಿರುತ್ತದೆ. ಈ ದರ್ಶನವು ಅವರ ನಡುವೆ ಪ್ರಣಯ ಬೀಜ ವನ್ನೂ ಬಿತ್ತುತ್ತದೆ. ಮುಂದೆ ಮಯೂರನು ಪ್ರೇಮಾವತಿಯನ್ನು ವಿವಾಹವಾದಾಗ, ಬನವಾಸಿ-ಕಾಂಚೀಪುರಗಳ ನಡುವೆ ಬಹುಕಾಲದಿಂದ ಏಳುತ್ತಿದ್ದ ವೈರಾಗ್ನಿಧೂಮವು ವಿವಾಹಮಂಗಲದ ಧೂಪ ಧೂಮ ಮಾಲೆಯಾಗಿ ಪರಿವರ್ತನೆ ಹೊಂದುತ್ತದೆ.

ಈ ಕಾದಂಬರಿಯಲ್ಲಿ ನಾವು ಮುಖ್ಯವಾಗಿ ಕಂಡು ಮೆಚ್ಚಬೇಕಾದ್ದು ಇತಿಹಾಸದ ಹಂದರದಲ್ಲಿ ದೇವುಡು ಅವರ ಕಲ್ಪನಾ ವಿಲಾಸವು ಎಷ್ಟು ಸೊಗಸಾಗಿ ಹಬ್ಬಿ ಹರಿದಿದೆ ಎಂಬುದನ್ನು. ಹೆಜ್ಜೆ ಹೆಜ್ಜೆಗೂ ಕುತೂಹಲಕಾರಿ ಸನ್ನಿವೇಶಗಳಿವೆ, ರೋಮಾಂಚನಕಾರಿ ಘಟನಾವಳಿಯಿದೆ. ಕಿಚ್ಚಿನಕಿಡಿ ಮಯೂರನ ಸಾಹಸ ಜೀವನ, ಗರಡಿ ಮನೆಯ ಜಟ್ಟಿ ಯಾಳುಗಳ ಪಟ್ಟು-ವರಸೆ, ಕಳ್ಳರ ಕೂಟದ ರಹಸ್ಯ ಕಾರ್ಯಭಾರ, ದೊಂಬರಾಟದವನ ಅದ್ಭುತ ಹಸ್ತಲಾಘವ, ನೀಲಕಂಠ ಗುಪ್ತನ ತಂತ್ರಕೌಶಲ್ಯ, ಶ್ರೀಶೈಲ-ಬನವಾಸಿಗಳಲ್ಲಿ ಜನರ ಸಂಭ್ರಮದ ಓಡಾಟ,ಅವರ ಮಾತು-ಕತೆ,ಸಂಶಯ-ಆತಂಕ, ಹಾಗೆಯೇ ಷಡಾನನ ಶರ್ಮ, ನರಸಿಂಹ ಭಕ್ತ, ವೀರಶರ್ಮ, ಈಶಭಟ್ಟರ ಛದ್ಮಜೀವನ-ಇವೆಲ್ಲವೂ ಓದುಗರ ಮೈಯ್ಯುವಿರನ್ನು ನಿಮಿಷ ನಿಮಿಷಕ್ಕೂ ನಿಮಿರಿಸುವಂತೆ ವಿವೃತವಾಗಿವೆ. ವಾಚಕನು ಈ ಲೋಕವನ್ನೇ ಮರೆತು ಪಲ್ಲವರ ಕಾಂಚಿಯಲ್ಲಿ, ಕದಂಬರ ಬನವಾಸಿಯಲ್ಲಿ ಓಡಾಡಿದಂತೆ ಭ್ರಮಿಸುತ್ತಾನೆ. ಐತಿಹಾಸಿಕ ಕಾದಂಬರಿಯ ಗೆಲವಿನ ಗುಟ್ಟಿರುವುದು ವಾತಾವರಣ ಸೃಷ್ಟಿಯಲ್ಲಿ. ಈ ಕಾದಂಬರಿಯಲ್ಲಿ ಅಂತಹದೊಂದು ವಾತಾವರಣವಿದೆ. ಕಾದಂಬರಿ ಯನ್ನು ಓದಿ ಮುಗಿಸಿದ ಮೇಲೆ ಇದು ' ಕನಸೋ ಎಚ್ಚರವೋ ' ಎಂದು ಕಣ್ಣು ಹೊಸಕಿ ಕೊಳ್ಳಬೇಕಾಗುತ್ತದೆ !

ಇನ್ನು ಕಾದಂಬರಿಯ ವಿವಿಧ ಭೂಮಿಕೆಗಳ ಚಿತ್ರಣವೂ ಹಾಗೆಯೇ-ಖಚಿತ,

ಸುಂದರ. ನಾಯಕ–ಮಯೂರವರ್ಮನ ತೇಜೋರಾಶಿ,ರಂಗಾಜೆಟ್ಟಿಯ ಮನೋದಾರ್ಢ್ಯ, ಸ್ಥಾನ ಭ್ರಷ್ಟ ಮಂತ್ರಿ, ಸೈನ್ಯಾಧಿಪತಿ, ರಾಜಪುರೋಹಿತರ ರಾಜಭಕ್ತಿ, ಕರ್ತವ್ಯನಿಷ್ಠೆ ನಿಶ್ಚಲ ಧ್ಯೇಯ, ಪಲ್ಲವ ರಾಜಕುಮಾರರ ದರ್ಪ ಆಟೋಪ ಅಭಿಮಾನ ಭಂಗ, ಅಧಿಕಾರಿ ಸಾಮಂತರ ನಿಷ್ಕ್ರಿಯತೆ, ವಿವೇಕಹೀನತೆ, ರಾಜಕುಮಾರಿ ಪ್ರೇಮಾವತಿಯ ಪ್ರೇಮಲ ಹೃದಯ, ಕೋಮಲಭಾವ–ಇವೆಲ್ಲವೂ ಚಲಚ್ಚಿತ್ರದಂತೆ ಒಂದೊಂದಾಗಿ ತೆರೆಯುತ್ತಾ, ವಾಚಕನನ್ನು ಮೋಹಗೊಳಿಸುತ್ತವೆ. “ರಾಜಾ ಪ್ರತ್ಯಕ್ಷ ದೇವತಾಃ” ಎಂಬ ನಂಬಿಕೆಯ ಕಾಲ, ಜನ ಜೀವನಗಳೂ ಇಲ್ಲಿ ಹೃದಯಸ್ಪರ್ಶಿಯಾಗಿ ನಿರೂಪಿತವಾಗಿವೆ.

ದೇವುಡು ಅವರ ಭಾಷೆಯ ಸೊಬಗು, ಶೈಲಿಯ ಹರಿತಗಳಂತೂ ಈ ಕಾದಂಬರಿಯ ಅತ್ಯುತ್ತಮ ಭಾಗ, ಜೀವಾಳವೆಂದರೂ ಸಲ್ಲುತ್ತದೆ. ಕಾದಂಬರಿಯ ಆರಂಭವೇ ನಾಟಕೀಯವಾಗಿದೆ.–“ಗುದ್ದಾಟವು ಬಲು ಸೊಗಸಾಗಿದ್ದಿತು. ಹರೆಯದವರು ಹೊಗಳುವುದಿರಲಿ, ಮೀಸೆಗಳು ಬೆಳ್ಳಗಾದವರೂ ‘ಭಲೆ’ ಎಂದು ತಲೆದೂಗುವಂತಿದ್ದಿತು”–ಆರಂಭದ ಈ ಆಕರ್ಷಣೆ ಹಂತ ಹಂತವಾಗಿ ಏರುತ್ತಾ ಹೋಗಿ, ಭವ್ಯಮಂದಿರದ ಸುಂದರ ಗೋಪುರದಂತೆ ಮಯೂರ–ಪ್ರೇಮಾವತಿಯರ ಸರಸ ಸಲ್ಲಾಪದಲ್ಲಿ ಮುಗಿಲು ಮುಟ್ಟಿ ಉಪಸಂಹಾರಗೊಳ್ಳುತ್ತದೆ! ಒಮ್ಮೊಮ್ಮೆ ಒಂದೆರಡು ಪದಪುಂಜ, ಒಮ್ಮೊಮ್ಮೆ ಸುದೀರ್ಘ ವಾಕ್ಯಖಂಡಗಳಿಂದ ದೇವುಡು ಒಂದು ಚಿತ್ರವನ್ನು ರೇಖಿಸುತ್ತಾರೆ, ಸನ್ನಿವೇಶವನ್ನು ವಿವರಿಸುತ್ತಾರೆ. ಇಲ್ಲಿಯ ಹಲವು ವಾಕ್ಯಗಳು ಗಾದೆಗಳಂತಾದರೆ ಇನ್ನೆಷ್ಟೋ ಸಂವಾದ ಪ್ರಸಂಗಗಳು ನಾಟಕೋಚಿತವಾಗಿವೆ. ಅಲ್ಲಲ್ಲಿ ದೇವುಡುರವರ ಅಗಾಧ ಜೀವನಾನುಭವಕ್ಕೂ ಅಪಾರವಾದ ಶಾಸ್ತ್ರಪಾಂಡಿತ್ಯಕ್ಕೂ ಸುಂದರವಾದ ನಿದರ್ಶನಗಳು ಎದುರಾಗುತ್ತವೆ.–ಹೀಗೆ ‘ಮಯೂರ’ ಕಾದಂಬರಿಯದ್ದು ಸಮ್ಮಿಶ್ರ ಸೌಂದರ್ಯ; ಖಂಡಿತವಾಗಿಯೂ ಇದೊಂದು ಬಹುಧಾಪ್ಯೈಕ ಸಮಾರಾಧನ.

ಅ. ನ. ಕೃ, ರಂ. ಶ್ರೀ. ಮುಗಳಿ, ಕೀರ್ತಿನಾಥ ಕುರ್ತುಕೋಟಿಯವರೇ ಮುಂತಾದ ಸಾಹಿತ್ಯ–ವಿಮರ್ಶಕರು ‘ಮಯೂರ’ದ ಬಗೆಗೆ ಇಡಿಯಾಗಿಯೋ ಅಥವಾ ಅದರ ವಿವಿಧಾಂಗಗಳನ್ನು ಕುರಿತೋ ಮೆಚ್ಚು ನುಡಿಗಳನ್ನು ಆಡಿದ್ದಾರೆ. 1919 ರ ಸುಮಾರಿನ ತಮ್ಮದೊಂದು ಉಪನ್ಯಾಸದಲ್ಲಿ ದಿ| ಎ. ಆರ್. ಕೃಷ್ಣಶಾಸ್ತ್ರಿಗಳು, “ಬಂಗಾಳಿಗಳು ‘ಜಯಕಾಳಿ’ ಎನ್ನುವರು; ರಾಜಪುತ್ರರು ‘ಏಕಲಿಂಗೇಶ್ವರಕೀ ಜಯ’ ಎನ್ನುವರು; ಮರಾಠಿಯವರು ‘ಜಯ ಭವಾನಿ’ ಎನ್ನುವರು; ಕನ್ನಡಿಗರಾದ ನಾವು ಏನೆನ್ನಬೇಕು?” ಎಂದು ವಿಷಾದದಿಂದ ಪ್ರಶ್ನಿಸಿದ್ದರು.–‘ಮಯೂರ’ದಂತಹ ಕಾದಂಬರಿಗಳನ್ನೋದಿದವರೆ ಕನ್ನಡಿಗರಿಗೂ ತಮ್ಮ ‘ಗತವೈಭವ’ದ ಸ್ಮರಣೆಯಾದೀತು. ಪೂರ್ವಜರ ದಿವ್ಯ ಚರಿತ್ರೆಯ ಬೆಳಕಿನಲ್ಲಿ ಅವರು ನಡೆದರೆ ಕರ್ನಾಟಕದ ವೈಭವವು ಮತ್ತೊಮ್ಮೆ ‘ಅನಗತವಾದೀತು; ಆಗ ಕನ್ನಡಿಗ ಎದೆ ಹಿಗ್ಗಿಸಿ, ಕೊರಲುಬ್ಬಿಸಿ ‘ಜಯ ಭುವನೇಶ್ವರೀ’ ಎನ್ನಬಹುದು.

ಈಗೀಗ ಕನ್ನಡ ಚಲಚ್ಚಿತ್ರ ನಿರ್ಮಾಪಕರ ದೃಷ್ಟಿಯು ಕನ್ನಡ ಕಾದಂಬರಿಗಳತ್ತ ಹೆಚ್ಚು ಹೆಚ್ಚಾಗಿ ಹಾಯುತ್ತಿರುವುದು ಸಂತೋಷದ ಸಂಗತಿ. ಈಗಾಗಲೇ ಹತ್ತಾರು

ಕಾದಂಬರಿಗಳು ಬೆಳ್ಳಿ ಪರದೆಯ ಮೇಲೆ ಬಂದಿವೆ, ನಿರ್ಮಾಪಕರ ಬೊಕ್ಕಸಕ್ಕೆ ಸಾಕಷ್ಟು ಚಿನ್ನ-ಬೆಳ್ಳಿಯನ್ನು ತಂದೂ ಇವೆ!–'ಗಲ್ಲಾಪೆಟ್ಟಿಗೆ' ತುಂಬಲೆಂದು ಮೂಲ ಕಾದಂಬರಿಗಳಲ್ಲಿ ಇಲ್ಲದ ಗುಲ್ಲು ಗದ್ದಲಗಳನ್ನು ಸೃಷ್ಟಿಸಿ ಚಿತ್ರಿಸುವ ಬುದ್ಧಿವಂತಿಕೆಯನ್ನು ಕೆಲ ನಿರ್ಮಾತೃಗಳು ಪ್ರದರ್ಶಿಸುವುದುಂಟು. ಹಾಗೆ ಮಾಡಿದರೆ ಚಲಚ್ಚಿತ್ರಕ್ಕೆ ಕಾದಂಬರಿಯ ಹೆಸರೇನೋ ಉಳಿಯುತ್ತದೆ; ಉಸಿರು ಮಾತ್ರ ಆರಿರುತ್ತದೆ. ದೇವುಡರ 'ಮಯೂರ'ವೂ ಚಲಚ್ಚಿತ್ರವಾಗಲಿದೆಯೆಂಬ ಸುದ್ದಿಯಿದೆ. ಮೂಲದ ಸತ್ವ ಸ್ವತ್ತುಗಳನ್ನು ಉಳಿಸಿಕೊಂಡು 'ಮಯೂರ'ವೂ "ಚಿತ್ರಕಾಯ ಪ್ರವೇಶ" ಮಾಡಲಿ ಎಂದು ಹಾರೈಸಬಹುದಲ್ಲವೇ?*

---

*ಈ ಲೇಖನವು ಪ್ರಕಟವಾದ ಕೆಲವೇ ತಿಂಗಳಲ್ಲಿ 'ಮಯೂರ'ದ ಚಲಚ್ಚಿತ್ರೀಕರಣವಾಗಿ ಅಭೂತಪೂರ್ವ ಯಶಸ್ಸನ್ನು ಪಡೆಯಿತು.

## ೧೫. ತೀ. ನಂ. ಶ್ರೀಯವರ 'ಒಲುಮೆ'

ದಿ| ತೀ. ನಂ. ಶ್ರೀಕಂಠಯ್ಯನವರು ಕನ್ನಡದ ಕೆಲವೇ ಮುಂದಿ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರೆಂದು ಹೆಸರಾದವರು ; ಸಮರ್ಥ ಬೋಧಕರಾಗಿ ನೂರಾರು ಜನ ಶಿಷ್ಯರನ್ನು ಸಂಪಾದಿಸಿದವರು ; ಬಿ. ಎಂ. ಶ್ರೀಕಂಠಯ್ಯನವರ ಗರಡಿಯಲ್ಲಿ ಪಳಗಿ ಅವರ ಘನಪರಂಪರೆಯನ್ನೇ ಮುಂದೊತ್ತಿ ಯಶಶ್ಶರೀರಿಗಳಾದವರು. "ಭಾರತೀಯ ಕಾವ್ಯಮೀಮಾಂಸೆ" ಎಂಬ "ಆಚಾರ್ಯಕೃತಿ", ಅನನ್ಯವಾದ ಕನ್ನಡ ಮಧ್ಯಮ ವ್ಯಾಕರಣ, 'ಪಂಪ', 'ಕಾವ್ಯಸಮೀಕ್ಷೆ,' 'ಸಮಾಲೋಕನ', 'ಕಾವ್ಯಾನುಭವ' ಗಳಂತಹ ರೋಚಕ ವಿಮರ್ಶ ಗ್ರಂಥಗಳು, 'ಮುದ್ರಾರಾಕ್ಷಸ'ದ ಸರಸ ಸಂಗ್ರಹಾನುವಾದ, 'ನಂಟರು' ಎಂಬ ಹೃದ್ಯವಾದ ಗದ್ಯಪ್ರಬಂಧಸಂಕಲನ, ಮೂರು ಸಂಪಾದಿತ ಕಾವ್ಯಗಳು–ಇವು ತೀ. ನಂ. ಶ್ರೀಯವರ ಪ್ರತಿಭಾ–ಖನಿಯಿಂದ ಸಿಡಿದು ಬಂದ ಅಮೂಲ್ಯ ರತ್ನಗಳು. ಸಂಸ್ಕೃತದ ವಿವಿಧ ಮೂಲಗಳಿಂದಲೂ ಆರಿಸಿ ಅವರು ಅನುವಾದಿಸಿದ 'ಬಿಡಿಮುತ್ತು' ಎಂಬುದೂ ಈ ಮೇಲಿನ ಕೃತಿರತ್ನ ಮಾಲಿಕೆಯಲ್ಲಿ ಸೇರಬಲ್ಲ ಒಂದು ದೊಡ್ಡ ಮುತ್ತು.

ತೀ. ನಂ. ಶ್ರೀಯವರ ಹೆಸರನ್ನು ಕೇಳಿದವರು ಹಲವರು ; ಅವರು ಉದ್ದಾಮ ಪಂಡಿತರೆಂದು ತಿಳಿದವರು ಹಲವರು. ಆದರೆ ಅವರು ಬಹುಕಾಲದ ಹಿಂದೆಯೇ ಒಂದು ಪ್ರೇಮಗೀತೆಗಳ ಸಂಗ್ರಹವನ್ನು ಪ್ರಕಟಿಸಿದ್ದರು ಎಂಬುದನ್ನು ತಿಳಿದವರು ಕೆಲವರು ಮಾತ್ರ. ಹೊಸತಾಗಿ ತಿಳಿದವರು ಆಶ್ಚರ್ಯಪಡುವುದೂ ಸಹಜವೇ! ಏಕೆಂದರೆ 'ಪಾಂಡಿತ್ಯ' ಬೇರೆ, 'ಕವಿತ್ವ' ಬೇರೆ ಎಂಬುದು ಇತ್ತೀಚಿನ ಕೆಲವರ ಅಭಿಪ್ರಾಯ. ಪಾಂಡಿತ್ಯವು ಶುಷ್ಕ, ಕವಿತ್ವವು ಆರ್ದ್ರ, ಆದುದರಿಂದ ಶುಷ್ಕ ಪಾಂಡಿತ್ಯ ವೃಕ್ಷದಲ್ಲಿ ಮಧುರ ಕವಿತಾಪುಷ್ಪ ಅರಳಲಾರದೆಂಬುದು ಈ ಭಾವದ ಸಾರ. ಆದರೆ 'ಪಂಡಿತ' ಮತ್ತು 'ಕವಿ' ಎಂಬುದು ಏಕಾರ್ಥಕ (ಉದಾ: 'ಕಿಂ ಕರ್ಮ ಕಿಮಕರ್ಮೇತಿ–ಕವಯೋಽಪ್ಯತ್ರಮೋಹಿತಾಃ' –ಗೀತೆ. ಇಲ್ಲಿ ಕವಿಯೆಂದರೆ ಪಂಡಿತನೆಂದೇ ಅರ್ಥ) ಶಬ್ದಗಳೆಂಬುದನ್ನು ತಿಳಿದುಕೊಂಡಾಗ ಪೂರ್ವಗ್ರಹಗಳೆಲ್ಲ ದೂರವಾಗುವುವು. ತೀ. ನಂ. ಶ್ರೀಯವರು ಇವೆರಡೂ ಒಂದೇ ವ್ಯಕ್ತಿಯಲ್ಲಿ ಇರಬಲ್ಲ ಗುಣ ವಿಶೇಷಗಳು ಎಂಬುದಕ್ಕೆ ನಿದರ್ಶನವಾಗಿ ಜೀವಿಸಿದ್ದವರು.

1932ರಲ್ಲಿ, ತಮ್ಮ ಇಪ್ಪತ್ತಾರರ ತರುಣ ಪ್ರಾಯದಲ್ಲಿ ತೀ. ನಂ. ಶ್ರೀಯವರು ಪ್ರಕಟಿಸಿದ ಪ್ರೇಮ ಗೀತಗಳ ಆ ಸಂಗ್ರಹವೇ 'ಒಲುಮೆ'. ಅದೇ ಅದರ ಹಿರಿಮೆಯಲ್ಲ. "ಹೊಸಗನ್ನಡ ಸಾಹಿತ್ಯದಲ್ಲಿ ಪ್ರೇಮಗೀತಗಳ ಹೊಸ ಯುಗವನ್ನೇ ಮೊತ್ತಮೊದಲು ಸಾರಿ ತಂದ ಉತ್ಕೃಷ್ಟ ಕೃತಿ" (ಎಚ್. ಎಂ. ಶಂಕರನಾರಾಯಣ ರಾವ್) "ಹೊಸಗನ್ನಡದಲ್ಲಿ ಪ್ರೇಮಗೀತಗಳಿಗೆಂದೇ ಮೀಸಲಾದ ಪುಸ್ತಕಗಳಲ್ಲಿ ಅದೇ ಮೊದಲನೆಯದು". (ದೇ. ಜವರೇಗೌಡ) ; 'ಒಲುಮೆ' ಮೊದಲಬಾರಿ ಪ್ರಕಟವಾದ ಅನಂತರ ಈ ನಲ್ವತ್ತು ವರ್ಷಗಳಲ್ಲಿ ಕನ್ನಡದ ಕವಿಪುಂಗವರನೇಕರು (ಪ್ರಾಯಃ ಅಪವಾದವೇ ಇಲ್ಲದಂತೆ ಎಲ್ಲರೂ

ಪ್ರೇಮಗೀತಗಳನ್ನು ಬರೆದಿದ್ದಾರೆ, ಪ್ರಕಟಿಸಿದ್ದಾರೆ. ಅವುಗಳಲ್ಲಿ ಹಲವು ಹತ್ತು-ನೂರು ಕಾಲ ನಿಲ್ಲುವ, ಬೆಲೆಬಾಳುವ ಕೃತಿಗಳೆಂಬುದೂ ನಿಸ್ಸಂದೇಹ. ನೆರೆ ನೀರು ಬರುವಾಗ ದೊಡ್ಡದು-ಸಣ್ಣದು, ಒಳ್ಳೆಯದು-ಕೆಟ್ಟದು-ಎಂಬ ತಾರತಮ್ಯವಿಲ್ಲದೆ ಎಲ್ಲವೂ ಕೊಚ್ಚಿಕೊಂಡು ಹೋಗುವುದಿದೆ. ಪ್ರೇಮಗೀತಗಳ ಮಹಾಪ್ರವಾಹದಲ್ಲಿ, ಭಿನ್ನರುಚಿಯ ಈ ಕಾಲದಲ್ಲಿ ತೀ. ನಂ. ಶ್ರೀಯವರ ಸಂಗ್ರಹವು ತೇಲಿಹೋಗದಿದ್ದರೂ ಕಣ್ಮರೆಯಾಗಿದೆ. ಅದರ ಗುಣಮಟ್ಟ ಕಡಮೆಯಲ್ಲದಿದ್ದರೂ ಬೇಡಿಕೆ ಇಳಿದುಹೋಗಿದೆ.

ತೀ. ನಂ. ಶ್ರೀಯವರಲ್ಲಿ ರಸಜ್ಞತೆ, ಕಾವ್ಯಕರ್ಮ ಕುಶಲತೆ ಧಾರಾಳವಾಗಿಯೇ ಇತ್ತು ಎಂಬುದನ್ನು ಅವರು ಬಿಡಿಬಿಡಿಯಾಗಿ ಬರೆದ 'ದಂತದ ಬಾಚಣಿಗೆ', 'ಕನ್ನಡಿಗನ ಕೊರಗು', 'ಸ್ವಾಗತಗೀತ' (ಕಿರಿಯ ಕಾಣಿಕೆ, ಕನ್ನಡದ ಬಾವುಟ) ಮುಂತಾದುವು ಎತ್ತಿ ತೋರಿವೆ. ಶೃಂಗಾರ ರಸಿಕತೆಗೂ ಆ ವಿದ್ವತ್ಕವಿ ವಿಮುಖನಾಗದೆ, ತೆರೆಗೈಗಳಿಂದ ಸ್ವಾಗತಿಸಿದ್ದಾನೆ ಎಂಬುದು ಎಷ್ಟು ಆಶ್ಚರ್ಯಕರವೋ ಅಷ್ಟೇ ಸಂತೋಷದ ಸಂಗತಿಯೂ ಹೌದು. ಏಕೆಂದರೆ ನಮ್ಮಲ್ಲಿ ಶೃಂಗಾರ ರಸಚಿತ್ರಣವೆಂದರೆ ಒಂದೋ ಹಸಿ ಇಲ್ಲವೇ ಬಿಸಿಯಾಗಿರುವುದು ಸಾಮಾನ್ಯ. ತೀ. ನಂ. ಶ್ರೀಯವರು ಈ ಎರಡೂ ಅತಿರೇಕಗಳ ನಡುವಿನಿಂದ ಪಾರಾಗಿ, ಹಸಿ-ಬಿಸಿಗಳಿಲ್ಲದ ಸುಖೋಷ್ಣವಾದೊಂದು ಶೃಂಗಾರ ರಸ ಪ್ರವಾಹವನ್ನು ತಮ್ಮ 'ಒಲುಮೆ'ಯಲ್ಲಿ ಹರಿಯಿಸಿದ್ದಾರೆ. 'ಒಲುಮೆ'ಯ ದ್ವಿತೀಯ ಮುದ್ರಣದಲ್ಲಿ ಅವರು "ಹೊಸಗನ್ನಡದ ಕಾವ್ಯವಾಹಿನಿಯಲ್ಲಿ ಪ್ರೇಮಗೀತಗಳಿಗೇ ಮೀಸಲಾಗಿ ಹೊರಬಿದ್ದ ಮೊದಮೊದಲಿನ ಪುಸ್ತಕಗಳಲ್ಲಿ 'ಒಲುಮೆ' ಒಂದೆಂದು ನನ್ನ ಮಿತ್ರರಲ್ಲಿ ಕೆಲವರು ಜ್ಞಾಪಿಸುವುದುಂಟು. ಇದು ನಿಜವಾದ ಪಕ್ಷದಲ್ಲಿ ಇದಿಷ್ಟೇ ಈ ಕೃತಿಯ ವಿಶೇಷವೆಂದು ಈ ಕಾಲಾಂತರದಲ್ಲಿ ನನಗೆ ತೋರುತ್ತಿದೆ....ರಸದ ದೃಷ್ಟಿಯಿಂದ ಅಲ್ಲದಿದ್ದರೆ ಕಾಲದ ದೃಷ್ಟಿಯಿಂದಲಾದರೂ ಈ ಪದ್ಯಗಳನ್ನು ಅವಲೋಕಿಸುವ ಇಚ್ಛೆ ಕಾವ್ಯಪ್ರೇಮಿಗಳಿಗೆ ಹುಟ್ಟ"ಲೆಂದು ಆಶಿಸಿದ್ದಾರೆ. 'ಒಲುಮೆ'ಗೆ ಕಾಲ, ರಸ ಈ ಎರಡು ದೃಷ್ಟಿಯಿಂದಲೂ ಮಹತ್ವವಿದೆ. 'ರಸದ ಮಹತ್ವವಿಲ್ಲ' ಎನ್ನುವವರು ಕಾಲವನ್ನಾದರೂ ಮರೆಯದೆ ಗುರುತಿಸಬೇಕಾಗುತ್ತದೆ. ಹೊಸಗನ್ನಡದಲ್ಲಿ ಪ್ರೇಮಗೀತಗಳ ಮೊತ್ತಮೊದಲ ಸಂಗ್ರಹ ಎಂಬ ಐತಿಹಾಸಿಕ ಸಂಗತಿಯೂ ಸಣ್ಣ ಗೌರವವೇನಲ್ಲ.

'ಒಲುಮೆ'ಯಲ್ಲಿ ಇಪ್ಪತ್ತಾರು ಸ್ವತಂತ್ರ ಕವನಗಳಿವೆ. ಕೊನೆಯಲ್ಲಿ ಗಾಥಾಸಪ್ತಶತಿಯಿಂದ ಆರಿಸಿದ ಹದಿನೆಂಟು, ಗ್ರೀಕಿನಿಂದ ಎರಡು, ಇಂಗ್ಲಿಷಿನಿಂದ ಎರಡು ಪದ್ಯಗಳ ಅನುವಾದವಿದೆ. ಎಲ್ಲಕ್ಕೂ ಪ್ರೇಮ- ಪ್ರೇಮದ ನಾನಾ ಮುಖಗಳೇ ವಸ್ತು ಎಂಬುದನ್ನು ಹೇಳಬೇಕಿಲ್ಲ. ಇಲ್ಲಿಯ ಗೀತಗಳಲ್ಲಿ ಮಿಲನ ಸುಖಕ್ಕಿಂತ ವಿರಹವೇದನೆಯನ್ನು ವರ್ಣಿಸುವವುಗಳೇ ಹೆಚ್ಚು. ಅಳಿದ ಒಲುಮೆ-ಅದರ ನೆನಪು, ಕೊರಗು ಇಲ್ಲಿ ಸ್ಥಾಯಿಯಾಗಿದೆ. ಸಂಭೋಗಕ್ಕಿಂತ ವಿಪ್ರಲಂಭ ಶೃಂಗಾರದಲ್ಲಿ ನಮ್ಮ ಪ್ರಾಚೀನರು ಹೆಚ್ಚಿನ ಸ್ವಾರಸ್ಯವನ್ನು ಕಂಡದ್ದಿದೆ. ತೀ. ನಂ. ಶ್ರೀಯವರೂ ಎರಡನೆಯ ದಾರಿಯನ್ನು ಮೆಚ್ಚಿದಂತಿದೆ. ಶೃಂಗಾರ ವರ್ಣನೆಯಲ್ಲಿ ತೂಕತಪ್ಪುವ ಸಂದರ್ಭಗಳೇ ಹೆಚ್ಚಾಗಿರುವಾಗ,ಸಂಭೋಗ ಶೃಂಗಾರವಂತೂ

ಹೇಳುವುದೇ ಬೇಡ, ಜೋಲಿ ಹೊಡೆಯುವುದೇ ಖಂಡಿತ. ಆದುದರಿಂದಲೇ ತೀ. ನಂ. ಶ್ರೀ ಎಚ್ಚರಿಕೆಯಿಂದ ವಿರಹ-ವಿಪ್ರಲಂಭವನ್ನೇ ಚಿತ್ರಿಸಿ, ವರ್ಣನೆಯಲ್ಲಿ ವಾಚ್ಯವಾಗಿರುವುದಕ್ಕಿಂತ ಸೂಚ್ಯವಾಗಿರುವುದರಲ್ಲೇ ಪಕ್ಷಪಾತವನ್ನು ತೋರಿ ತಮ್ಮ ಕಲೆಗಾರಿಕೆಯನ್ನು ಮೆರೆದಿದ್ದಾರೆ.

ಸಂಗ್ರಹದಲ್ಲಿರುವ ಎಲ್ಲ ಕವಿತೆಗಳನ್ನೂ ಪ್ರತ್ಯೇಕವಾಗಿ ಅವಲೋಕಿಸಲು ಇಲ್ಲಿ ಅವಕಾಶವಿಲ್ಲ. ಇಲ್ಲಿ ಮಾಡಬಹುದಾದದ್ದು ಸ್ಥೂಲ ನಿರ್ದೇಶನ ಮಾತ್ರ : ಒಮ್ಮೆ ಕಂಡು ಮೆಚ್ಚಿದ ಹೆಣ್ಣು ಕಣ್ಣು ಮುಂದಿಲ್ಲದಾಗ ಕವಿಮನಸ್ಸು ತನ್ನಲ್ಲಿ ತಾನೇ ಕೇಳಿಕೊಳ್ಳುವ ಪ್ರಶ್ನೆಮಾಲಿಕೆಯೇ 'ಏಕೆ'. ಇದೇ ಸಂಗ್ರಹದ ಮೊದಲ ಕವಿತೆ. ಮತ್ತಿನದು 'ಪ್ರಥಮ ದರ್ಶನ'. ಕವಿತೆಯ ಕೊನೆಯ ಪದ್ಯ ಹೀಗಿದೆ :—

ಚೆಲುವೆಯೆಂದು ನುಡಿಯಲಾರೆ,
ಚತುರೆಯೇನೊ ತಿಳಿಯದು.
ಒಲಿದು ನನ್ನ ಹೃದಯವೆಂತು
"ಇವಳೆ ಸಾಕು" ಎಂದಿತು !

ಇಂತಹ ತೃಪ್ತಿಯಿಂದ ಮಾತ್ರ ಮಧುರ ದಾಂಪತ್ಯ ಸಾಧ್ಯ. ಈ ತೃಪ್ತಭಾವವನ್ನೇ ಮುಂದಿನ 'ಸಂಬಂಧ' ವೆಂಬ ಕವಿತೆಯಲ್ಲೂ ಕವಿ ಸ್ಪಷ್ಟಪಡಿಸುತ್ತಾನೆ–' ಎಷ್ಟೋ ಮಂದಿ ಸುಂದರಿಯರನ್ನು ಈ ಮೊದಲೇ ಕಂಡಿದ್ದೇನೆ ; ಆದರೆ ಯಾರೂ ನಿನ್ನಂತೆ ನನ್ನ ಚೈತನ್ಯವನ್ನು ಸೆರೆ ಹಿಡಿದವರಿಲ್ಲ, ಇದೊಂದು ಹೃದಯದ ಪವಾಡ !" ಹೀಗೆ ಮೆಚ್ಚಿ ಕೈ ಹಿಡಿದ ಹೆಣ್ಣು ಈಗ ಕವಿಯೆದೆಯ 'ಹೊಲಕಾಯುವ ಚದುರೆ' ಯಾಗಿದ್ದಾಳೆ ; ಬೇರಾವ ಹಕ್ಕಿಗಳೂ ಅಲ್ಲಿ ಎರಗದಿರಲೆಂದು ಕಣ್ಣನೋಟದ ಕವಣೆ ಕಲ್ಲನ್ನು ಬೀರುತ್ತಿದ್ದಾಳೆ! ಹೆಂಡತಿ ಬಳಿಗೆ ಬಂದಾಗ ಲಜ್ಜೆಯಿಂದ ಮಾತಾಡಲಾಗದೆ ಅವಳು ದೂರ ಹೋದಾಗ ಅದನ್ನೇ ನೆನೆದು ಮೆಲುಕಾಡುತ್ತಾ–

ಪುಟ್ಟ ಮೈಯೊಳೆಷ್ಟು ಒಲವೊ
ಅಳೆಯ ಬಲ್ಲನೆ !

ಎಂದು ಕವಿ ಮೆಚ್ಚಿಕೊಳ್ಳುತ್ತಾನೆ. (ಹೂವಿನಸರ)

ಬೀಳ್ಕೊಡಲು ಬಂದ ನಲ್ಲೆಯನ್ನು ತಬ್ಬಿ ಮುದ್ದಿಸದಿದ್ದುದಕ್ಕಾಗಿ ಪಶ್ಚಾತ್ತಾಪ, ವಿರಹದಿಂದ ಗಂಡಿನ ಕಣ್ಣಿಗೆ ನಿದ್ದೆ ಹತ್ತದುದನ್ನು ಹೇಳುವ 'ಪ್ರಶ್ನೆ-ಉತ್ತರ', ಕಾದಲೆಯಿಂದ ದೂರ ಹೋಗಬೇಕಾದಾಗ, ಕಾದಲನು ಕೇಳುವ 'ಪಾಥೇಯ' ಇವೆಲ್ಲವೂ ಒಂದೊಂದು ಚೆಲುವಿನದ್ದಾದರೆ ನಾಲ್ಕೇ ಪಂಕ್ತಿಗಳಿರುವ 'ಹೊರಡುವಾಗ' ಎಂಬ "ಮುಕ್ತಕ"ದ ಸೊಗಸೇ ಸೊಗಸು :

ಹಿರಿಯರಿರುವರೆಂದು ನಾಚಿ ನುಡಿಯಲಾರದವಳ ಕೊರಗು
ತೆರೆದ ತುಟಿಯ ನಡುಕ, ಇನಿಸು ಬೆನತು ಕೆಂಪಗಾದ ಕೆನ್ನೆ
ನೀರ ತೆರೆಯು ಹಿಂದೆ ಕಣ್ಣು ಬೀರುತ್ತಿರುವ ಬಯಕೆ ನೋಟ!
ಊರಿಗಿದನು ನೋಡಿ ನೋಡಿ ಹೊರಡಲಾರೆ, ನಿಲ್ಲಲಾರೆ !.

ಎಷ್ಟೋ ಹೆಣ್ಣುಗಳ ಸಂಕಟವೂ ಗಂಡುಗಳ ಸಂತಾಪವೂ ಇದೇ ಅಲ್ಲವೇ ?

ಗಂಡು-ಹೆಣ್ಣುಗಳ ವಿರಹವು ತಾತ್ಕಾಲಿಕವಾದರೆ ಆ ನೋವಿನಲ್ಲೂ ನಲಿವಿನ ಎಳೆಯೊಂದಿರುತ್ತದೆ. ಆದರೆ ಅದು ಶಾಶ್ವತವಾದರೆ ?-ದಾರುಣ, ಅಸಹನೀಯ. ಅಗಲಿಕೆ, ನಿರಾಸೆ, ಬಿಸಿಲು ಕುದುರೆ, ಹಿಡಿದವ್ರತ, ಉಪೇಕ್ಷಿತೆ, ಸಂಶಯ, ಏಕೆ ನಲುಗಿತು, ತನಗೆ ಮುತ್ತಾದ ಗೀತಗಳು ಈ ಬಗೆಯ ಬನ್ನವನ್ನು ಬಣ್ಣಿಸುವಂಥವು. ಅವುಗಳಲ್ಲಿ ' ಸಮಾಧಾನ 'ವೆಂಬುದು ಸುದೀರ್ಘವಾದದ್ದು. ಒಲ್ಲದ ಗಂಡಿಗೆ ಮೊಸರಲ್ಲೂ ಕಲ್ಲು ಸಿಗಬಹುದು; ಕೈ ಹಿಡಿದ ಹೆಣ್ಣು ದೂರವಾಗಿ, ದೂರದವರು ಸನಿಹಕ್ಕೆ ಬರಬಹುದು. 'ಒಲವೋ ಹಗೆಯೊ,' ಎಂಬ ಕವಿತೆ ಹೆಣ್ಣಿನ ದುಗುಡಕ್ಕೆ ಹಿಡಿದ ಕನ್ನಡಿ. ಗಂಡಿನ ವಿಪರೀತ ವರ್ತನೆಯನ್ನು ' ಒಲವೋ ಹಗೆಯೋ-ಯಾವುದಿದು ? ' ಎಂದು ಪ್ರಶ್ನಿಸುತ್ತಾ, ಅವನ ಹಗೆಯಲ್ಲೂ ನಗೆಯನ್ನು ಕಾಣುವ ಬುದ್ಧಿ-' ನನಗಾದರೊ, ಈ ಹಗೆಯೂ ಮೆಚ್ಚು ' ಎಂಬ ಶ್ರದ್ಧೆ, ಸಾಂತ್ವನಗಳು ಹೃದಯಸ್ಪರ್ಶಿಯಾಗಿವೆ. ಒಲಿದ ಗಂಡು ಗತಿಸಿದಾಗ ಹೆಣ್ಣಿನ ರುದಿತ, ಕುದಿತಗಳು ಹೀಗೆ :-

ಮನೆಗೆ ಬಂದೆ ಮನಕೆ ಬಂದೆ
ನೆನೆದ ಹಲವು ಸೊಗಸು ತಂದೆ
ಇರುಳು ಹಗಲು ನನ್ನನಿಲ್ಲಿ
ಕೊರಗಲುಳಿಸಿ ದಿವಕೆ ಸಂದೆ !

ಹೆಂಡತಿ ಸತ್ತರೆ, ಹೊಗೆ ಆರುವ ಮೊದಲೇ ಗಂಡು ಮತ್ತೆ ಮದುವೆಯಾಗಬಹುದು ; ಗಂಡ ಸತ್ತರೆ ಹೆಣ್ಣಿಗೆ ಮಾತ್ರ ಆಜೀವ ನರಕ !

' ಪ್ರೇಮ ' ವನ್ನು ದೇವತೆಯೆಂದು ಪೂಜಿಸುವರು ಹಲವರು. ಆದರೆ ಪ್ರೇಮವು ತಾರಕವಾಗುವ ಬದಲು ಮಾರಕವಾಗಿ, ' ಭೈರವ ' ನಾಗಿ ಗಂಡು-ಹೆಣ್ಣಿನ ಉಸಿರನ್ನು ಹೀರುವುದೇ ಹೆಚ್ಚು ಎಂಬ ಎಚ್ಚರವನ್ನು ಹೇಳುವ ಕವಿತೆಯೊಂದು ಕೊನೆಯಲ್ಲಿದೆ-ಅದೇ ' ಪ್ರೇಮ ಭೈರವ '. ಇದೇ ರೀತಿ, ಕಥಾತ್ಮಕವಾದ ' ನಡೆದ ಸಂಗತಿ ' ಎಂಬುದು ಮೈ ಜುಮ್ಮೆನ್ನಿಸಿ, ನೆತ್ತರು ಹೆಪ್ಪುಗಟ್ಟಿಸುವ ಕವಿತೆ. ಸತಿಪತಿಯರ ಮೊದಲೊಸಗೆಯ ದಿನವೇ, ಸತಿ ಮುಡಿದಿದ್ದ ಮಲ್ಲಿಗೆ ದಂಡೆಯಲ್ಲಿ ಅಡಗಿದ್ದ ಎಳೆನಾಗರ ಕಚ್ಚಿ ಪತಿ ಸತ್ತು ಹೋಗುವ-ಮಾದ್ರಿಯ ತೋಳತೆಕ್ಕೆಯೇ ಪಾಂಡುವಿಗೆ ಮೃತ್ಯು ಪಾಶವಾದಂಥ-ದುರಂತ ಚಿತ್ರ ಅಲ್ಲಿದೆ. ಹೀಗೆ ಪ್ರಕೃತ ಸಂಕಲನದಲ್ಲಿ ಪ್ರಣಯ, ಪಶ್ಚಾತ್ತಾಪ, ವಿರಹ, ವಿಯೋಗಗಳ ವ್ಯಾವರ್ಣನೆಯನ್ನು ಕಾಣಬಹುದು.

ಸಂಕಲನದ ಅಂತ್ಯದಲ್ಲಿ ಅನುಬಂಧದಂತೆ ಸೇರಿರುವ ಅನುವಾದ ಭಾಗದಲ್ಲೂ ಪ್ರೇಮದ ನಾನಾ ಮುಖಗಳ ನಿರೂಪಣೆಯಿದೆ. ಸಂಸ್ಕೃತದಲ್ಲಿ, ಗ್ರೀಕಿನಲ್ಲಿ, ಇಂಗ್ಲಿಷಿನಲ್ಲಿ ಶೃಂಗಾರ ರಸ ಪ್ರವಾಹವು ಬಗ್ಗಡವಾಗದೆ, ತಿಳಿಯಾಗಿ, ಶುಚಿಯಾಗಿ, ವಿಶ್ವಮೋಹಕವಾಗಿ ಹೇಗೆ ಹರಿದಿದೆ ಎಂಬುದನ್ನು ತೋರಿಸುವ ಪ್ರಯತ್ನ ಈ ಅನುವಾದಭಾಗದ್ದು. ಜಗತ್ತಿನ ಎಲ್ಲ ಜೀವಿಗಳ ಎದೆಯು ಮಿಡಿತವೊಂದೇ, ಅದನ್ನು ಆಡುವ ಭಾಷೆ ಮಾತ್ರ ಬೇರೆ-ಬೇರೆ ಎಂಬುದು ಇದರಿಂದ ವೇದ್ಯವಾಗುತ್ತದೆ.

ಕನ್ನಡದಲ್ಲಿ ಹೊಸ ಗಾಳಿಯನ್ನೂದಿದ 'ಇಂಗ್ಲಿಷ್ ಗೀತಗಳು' ಪ್ರಕಟವಾದ ತರುಣದಲ್ಲೇ 'ಒಲುಮೆ'ಯ ಗೀತ ಕುಸುಮಗಳು ಅರಳಿದುವು. ಬಿ. ಎಂ. ಶ್ರೀಯವರಿಂದಾಗಿ ಇಂಗ್ಲಿಷ್ ಛಂದೋವಿಲಾಸ ಕನ್ನಡಕ್ಕೂ ಬರುವಂತಾಯಿತು. ಅವರ ಶಿಷ್ಯ ತೀ. ನಂ. ಶ್ರೀಯವರೂ ಆ 'ಗುರುಪಥ'ವನ್ನು ಹಿಡಿದಿದ್ದರೆ ಆಶ್ಚರ್ಯವೇನಿಲ್ಲ. ತೀ. ನಂ. ಶ್ರೀಯವರ ಸಂಗ್ರಹದಲ್ಲಿ ಹಳೆ ಹೊಸ ಛಂದೋಬಂಧಗಳ ಒಂದು ಸಮ್ಮಿಶ್ರ ಸೌಂದರ್ಯವನ್ನೂ ನಾವು ಕಂಡು ಮೆಚ್ಚಬಹುದಾಗಿದೆ. (ಉದಾ-ಹೊರಡುವಾಗ, ತನಗೆ ಇತ್ಯಾದಿ) ಹಾಗೆಯೇ ಅವರ ಭಾಷೆಯೂ ಎಲ್ಲೂ ಜಿಗುಟಾಗದೆ, ಪೆಡಸಾಗದೆ ಸರಳವಾದರೂ ಅರ್ಥಭಾರವನ್ನು ಹೊರಬಲ್ಲುದಾಗಿ ಸುಂದರವಾಗಿದೆ. ಉದಾಹರಣೆಗೆ 'ನೇತ್ರ ನಟಿಯರು ಎಂಬ ಕವಿತೆಯ ಕೆಲವು ಸಾಲುಗಳನ್ನು ನೋಡಬಹುದು :

'ಮುಗುಳು ನಸುಬಿರಿದಂತೆ, ಹಾವು ಹೆಡೆ ತೆರೆದಂತೆ,
ತೊರೆಯೊಳಗೆ ಮರಿ ಮೀನು ಹೊಳಕಿ ಕೆಲಕೊಲೆದಂತೆ
ಸಂಜೆ ವಿದ್ಯುದ್ದೀಪ ಕೋಶದಲಿ ಕುಡಿ ಮಿಂಚು
ಮೂಡಿ ಕಿರಣವನೆರಚಿ ಥಳ ಥಳಿಸಿ ಹೊಳೆದಂತೆ
ಕೊರಂಬು ಹಾಯ್ದಂತೆ, ಖಡ್ಗ ಝಳಪಿಸಿದಂತೆ

ಇತ್ಯಾದಿ.

'ಒಲುಮೆ' ಯನ್ನು 'ಸಖೀಗೀತ' ಕ್ಕೋ 'ಪ್ರೇಮ ಕಾಶ್ಮೀರ' ಕ್ಕೋ 'ಮೈಸೂರು ಮಲ್ಲಿಗೆ' ಗೋ ಹೋಲಿಸಲಾಗದು. ಹಾಗೆಯೇ ಇಲ್ಲಿಯ ಎಲ್ಲ ಕವಿತೆಗಳಲ್ಲೂ " ಹಗುರಾದ ಮಾತುಗಳು, ನವುರಾದ ಭಾವಗಳು, ಚೈತ್ರ ಸಂಜೆಯಲಿ, ತೋಟದಲಿ ಮೆಲನೆಮೆಲನೆ ಸುಳಿ ಸುಳಿದು ಸೋಕುವೆಲರಿನ ಲಘು ವಿಲಾಸಗಳು "-ಇವನ್ನೂ ಕಾಣಲಾಗದು. 'ಒಲುಮೆ' ಯಲ್ಲಿ ನಾವು ಮುಖ್ಯವಾಗಿ ಗುರುತಿಸಬೇಕಾದ್ದು-ಶೃಂಗಾರವನ್ನು ಸಭ್ಯವಾಗಿ-ಸಾಧ್ಯವಾದಷ್ಟು ಚಿತ್ತಾಕರ್ಷಕವಾಗಿ ಚಿತ್ರಿಸುವ ಶ್ಲಾಘ್ಯ ಪ್ರಯತ್ನ. ಕಾಲದ ದೃಷ್ಟಿಯಿಂದಂತೂ 'ಒಲುಮೆ'ಯ ಆದ್ಯತೆಯನ್ನು ಮರೆಯುವಂತೆಯೇ ಇಲ್ಲ!

## ೧೬. ವಿ. ಸೀ. ಯವರ 'ಪಂಪಾಯಾತ್ರೆ'

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪ್ರವಾಸ ಕಥನವೆಂಬುದು ಇತ್ತೀಚಿಯ ಬೆಳೆ. ಎಂದರೆ ಕನ್ನಡಿಗರು ಪ್ರವಾಸ ಮಾಡುತ್ತಿರಲಿಲ್ಲವೆಂದಲ್ಲ. ಆದರೆ ತಮ್ಮ ಯಾತ್ರಾನುಭವಗಳನ್ನು ಬರೆದಿಡುವ ಪ್ರವೃತ್ತಿ ನಮ್ಮಲ್ಲಿ ಕಡಮೆಯಾಗಿತ್ತು. ಕನ್ನಡದಲ್ಲಿ ಮೊದಲನೆಯದೆನ್ನ ಬಹುದಾದ ಪ್ರವಾಸ ಪ್ರಬಂಧ (ಕರ್ಕಿ ವೆಂಕಟರಮಣ ಶಾಸ್ತ್ರಿಗಳ 'ದಕ್ಷಿಣ ಭಾರತ ಯಾತ್ರೆ') 1890 ರಷ್ಟು ಹಿಂದೆಯೇ ಪ್ರಕಟವಾಗಿದೆ ಎಂದು ಹೇಳುವುದಿದೆಯಾದರೂ, ಈ ಸಾಹಿತ್ಯ ವಿಶೇಷವು ಒಂದು ಮೊತ್ತವಾಗಿ ಕಳೆದ ಸುಮಾರು ಮೂವತ್ತು ವರ್ಷಗಳ ಈಚೆ ಗಷ್ಟೇ ಕಾಣಿಸಿಕೊಳ್ಳುತ್ತಿದೆ. ಊರು ನೋಡುವುದಕ್ಕೆ, ದುಡ್ಡು ಕಣ್ಣುಗಳಿದ್ದರೆ ಸಾಕಾಗ ಬಹುದು. ಆದರೆ ನೋಡಿದ್ದನ್ನು ಬರೆಯುವುದಕ್ಕೆ ಮನಸ್ಸೂ ಬೇಕು, ಕೈಯೂ ಬೇಕು. ಹಾಗಿದ್ದರೆ ಮಾತ್ರ ಕವಿ ಕಂಡದ್ದು ಓದುಗರ ಕಣ್ಣಮುಂದೆಯೂ ಸುರುಳಿ ಬಿಚ್ಚಬಹುದು, ಅವಿಲ್ಲದೆ ಹೋದರೆ ಅದೊಂದು ನೀರಸ ವರದಿಯಷ್ಟೇ ಆದೀತು!

ಕನ್ನಡನಾಡಿನಲ್ಲಿ ನೋಡಬೇಕಾದ-ನೋಡಿ ಮೆಚ್ಚಬೇಕಾದ ಹತ್ತಾರು ಐತಿಹಾಸಿಕ ಕ್ಷೇತ್ರಗಳಿವೆ; ಅಲ್ಲಿ ನೂರಾರು ಕಲಾಕೃತಿಗಳಿವೆ. ಹಳೇಬೀಡು–ಬೇಲೂರು–ಸೋಮನಾಥ ಪುರ, ಶ್ರವಣಬೆಳಗೊಳ–ಮೂಡಬಿದಿರೆ–ಕಾರ್ಕಳ, ಐಹೊಳೆ–ಪಟ್ಟದಕಲ್ಲು–ಬಾದಾಮಿ ಅಂತಹ ಕ್ಷೇತ್ರಗಳು. ಒಂದು ಕಾಲದಲ್ಲಿ ಭರತಖಂಡದಲ್ಲಿ ಸುವರ್ಣಯುಗವನ್ನೇ ತೆರೆದು, ವಿಜಯನಗರವೆಂದು ಮೆರೆದು ಈಗ ಹಾಳು ಬಿದ್ದಿರುವ ಹಂಪೆಯೂ ಅಂಥವುಗಳಲ್ಲಿ ಒಂದಾ ಗಿದೆ. ವಿದ್ಯಾರಣ್ಯರು ತಮ್ಮ ತಪೋಬಲದಿಂದ ಸ್ಥಾಪಿಸಿ, ಸಾಳ್ವ–ತುಳುವ–ಅರವೀಡು ಮನೆತನಗಳ ರಾಯರು ತಮ್ಮ ಬೆವರನ್ನೂ ನೆತ್ತರನ್ನೂ ತಳೆದು ಪೋಷಿಸಿ ಸುಮಾರು ಇನ್ನೂರ ಐವತ್ತು ವರ್ಷಗಳ ಕಾಲ ಆಳಿದ ಪುಣ್ಯಭೂಮಿ–ಕನ್ನಡದ ಗಂಡು ಮೆಟ್ಟು, ಕನ್ನಡದ ಕೀರ್ತಿಯ ಕಳಶ ವಿಜಯನಗರ. ಆದರೇನು? ಕವಿ ಭರ್ತೃಹರಿ ಎಂದಂತೆ, 'ರಾಜ್ಯ–ರಾಜ, ನಗರ–ಸೌಧ ಎಲ್ಲವೂ ಕಾಲಾಂತರದಲ್ಲಿ ಸ್ಮೃತಿಪಥದಿಂದ ಮರೆಯಾಗು ತ್ತವೆ. ಕಾಲಾಯ ತಸ್ಮೈನಮಃ!"–ವಿಜಯನಗರವೂ ಹಾಳಾಯಿತು, ಬೋಳಾ ಯಿತು; ಇಟಲಿಯ 'ಪೋಂಪೆ'ಗೆ ಕನ್ನಡದ 'ಹಂಪೆ' ಎಣೆಯಾಯಿತು. ಆದರೂ ಅದು 'ಮರೆಯಲಾಗದ ಸಾಮ್ರಾಜ್ಯ'. ಗುರುದೇವ ಠಾಕೂರರು ವರ್ಣಿಸಿದ ತಾಜಮಹಲಿ ನಂತೆ, ವಿಜಯನಗರವೂ "–ಕಾಲದ ಕೆನ್ನೆಯ ಮೇಲಣ ಕಂಬನಿ." ಇಂದಿಗೂ ಕವಿ–ಭಾವ ಕರ ಮನೋನೇತ್ರ ಕಾಲದ ತಿಮಿರ ಪಟಲವನ್ನು ಸೀಳಿ, ಅದರ ಹಿಂದಿರುವ ವಿಜಯ– ವಿದ್ಯಾನಗರವನ್ನು ಕಾಣುತ್ತದೆ. ಹಾಗೆ ಕಂಡದ್ದನ್ನು ಅವರ ನಾಲಗೆ ಬಣ್ಣಿಸುತ್ತದೆ. ಇಂತಹ ದರ್ಶನಕ್ಕೆ ನಿದರ್ಶನವೇ ವಿ. ಸೀತಾರಾಮಯ್ಯನವರ 'ಪಂಪಾಯಾತ್ರೆ'.

'ಪಂಪಾಯಾತ್ರೆ' ಮೊದಲು ಪ್ರಕಟವಾದದ್ದು 1926ರಲ್ಲಿ. ಅಲಭ್ಯವಾಗಿದ್ದ 'ಪಂಪಾಯಾತ್ರೆ' 1974ರಲ್ಲಿ ಮತ್ತೆ ಪುನರ್ಮುದ್ರಿತವಾಗಿದೆ. ಆದಿನ್ನೂ ಕನ್ನಡದಲ್ಲಿ ಪ್ರವಾಸ ಪ್ರಬಂಧಗಳು ಕಣ್ಣೊಡೆಯುತ್ತಿದ್ದ ಕಾಲ. ಆದರೆ ಮೊದಲಲ್ಲೇ ಕನ್ನಡಕ್ಕೆ

ಅದೆಂತಹ ಚಿನ್ನದ ಬೆಳಸು ಸಿಕ್ಕಿತು ! 'ಪಂಪಾಯಾತ್ರೆ'ಯ ಗಾತ್ರವೋ ಕೇವಲ ಅರವತ್ತೈದು ಪುಟ. ಈ ನಲ್ವತ್ತಾರು ವರ್ಷಗಳ ಅವಧಿಯಲ್ಲಿ ಈ ಪುಟ್ಟ ಪುಸ್ತಕವನ್ನು ಮೀರುವ ಕೃತಿ ಒಂದಾದರೂ ಬಂದಿಲ್ಲ' ಅಮೇರಿಕಾ–ರಷ್ಯಾ, ಯುರೋಪು–ಜಪಾನು ಹೀಗೆ ಸುತ್ತಿಬಂದು ಬರೆದವರಿದ್ದಾರೆ. ಅವೆಲ್ಲವೂ ಆ ಮಟ್ಟಿಗೆ ಚೆನ್ನಾಗಿಯೇ ಇವೆ. ಆದರೆ 'ಪಂಪಾಯಾತ್ರೆ' ಯ ಸೊಗಸೇ ಸೊಗಸು. 'ಬಲು ದೂರ ನೋಟವನು' ಕೇಳದೆ 'ಸಾಕು ನನಗೊಂದು ಹೆಜ್ಜೆ' ಎಂದು ವಿ.ಸೀ.ಯವರು ಕನ್ನಡದ ಗಡಿಯೊಳಗಿನ ಕ್ಷೇತ್ರ ಪರ್ಯಟನೆ, ವರ್ಣನೆಗಳಲ್ಲಿ ತೃಪ್ತರಾಗಿ, ಹಂಪೆ ಈಗ 'ಬಿದ್ದು' ಹೋಗಿದ್ದರೂ ಮತ್ತೊಮ್ಮೆ ಅದು ವಾಚಕರ ಮನೋಭೂಮಿಕೆಯಲ್ಲಿ 'ಉದ್ಬುದ್ಧ' ವಾಗುವಂತೆ ಬರೆದಿದ್ದಾರೆ. ಹಂಪೆಯ ಪ್ರಾಚೀನತೆ, ವೈಭವಗಳು ನೆನಪಿಗೆ ಬರಲೆಂದು 'ಪಂಪಾಯಾತ್ರೆ' ಎಂದು ಕರೆದಿದ್ದಾರೆ. ವಿಜಯನಗರದ ಇನ್ನೂರೈವತ್ತು ವರ್ಷಗಳ ಚರಿತ್ರೆಯನ್ನು ಅರುವತ್ತೈದು ಪುಟಗಳ ಅಲ್ಪಾವಕಾಶದಲ್ಲಿ "ಸತ್ವತಃ ಅನುಭವ ಮಾಡಿಸಿಕೊಟ್ಟ"ದ್ದಾರೆ. ಇದು ಬೆಂಕಿ ಪೆಟ್ಟಿಗೆಯೊಳಗೆ ಮಾರುದ್ದದ ಮಸ್ಲಿನ ಬಟ್ಟೆಯನ್ನು ಅಡಕಗೊಳಿಸುವ ಕುಶಲತೆಯಿಲ್ಲದೆ ಬೇರೇನೂ ಅಲ್ಲ.

'ಪಂಪಾಯಾತ್ರೆ' ಯಲ್ಲಿರುವುದು ಒಂದು ದಿನದ ಅನುಭವಗಳ ವಿವರಣೆ. ಅದರಲ್ಲಿ ಮೂರು ಭಾಗಗಳು.–ಅವನ್ನು ಸಿದ್ಧತೆ, ನೋಟ, ಕನಸು ಎಂದು ಹೆಸರಿಸಬಹುದು. ಗ್ರಂಥಕರ್ತರೂ ಅವರ ನಾಲ್ವರು ಮಾನ್ಯ ಮಿತ್ರರೂ ತಮ್ಮ ತಂಗುದಾಣದಿಂದ ಸುಮಾರು ಮಧ್ಯಾಹ್ನದ ಹೊತ್ತಿಗೆ ಹೊರಟು ಸಾಸಿವೆಕಾಳು, ಕಡಲೇಕಾಳು ಗಣೇಶ ವಿಗ್ರಹಗಳನ್ನು ಮಾಲ್ಯವಂತದ ಸಾಲು ಮಲೆಗಳನ್ನು, ತುಂಗಭದ್ರಾತರಂಗಿಣಿಯ ಕೋಲಾಹಲವನ್ನು, ಅಚ್ಯುತರಾಯ, ಕೊದಂಡರಾಮ ಲಕ್ಷ್ಮೀನಾರಾಯಣ ದೇವಸ್ಥಾನಗಳನ್ನು, ಅವುಗಳೆಲ್ಲೆಲ್ಲ ತನ್ನ ರಚನಾವಿಶೇಷದಿಂದ ಅತ್ಯಂತ ಸುಂದರವಾದ ವಿಟ್ಠಲಸ್ವಾಮಿಯ ಮಂದಿರವನ್ನು, ಶಬರಿಯ ರಾಮನನ್ನು ಕಾದದ್ದಿರಬಹುದಾದ ಆಶ್ರಮಪ್ರದೇಶವನ್ನು, 'ಪಾವನ ಸ್ಫಟಿಕೋದಕ'ದ ಪಂಪಾಸರಸ್ಸು ಮುಂತಾದುವನ್ನು ಕಂಡು ರಾತ್ರಿಯ ವೇಳೆ ಹಿಂದಿರುಗುತ್ತಾರೆ. ಗ್ರಂಥದ ಮಧ್ಯದ ಭಾಗದ ನಲ್ವತ್ತು ಪುಟಗಳಲ್ಲಿ ಈ ಪರ್ಯಟನದ ಅತ್ಯಂತ ಸ್ವಾರಸ್ಯ ಕಥನವನ್ನು ನಾವು ಕಾಣುತ್ತೇವೆ.

ಇಂತಹ ಸಂದರ್ಭಗಳಲ್ಲೆಲ್ಲ ಮುಖ್ಯವಾಗಿ ನಾವು ಗಮನಿಸಬೇಕಾದ್ದು ವಿ. ಸೀ. ಯವರ ಗದ್ಯದ ನಡಿಗೆಯನ್ನು, ವರ್ಣನೆಯ ಬೆಡಗನ್ನು. ಮೇಲು ನೋಟಕ್ಕೆ ಅಲ್ಪವೆಂದೋ ಶುಷ್ಕವೆಂದೋ ತೋರಬಹುದಾದ್ದು, ವಿ. ಸೀ. ಯವರ ಲೆಕ್ಕಣಿಕೆಯ ಮಾಂತ್ರಿಕ ಸ್ಪರ್ಶದಿಂದ ಮಹತ್ತಾಗಿ, ರಸವತ್ತಾಗಿ ಕಂಗೊಳಿಸುತ್ತದೆ. ಸ್ವತಃ ವಿ. ಸೀ. ಯವರೇ ವಿಟ್ಠಲನ ಗುಡಿಯನ್ನು ಮೊದಲು ಕಂಡಾಗ, 'ಇಲಿಯನ್ನು ಹುಲಿಯೆಂದು ಕರೆದು ಹೋ ಎನ್ನುವುದೇ ನಮ್ಮ ಜನರ ಸ್ವಭಾವ' ಎಂದು ಉದ್ಗರಿಸುತ್ತಾರೆ. ಆದರೆ ಗುಡಿಯ ಸನಿಹಕ್ಕೆ ಬಂದಂತೆ ಒಳಹೊಕ್ಕು ಸುತ್ತಿದಂತೆ ಅವರ ಭಾವ ಬದಲಾಗುತ್ತದೆ. ವಿ. ಸೀ. ಯವರಿಗೆ ಹೇಗೋ

ಹಾಗೆಯೇ ನಮಗೂ ಅವರ ವರ್ಣನೆಯ ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ, ನೀರಸವೆಂದದ್ದೇ ಸುರಲೋಕ ಸದೃಶವೆನಿಸುತ್ತದೆ.

ಮಾನ್ಯ ಡಿ. ವಿ. ಗುಂಡಪ್ಪನವರು ತಮ್ಮ ‘ ಸಾಹಿತ್ಯೋಪಾಸಕರು ’ ಎಂಬ ಗ್ರಂಥದಲ್ಲಿ ಒಂದು ಸಂಗತಿಯನ್ನು ಹೇಳಿದ್ದಾರೆ:—ಒಬ್ಬ ಸ್ನೇಹಿತರು ಎ. ಆರ್. ಕೃಷ್ಣಶಾಸ್ತ್ರಿಗಳೊಂದಿಗೆ ‘ ವಚನ ಭಾರತ ’ ವನ್ನು ಬರೆದಂತೆ ‘ ವಚನ ರಾಮಾಯಣ ’ ವನ್ನೂ ಬರೆಯಬೇಕೆಂದು ಕೋರಿದರಂತೆ. ಆಗ ಶಾಸ್ತ್ರಿಯವರು, “ ಅದು ನನ್ನಿಂದಾಗುವ ಕೆಲಸವಲ್ಲ...ಭಾರತ ಪುರಾಣ, ರಾಮಾಯಣ ಕಾವ್ಯ ಅದರ ಸೊಗಸನ್ನು ಸಂಗ್ರಹ ಮಾಡುವುದಕ್ಕಾಗುವುದಿಲ್ಲ....ಕಾವ್ಯದ ಸೊಗಸನ್ನು ವಚನದಲ್ಲಿ ಹೇಗೆ ತರುವುದು ? ” ಎಂದರಂತೆ. ‘ ಪಂಪಾಯಾತ್ರೆ ’ ಸಂಗ್ರಹಾತೀತವಾದ ಒಂದು ಕಾವ್ಯ–ಗದ್ಯಕಾವ್ಯ. ‘ ಪಂಪಾಯಾತ್ರೆ ’ ಯ ಗದ್ಯಶರೀರದೊಳಗಿರುವ ಜೀವರಸವನ್ನು ಸಂಗ್ರಹಿಸಿ ಹೇಳುವುದು ಕಷ್ಟ. ಅದರೊಳಗಿನ ಕೆಲವು ರಸಸ್ಥಾನಗಳನ್ನು ನಿರ್ದೇಶಿಸೋಣ ಎಂದರೂ ಯಾವ ಭಾಗವನ್ನು ಯಾವ ಪಂಕ್ತಿಯನ್ನು ಬಿಡುವುದೆಂಬುದೇ ಸಮಸ್ಯೆಯಾಗುತ್ತದೆ.–ಆದರೂ ಒಂದು ಉದಾಹರಣೆಯನ್ನು ನೋಡಿರಿ : ಅದು ಪಂಪಾಸರಸ್ಸಿನ ವರ್ಣನೆ–“ ....ಮುಂದೆ ಸಣ್ಣದೊಂದು ಕಲ್ಲು ಸೇತುವೆ ; ಎಡಕ್ಕೆ ಸ್ವಲ್ಪ ತಿರುಗಿದರೆ ಅಲ್ಲಿಯೇ ಎದುರಿಗೆ, ಅಂಜನಾ ಪರ್ವತದ ತಪ್ಪಲಲ್ಲಿ, ತಿಳಿ ಹಸುರಿನ ಮೃದು ಚೌಕಟ್ಟಿನಲ್ಲಿ, ನೆಲಸಿರುವ ಪ್ರಶಾಂತ ಪಂಪಾ ಸರಸ್ಸು ! ಆ ದಿವ್ಯ ಸರಸ್ಸನ್ನು ಕಂಡ ಕೂಡಲೇ ಮನಸ್ಸಿನ ಎಲ್ಲ ಅಲ್ಪ ಭಾವನೆಗಳೂ ದೇಹದ ತಾಪಗಳೂ ಮಾಯವಾದುವು...ಅನೇಕ ಶತಮಾನಗಳ ಪರ್ಯಂತ ಯೋಗನಿರತನಾಗಿ ತಪಶ್ಚರ್ಯೆಯಿಂದ ಶಾಂತಾತ್ಮವನ್ನೂ ಸಿದ್ಧಿಯನ್ನೂ ಪಡೆದು, ಎಲ್ಲ ವ್ಯಾಮೋಹ ಮಮತೆಗಳನ್ನೂ ತೊರೆದು, ಮಲಿನವಾಗದ ತೇಜಸ್ಸಿನಿಂದ ಬೆಳಗಿ, ಏಕಾಗ್ರತೆಯಿಂದ ಸದಾನಂದವನ್ನು ಅನುಭವಿಸುತ್ತಿರುವ ಯೋಗಿವರ್ಯನಂತೆ ಸರಸ್ಸು ಕಾಣುತ್ತದೆ. ಇಲ್ಲಿನದು ತಿಳಿಯಾಗಿ ಹೊಳೆವ ಪುಣ್ಯೋದಕ. ಶ್ರೀ ರಾಮಪಾನದಿಂದ ಪವಿತ್ರವಾದದ್ದು....ಉಗ್ರವಾಗಿ ಬೀಸುವ ಮಾರುತ ಕೂಡ, ಭಕ್ತಿಯಿಂದ ಮೃದುವಾಗಿ ಚಲಿಸಿ, ಸರಸ್ಸಿನ ಗೋಜಿಗೆ ಹೋಗದೆ ತನ್ನ ಸ್ವಾಚ್ಛಂದ್ಯವನ್ನು ಮರೆತು ಮೆಲ್ಲನೆ ಸುಳಿದು ಹೋಗುತ್ತಿದೆ...ದೂರದ ಪಶ್ಚಿಮಾಂತದಲ್ಲಿ ಕಿತ್ತಳೆ ಬಣ್ಣದ ಸೂರ್ಯನು ಮುಳುಗುವುದರಲ್ಲಿದ್ದನು. ಅವನ ಕೆಂಪು ಮಿಶ್ರವಾದ ಹೊಂಬಣ್ಣದ ಕಾಂತಿ ಬೆಟ್ಟದ ಸಾಲುಗಳನ್ನು ದಾಟಿ ಗಿಡದೆಲೆ ಹೂಗಳನ್ನು ದೂರಿಕೊಂಡು ಸುತ್ತಣ ಪ್ರದೇಶವನ್ನು ಬೆಳಗುತ್ತಿತ್ತು. ಮೇಲಿನ ಮೋಡಗಳನ್ನು ಹೊಕ್ಕು ಅವನ್ನು ವಿಧವಿಧ ವರ್ಣಗಳಿಂದ ಸಿಂಗರಿಸಿತ್ತು. ಮೇಲೆ ಆಕಾಶ : ಸಂಧ್ಯಾರಾಗ ರಂಜಿತವಾದ ಮೋಡಗಳು ; ಕೆಳಗೆ ಸರಸ್ಸು : ದೂರದ ಆಳದಲ್ಲಿ ಅದರ ಹೃದಯದ ಅಂತರಾಂತರದಲ್ಲಿ ಆಕಾಶದ ಪೇಲವವಾದ ಆದರೂ ಸುಸ್ಪಷ್ಟವಾದ ಪ್ರತಿಬಿಂಬ : ಸುತ್ತಣ ಪ್ರಶಾಂತ ನೀರವತೆ ; ಅಮಾನುಷ ಲೋಕಾತೀತವಾದ ಶಾಂತ ಮೂರ್ತಿಯ ಸದಸ್ಸು :—ಇವುಗಳಲ್ಲಿ ನಟ್ಟ ಮನಸ್ಸು ಪ್ರಪಂಚವನ್ನು ಮರೆತುದೇನಾಶ್ಚರ್ಯ ?”...ಇಂತಹ ಗ್ರಂಥ ಪಠನದಲ್ಲಿ

ವಾಚಕನೂ ಪ್ರಪಂಚವನ್ನು ಮರೆತುದೇನಾಶ್ಚರ್ಯ ? ಗದ್ಯ ಕವನವೆಂದರೆ, ಯೋಜನ ಗಂಧಿಯಾದ ಗದ್ಯವೆಂದರೆ ಇದೇ ಅಲ್ಲವೆ ?

ಕೊನೆಯ—ಕನಸಿನ ಭಾಗದ ಚೆಲುವೂ ಇದೇ ಬಗೆಯದ್ದು. ಅದೇ ಒಂದು ಸ್ವತಂತ್ರವಾದ, "ರಸಖಂಡಶರ್ಕರೆ"ಯಂತಿರುವ ಗದ್ಯಕಾವ್ಯ. ಪಂಪಾಕ್ಷೇತ್ರ ಪರ್ಯಟನೆ ಮುಗಿಸಿ, ಬಳಲಿ, ಮಲಗಿದರೂ ಲೇಖಕನಿಗೆ ಇರುಳೆಲ್ಲ ಕನಸುಗಳು—ಎಚ್ಚರ ದಲ್ಲಿ ಅವನು ತುಳಿದ ದಾರಿ, ಸುಳಿದ ನೆಲ, ಕಂಡ ನೋಟ ನಿದ್ದೆಯಲ್ಲಿದ್ದಾಗ ಅವನ ಒಳ ಮನಸ್ಸನ್ನು ಹೊಕ್ಕು, ಕಲಕಿ, ಕೆಣಕಿ, ಕನಸಾಗಿ ಕುಣಿಯುತ್ತದೆ, ಮರುಕಳಿಸುತ್ತದೆ. ರಾಯರ ಕಾಲದ ಯೋಗ—ಭೋಗ ಜೀವನದ ಒಂದು ನೋಟ ಒಂದು ಕನಸಿನಲ್ಲಾದರೆ, ಮತ್ತೊಂದರಲ್ಲಿ ಅಂತಃಪುರದ ಮೋಹಕ ಚಿತ್ರಣ ; ಮಗದೊಂದರಲ್ಲಿ ವಿಜಯದಶಮಿಯ ಸಂಭ್ರಮ. ಈ ಕನಸು ಹೀಗೆಯೇ ಮುಂದುವರಿದು ಬಹುಮನಿ ಸುಲ್ತಾನರ ದಂಡು ಧಾಳಿಯಲ್ಲಿ ವಿಜಯನಗರವು ಧಾಳಾಧೂಳಿಯಾಗಿ "ವಿದ್ಯಾನಗರದ ಪತಾಕೆಯೂ ದುರ್ಗದ ಹೊಂಗಳಸವೂ ಕೆಳಗೆ ಬಿದ್ದು, ಅಖಂಡ ಸೌಭಾಗ್ಯದ, ಅವಿಶ್ರಾಂತ ಸಾಹಸದ ನೆಲೆಬೀಡಾ ಗಿದ್ದ ಲಕ್ಷ್ಮೀನಿಲಯ ಶ್ಮಶಾನವಾದ ದುಃಖಮಯ ನೋಟ"ದಲ್ಲಿ ಒಡೆದುಬಿಡುತ್ತದೆ. ಲೇಖಕನು 'ಹಾ ! ಹಾ !' ಎಂದು ಮೇಲೇಳುವಂತೆಯೇ ಯಾವುದೋ ಸ್ವಪ್ನ ನಗರಿಯಲ್ಲಿ ಐನೂರು ವರ್ಷಗಳ ಹಿಂದಣ ಸ್ವರ್ಣ ಭೂಮಿಯಲ್ಲಿ ವಿಹರಿಸುತ್ತಿರುವ ಓದುಗನೂ ಎಚ್ಚರ ಗೊಳ್ಳುತ್ತಾನೆ!

ಗ್ರಂಥದ ಮೊದಲ ಭಾಗದಲ್ಲೂ, ಎರಡನೆಯ ಭಾಗದ ಕೆಲವೆಡೆಗಳಲ್ಲೂ, ಕೊನೆಯ ಭಾಗದ ಕೊನೆಯಲ್ಲೂ ತಿಳಿಯಾದ ಹಾಸ್ಯರಸವು ಚಿಮ್ಮಿ ಓದುಗನ ಮುಖದಲ್ಲಿ ನಗೆಮಲ್ಲಿಗೆ ಯನ್ನು ಅರಳಿಸುತ್ತದೆ. ಪ್ರವಾಸ ಕಾಲದಲ್ಲಿ ಜತೆಗೆ ಒಬ್ಬಿಬ್ಬರಿದ್ದರೆ ಚೆನ್ನ. ನಾಲ್ಕಾರು ಜನ ಸೇರಿ ಮಾಡುವ ಪ್ರವಾಸ ಎಂದಮೇಲೆ ಮಾತು—ಕತೆ—ಟೀಕೆ—ಟಿಪ್ಪಣಿ ಇರಬೇಕಾ ದದ್ದೇ. ಪಂಪಾಯಾತ್ರೆಯಲ್ಲಿ ಇಂತಹ ಸಂದರ್ಭಗಳಲ್ಲೆಲ್ಲಾ ವಿ. ಸೀ. ಯವರು ನವಿರು ನಗೆಯ ಪಿಚಕಾರಿಯನ್ನು ಹೊಡೆದಿದ್ದಾರೆ. 'ಪಂಪಾಯಾತ್ರೆ'ಯಲ್ಲಿ ಮುಖ್ಯವಾಗಿರುವ ಗಂಭೀರ ಕಥನಕ್ಕೆ ಈ ಹಾಸ್ಯವು ಚೆನ್ನಾಗಿ ಹೊಂದಿಕೊಂಡಿದೆ. ಇಲ್ಲಿರುವ ಹಾಸ್ಯರಸ ಬಿಂದುಗಳು ಚೆಂಗುಲಾಬಿಯ ದಳಗಳ ಮೇಲೆ ಮಿದುವಾಗಿ ಅಂಟಿಕೊಂಡು ಹೊಂಬಿಸಿ ಲಲ್ಲಿ ಹೊಳೆಯುವ ಮಂಜಿನ ಕಣಗಳಂತಿವೆ.

ಗ್ರಂಥದ ಮುನ್ನುಡಿಯಲ್ಲಿ, ನೇರವಾಗಿಯೂ ಕಥನ ಭಾಗದಲ್ಲಿ ಪರ್ಯಾಯವಾಗಿಯೂ ತಮ್ಮ ನಾಲ್ವರು ಸಹಯಾತ್ರಿಗಳ ವ್ಯಕ್ತಿತ್ವವನ್ನು ವಿ. ಸೀ. ಯವರು ಚಿತ್ರಿಸುವಲ್ಲಿ ಅವರ ಗುಣ ಪಕ್ಷಪಾತವೂ ವಿನಯಪರತೆಯೂ ಖಚಿತ ದೃಷ್ಟಿಯೂ ಎದ್ದು ಕಾಣುತ್ತದೆ. ಆ ನಾಲ್ವರೆಂದರೆ ವಿ. ಸೀ. ಯವರ ಮಾನ್ಯಮಿತ್ರರಷ್ಟೇ ಅಲ್ಲ ಕನ್ನಡಿದ ಹಿರಿಯ ತಲೆಗಳು ಎನಿ ಸಿದ್ದ ದಿ| ಬೆಳ್ಳಾವೆ ವೆಂಕಟನಾರಣಪ್ಪ, ದಿ| ಟಿ.ಎಸ್. ವೆಂಕಣ್ಣಯ್ಯ ಮುಂತಾದವರೆಂದು ನಾವು ಊಹಿಸಿಕೊಳ್ಳಬಹುದು. ಅಂಥವರ ಸವಿ—ಸಾನ್ನಿಧ್ಯವಿರುವಾಗ ಯಾತ್ರೆಯ ಸುಖಕ್ಕೆ ಇನ್ನಷ್ಟು ಬಣ್ಣವೇರಬಹುದಲ್ಲವೇ ? ಆ ನಾಲ್ವರಲ್ಲದೆ ಯಾತ್ರೆಯ ಕಾಲದಲ್ಲಿ

ಮಾರ್ಗದರ್ಶಿಯೂ, ಆಪದ್ಬಂಧುವೂ ಎನಿಸಿದ ಚೆನ್ನಯ್ಯನ ಪ್ರಸ್ತಾವವೂ ಅಲ್ಲಲ್ಲಿ ಬರುತ್ತದೆ.

ಒಂದು ದೃಷ್ಟಿಯಿಂದ ನೋಡಿದರೆ ಕನ್ನಡದ 'ಪಂಪಾಯಾತ್ರೆ' ಸಂಸ್ಕೃತದ 'ಮೇಘದೂತ' ದಂತಹ ಗ್ರಂಥ. 'ಮೇಘದೂತ'ದಲ್ಲಿ ಭೂವರ್ಣನೆಯ ವ್ಯಾಜದಲ್ಲಿ ಕಾಳಿದಾಸನು ಹೇಗೆ ತನ್ನ ಕುಂಚವನ್ನೂ ಕಲ್ಪನೆಯನ್ನೂ ರಾಮಗಿರಿಯಿಂದ ಅಲಕಾವತಿಯವರೆಗೂ ಹಾಯಿಸಿರುವನೋ, ಮೇಘದೂತಕ್ಕೆ ಯಕ್ಷನ ವಿರಹದಳಲು ಹೇಗೆ ಹಿನ್ನೆಲೆಯಾಗಿರುವುದೋ, ಯಕ್ಷನೊಂದಿಗೆ ಕಾಳಿದಾಸನು ಹೇಗೆ ಅಭಿನ್ನನಾಗಿರುವನೋ ಹಾಗೆಯೇ ವಿ. ಸೀ. ಯವರು 'ಪಂಪಾಯಾತ್ರೆ'ಯಲ್ಲಿ "ವರ್ಣನೆಯೊಂದಿಗೆ ತಮ್ಮ ಭಾವನೆಗಳನ್ನು ಬೆರಸಿ" ದ್ದಾರೆ; "ಮನಸ್ಸನ್ನು ಅದರೊಳಗೆ ಹೊಗಿಸಿ ಸ್ವಚ್ಛಂದವಾಗಿ ಒರೆ" ದಿದ್ದಾರೆ. ಇದರಿಂದ ಗ್ರಂಥಕರ್ತನ ಮನಃ ಸಂಸ್ಕಾರವನ್ನೂ, ವಿಜಯನಗರದ ಉತ್ಕರ್ಷಾಪಕರ್ಷಗಳ ಸುಖದುಃಖ ಚಿತ್ರವನ್ನೂ ಓದುಗರು ಜತೆಜತೆಯಾಗಿ ಕಾಣಬಹುದು.

'ಪಂಪಾಯಾತ್ರೆ'ಯ ಚೆಲುವು ಬೇಂದ್ರೆಯಂಥವರ ಕವಿಹೃದಯವನ್ನು ಮುಟ್ಟಿದೆ; ತಮ್ಮ 'ಉಯ್ಯಾಲೆ'ಯಲ್ಲಿ 'ಪಂಪಾಯಾತ್ರೆ'ಯನ್ನೂ ವಿ. ಸೀ. ಯವರನ್ನೂ ಇರಿಸಿ ತೂಗಿ ಹಾಡಿದ್ದಾರೆ ಬೇಂದ್ರೆ.—ನಮ್ಮಲ್ಲಿ ಹಂಪೆಯನ್ನು ಕಂಡವರು ಹಲವರಿರಬಹುದು. ಅಂಥವರೂ 'ಪಂಪಾಯಾತ್ರೆ'ಯನ್ನೊಮ್ಮೆ ಓದಿದರೆ ಮತ್ತೊಮ್ಮೆ 'ಪಂಪಾಯಾತ್ರೆ' ಮಾಡಿದಂತಾಗುತ್ತದೆ.

## ೧೭. ‘ ಭಾರತಿ ’ಯವರ ‘ ತಪಸ್ವಿನೀ ’

“ ವಾಲ್ಮೀಕಿ ಮಹಾಕವಿಯು ತನ್ನ ಕಲ್ಪನಾಶಕ್ತಿಯ ಕರುಣಾಜಲವೆಲ್ಲವನ್ನೂ ಜನಕಸುತೆಯ (ಸೀತಾದೇವಿಯ) ಪುಣ್ಯಾಭಿಷೇಕದಲ್ಲಿಯೇ ಮುಗಿಸಿಬಿಟ್ಟಿರುತ್ತಾನೆ. ಕಳೆಗುಂದಿದ ಮುಖವುಳ್ಳವಳೂ ಸಮಸ್ತ ಐಹಿಕ ಸುಖದಿಂದ ವಂಚಿತಳೂ ಆಗಿ ಸೀತಾದೇವಿಯ ಛಾಯೆಯಲ್ಲಿ ಅವಕುಂಠನವತಿಯಾಗಿ ನಿಂತಿರುವ ಮತ್ತೊಬ್ಬ ರಾಜಕುಮಾರಿಯ (ಆಕೆಯೂ ಜನಕಸುತೆಯೇ) ಚಿರ ದುಃಖದಿಂದ ತಪ್ತವಾದ ನಮ್ರ ಲಲಾಟದ ಮೇಲೆ ಕವಿಯು ತನ್ನ ಕಮಂಡಲುವಿನ ಒಂದು ತೊಟ್ಟು ನೀರನ್ನಾದರೂ ಏಕೆ ಚಿಮುಕಿಸುವುದಿಲ್ಲ ? ಅಯ್ಯೋ, ಅವ್ಯಕ್ತ ವೇದನೆಯಾದ ಊರ್ಮಿಳಾದೇವಿ : ನೀನು ಉಷಾ ಕಾಲದಲ್ಲಿ ಕಣ್ಣಿಗೆ ಬೀಳುವ ನಕ್ಷತ್ರದಂತೆ ಮಹಾಕಾವ್ಯದ ಮೇರು ಶಿಖರದಲ್ಲಿ ಒಮ್ಮೆ ಮಾತ್ರ ಗೋಚರಳಾದೆ ; ಆಮೇಲೆ ಅರುಣಕಾಂತಿಯಲ್ಲಿ ಕಣ್ಮರೆಯಾದ ನೀನು ಪುನಃ ಕಾಣಲಿಲ್ಲ. ನಿನ್ನ ಉದಯಾಚಲವೆಲ್ಲಿ, ಅಸ್ತ ಶಿಖರವೆಲ್ಲಿ—ಎಂದು ಕೇಳುವುದನ್ನು ಕೂಡ ಎಲ್ಲರೂ ಮರೆತುಬಿಟ್ಟಿರುತ್ತಾರೆ.”—ಮೇಲಿನ ವಾಕ್ಯವೃಂದವು ವಿಶ್ವಕವಿ ರವೀಂದ್ರನಾಥ ಠಾಕೂರರ ‘ ಕಾವ್ಯದ ಅನಾದರ ’ವೆಂಬ ಸಮಾಲೋಚನೆಯಿಂದ ಆರಿಸಿಕೊಂಡದ್ದು. ಶ್ರೀಮದ್ರಾಮಾಯಣದ ಋಷಿಕವಿಯ ವಿಶಾಲ ದೃಷ್ಟಿಪಥದಲ್ಲಿ ಊರ್ಮಿಳೆಯೇಕೆ ಅವಜ್ಞೆಗೆ ಒಳಗಾದಳು ಎಂಬುದು ನಿಜವಾಗಿಯೂ ಆಶ್ಚರ್ಯಕರ ಸಂಗತಿ. ರಾಮನನ್ನು ಅನುಸರಿಸಿ ಸೀತೆ, ಅವರಿಬ್ಬರ ಹಿಂದೆ ಲಕ್ಷ್ಮಣ ವನವಾಸಕ್ಕೆ ಹೊರಟಾಗ ಊರ್ಮಿಳೆ ಏನು ಮಾಡಿದಳು ? ಲಕ್ಷ್ಮಣನೊಂದಿಗೆ ಯಾವ ಮಾತಾಡಿದಳು ? ಅಯೋಧ್ಯೆಯಲ್ಲೇ ಏಕೆ ಉಳಿದಳು ? ಪತಿ ವಿರಹೆಯಾಗಿ ಹದಿನಾಲ್ಕು ವರ್ಷಗಳನ್ನು ಹೇಗೆ ನೂಕಿದಳು ? ವನವಾಸ ಮುಗಿಸಿ ರಾಮಾದಿಗಳು ಅಯೋಧ್ಯೆಗೆ ಹಿಂದಿರುಗಿದಾಗ ಊರ್ಮಿಳೆ—ಲಕ್ಷ್ಮಣರ ಪುನರ್ಮಿಲನ ಹೇಗಿತ್ತು ? ಊರ್ಮಿಳೆಯ ಕಂಠ ಬಿಗಿದು, ಮಾತು ತೊದಲಿ, ಕಣ್ಣು ಮಂಜಾದಾಗ ಲಕ್ಷ್ಮಣ ಅವಳನ್ನು ಮುಟ್ಟಿ, ಮುದ್ದಿಸಿ ಸಂತೈಸಲಿಲ್ಲವೇ ?—ರಾಮಸೀತೆಯರು ದೂರದಲ್ಲಿ ನಿಂತು, ಆ ನೋಟವನ್ನು ಕಂಡು ಸಂತೋಷಪಡಲಿಲ್ಲವೇ ?—ರಾಮಾಯಣವನ್ನು ಓದುವಾಗ ಇಂತಹ ಪ್ರಶ್ನತರಂಗಗಳೆದ್ದು ಕಾವ್ಯರಸಿಕರ ಹೃದಯವು ಅಶಾಂತವಾಗುವುದು ಸಹಜವೇ ಆಗಿದೆ. ಕವಿವರ್ಯ ಠಾಕೂರರ ಉದ್ಗಾರಕ್ಕೂ ಅಂತಹ ಅಶಾಂತತೆಯೇ ಕಾರಣ. ಆದರೆ ಅದೇನು ಕರ್ಮ ಧರ್ಮ ಸಂಯೋಗವೋ :—ಠಾಕೂರರ ನಿಟ್ಟುಸಿರಿನ ಬಿಸಿ ಭರತವರ್ಷದ ಹಲವಾರು ಕವಿಭಾವುಕರ ಎದೆಯಾಳವನ್ನು ಮುಟ್ಟಿತು : ಆ ಕಾವಿನಿಂದ ಊರ್ಮಿಳೆಗೆ ಪ್ರಾತಿನಿಧ್ಯವುಳ್ಳ, ಊರ್ಮಿಳೆಯೇ ಪ್ರಧಾನವಾಗಿ ಉಳ್ಳ ಕಾವ್ಯರಾಶಿಯೇ ಹುಟ್ಟಿತು. ‘ ಭಾರತಿ ’ಯೆಂಬ ಅಭಿಧಾನದ ಶ್ರೀಮತಿ ತಿರುಮಲೆ ರಾಜಮ್ಮನವರು ‘ ತಪಸ್ವಿನೀ ’ ಎಂಬ ದೃಶ್ಯಕಾವ್ಯದಲ್ಲಿ ಊರ್ಮಿಳೆಗೆ ಪ್ರಾಧಾನ್ಯವನ್ನು ಕಲ್ಪಿಸಿ ಸಹೃದಯರ ಸಂತೋಷಕ್ಕೂ ಕೃತಜ್ಞತೆಗೂ ಪಾತ್ರರಾಗಿದ್ದಾರೆ.

‘ ತಪಸ್ವಿನಿ ’ಯು ಹದಿನೆಂಟು ಪುಟಗಳ, ನಾನ್ನೂರು ಪಂಕ್ತಿಗಳ ಪುಟ್ಟರೂಪಕ.

ವನವಾಸಾನಂತರ ಶ್ರೀರಾಮಾದಿಗಳ ಪುನರಾಗಮನ—ಅದರಲ್ಲೂ ಊರ್ಮಿಳೆ—ಲಕ್ಷ್ಮಣರ ಪುನರ್ಮಿಲನವೇ—ಇದರಲ್ಲಿ ಪ್ರಧಾನ ವಿಷಯ. ರಾಮಾಯಣದಲ್ಲಿ ಲುಪ್ತವಾಗಿ, ಪಾಠಕರ ಅತೃಪ್ತಿಗೆ ಕಾರಣವಾಗಿರುವ ಸನ್ನಿವೇಶವೂ ಅದೇ ತಾನೇ ? ಪುನರ್ಮಿಲನ ಸಂದರ್ಭದಲ್ಲೇ ಅದಕ್ಕೆ ಪೂರಕವಾಗುವಂತೆ ಊರ್ಮಿಳೆಯ ವಿರಹ ಸ್ಥಿತಿಯನ್ನೂ ಲೇಖಿಕೆ ಸೂಚ್ಯವಾಗಿಯೂ ಸುಂದರವಾಗಿ ತಿಳಿಸಿದ್ದಾರೆ. ಇಲ್ಲಿಯ ಊರ್ಮಿಳಾ—ಲಕ್ಷ್ಮಣ ಸಮಾಗಮದ ಸಂದರ್ಭವನ್ನು ಕಾಣುವಾಗ ರಾಮಾಯಣದಲ್ಲೂ ಇದು ಹೀಗೆಯೇ ನಡೆದಿರಬಹುದೆಂದು ತೋರುವಂತಿದೆ. ಊರ್ಮಿಳೆಯ ನಡೆ-ನುಡಿಗಳ ಚಿತ್ರಣವು ತನ್ನ ನೆರೆಯ ಒಂದು ಹೆಣ್ಣಿನ ಮನದ ಆಳವನ್ನೂ ಅಳಲನ್ನೂ ಇನ್ನೊಂದು ಹೆಣ್ಣು ಅರ್ಥಮಾಡಿಕೊಂಡು ರೇಖಿಸಿದ್ದು ಎನ್ನುವಂತೆ ಸಹಜವಾಗಿದೆ.

ಈ ದೃಶ್ಯದಲ್ಲಿ ಕಥಾಭಾಗ ಎನ್ನಬಹುದಾದದ್ದು ಹೀಗಿದೆ : ರಾಜಧಾನಿಗೆ ನಾತಿ ದೂರದಲ್ಲಿ, ಸರಯೂ ತೀರದಲ್ಲಿ ಆಶ್ರಮವಾಸಿಯಾಗಿ ಹದಿನಾಲ್ಕು ವರ್ಷವನ್ನು ಕಳೆದಿದ್ದಾಳೆ ಊರ್ಮಿಳೆ. ತಪೋಮಗ್ನೆಯಾಗಿದ್ದ ಆಕೆಗೆ ಕಾಲ ಪ್ರವಾಹದ ಅರಿವೇ ಇರಲಿಲ್ಲ. ಇದ್ದಕ್ಕಿದ್ದಂತೆ ಒಂದು ದಿನ—ಶ್ರೀರಾಮಾದಿಗಳ ಪುನರಾಗಮನದಂದು—ಅವಳ ಮನದಲ್ಲಿ ಉತ್ಸಾಹವು ಅಂಕುರಿಸಿ, ಹಳೆಯ ನೆನಪೊಂದು ತಲೆಯೆತ್ತುತ್ತದೆ. ‘ ಇದೇಕೆ ಹೀಗೆಂ’ದು ಅವಳು ಯೋಚಿಸುತ್ತಿರುವಾಗಲೇ ಸರಯೂ ನದಿಯ ಮೇಲೆ ಹದಿನಾಲ್ಕು ದೋಣಿಗಳ ಸಾಲು ತೇಲಿ ಹೋಗುವುದನ್ನು ಕಾಣುತ್ತಾಳೆ. “ ಓಹೋ ರಾಮಾಗಮನದ ಸುದಿನವಿದೆ ”ಂಬುದು ಅವಳಿಗೆ ಹೊಳೆಯುತ್ತದೆ. ಅದೇ ಹೊತ್ತಿಗೆ ಮರಿಯನ್ನು ಅಗಲಿರುವ ತಾಯಿ ಜಿಂಕೆಯೊಂದು ಊರ್ಮಿಳೆಯ ಬಳಿಸಾರುತ್ತದೆ. ಊರ್ಮಿಳೆ ಅದನ್ನು ಸಂತೈಸುವಳು ; ‘ ನಿನ್ನ ಮುದ್ದು ಮರಿ ನೆಮ್ಮದಿಯಿಂದ ನಿನ್ನೆಡೆಗೆ ಬರಲೆಂ ’ ದು ಹಾರೈಸುವಳು.

ಊರ್ಮಿಳೆ ಹೀಗೆ ಹಾರೈಸುತ್ತಿರುವಾಗಲೇ ಅತ್ತಣಿಂದ ಲಕ್ಷ್ಮಣನು ಚಿಗರೆ ಮರಿಯೊಂದನ್ನು ತಬ್ಬಿಕೊಂಡು ಕುಟೀರದ ಕಡೆಗೆ ಬರುವನು. ತಾಯಿಯಿಲ್ಲದೆ ಚೀರುತ್ತಿರುವ ಮರಿಯನ್ನು ಲಕ್ಷ್ಮಣನು ಸಮಾಧಾನಪಡಿಸುತ್ತಿರುವನು—ಜಿಂಕೆಮರಿ ಓಡಿಹೋಗಿ ತಾಯಿ ಜಿಂಕೆಯನ್ನು ಸೇರುವುದು. ಹದಿನಾಲ್ಕು ವರ್ಷಗಳ ಅನಂತರ ಸತಿ–ಪತಿಯರ ಪುನಸ್ಸಮಾಗಮವಾಗುವುದು. ಪರಸ್ಪರ ಸುಖದುಃಖ ವಿಚಾರವಿನಿಮಯಗಳ ಬಳಿಕ, ಊರ್ಮಿಳೆಯ ಪ್ರಶ್ನೆಗಳಿಗೆ ಉತ್ತರವಾಗಿ ಲಕ್ಷ್ಮಣನು ಅರಣ್ಯವಾಸ—ಸೀತಾಪಹರಣ—ರಾವಣವಧೆಗಳ ವೃತ್ತಾಂತವನ್ನು ಸಣ್ಣದಾಗಿ ತಿಳಿಸುವನು. ಅಷ್ಟರಲ್ಲಿ ಸೀತಾರಾಮರು ಈ ಕಡೆಗೆ ಬಂದು ಈ ನೋಟವನ್ನು ಕಂಡು ಸಂತೋಷಪಡುವರು. ದೀರ್ಘ ವಿರಹಾನಂತರ ಜತೆಯಾಗಿರುವ ಸತಿ–ಪತಿಯರ ಏಕಾಂತಕ್ಕೆ ಭಂಗ ತರಲು ಬಯಸದೆ ದೂತ ಹನುಮಂತನನ್ನು ಕಳುಹಿಸುವರು. ಹನುಮಂತನು ಪ್ರವೇಶಿಸಿ ಸೀತಾರಾಮರ ಆಗಮನ ವಾರ್ತೆಯನ್ನು ಅರುಹುವನು. ರಾಮ—ಸೀತೆಯರು ಊರ್ಮಿಳೆಯ ಪತಿಭಕ್ತಿ, ಲಕ್ಷ್ಮಣನ ಭ್ರಾತೃಪ್ರೇಮಗಳನ್ನು ಪ್ರಶಂಸಿಸುವರು. ಈವರೆಗಿನ ಕ್ಲೇಶವನ್ನು ಎಲ್ಲರೂ ಮರೆತು,

ಹರ್ಷನಿರ್ಭರರಾಗಿ ಗುರುಹಿರಿಯರ ದರ್ಶನಕ್ಕಾಗಿ ಪುರ ಪ್ರವೇಶ ಮಾಡುವರು.

ವನವಾಸಿಗಳಾದ ರಾಮಸೀತೆಯರ ಪರಿಚರ್ಯೆಯಲ್ಲಿ ಲಕ್ಷ್ಮಣನು ಸಾರ್ಥಕ್ಯವನ್ನು ಕಂಡುಕೊಂಡನಾದರೆ ಲಕ್ಷ್ಮಣಪತ್ನಿ ಊರ್ಮಿಳೆ ಅಯೋಧ್ಯೆಯನ್ನೇ ಅಡವಿಯೆಂದು ಭಾವಿಸಿದಳು. ಅರಮನೆಯ ಸುಖಭೋಗವನ್ನು ತೊರೆದು ಆಶ್ರಮವಾಸಿನಿಯಾದಳು. ಪತಿಯ ಕ್ಷೇಮಕ್ಕೂ ತನ್ನ ಆತ್ಮಶುದ್ಧಿಗೂ ಸಾಧನೆ ಮಾಡಿದಳು. ಬಾಹ್ಯ ಜಗತ್ತಿಗೂ ಅವಳಿಗೂ ಸಂಪರ್ಕವು ತಪ್ಪಿ ಹದಿನಾಲ್ಕು ವರ್ಷಗಳುರುಳಿದ್ದೇ ಅವಳಿಗೆ ತಿಳಿಯಲಿಲ್ಲ. ದೋಣಿಗಳ ನೆವದಲ್ಲಿ ಇದನ್ನು ಗ್ರಂಥಕರ್ತೆ ಸೂಚಿಸುವ ವಿಧಾನವು ಮನೋಹರವಾಗಿದೆ. ಆ ಸಾಧನಾವಕಾಶದಲ್ಲಿ ಊರ್ಮಿಳೆಯ ಹೃದಯವು ಕೋಮಲತರವಾಯಿತು; ದಯಾರ್ದ್ರವಾಯಿತು; ಸುತ್ತುಮುತ್ತಣ ಜೀವಿಗಳ ಸುಖದುಃಖಗಳೊಂದಿಗೆ ಸಮರಸವನ್ನು ಹೊಂದುವಂತಾಯಿತು. ತಾಯಿ ಜಿಂಕೆಯನ್ನು ಕುರಿತು ಅವಳಾಡುವ ಮಾತುಗಳಿಂದ ಇದು ಸುವ್ಯಕ್ತವಾಗುತ್ತದೆ. ಅಷ್ಟೇ ಅಲ್ಲ, ಜಿಂಕೆಯನ್ನು ಸಂತೈಸುವಾಗ ಅವಳೆನ್ನುವ 'ಮಿಗಿಲು ಮೋಹವು ಬೇಡ; ತಡೆದುಕೊಳ್ಳೀಗಮ್ಮ" ಎಂಬಲ್ಲಿ ಊರ್ಮಿಳೆಯ ಹೃದಯವು ಪಡೆದುಕೊಂಡ ಸಮತೆಯೂ, "ಕರುಳ ಮಮತೆಯ ನೋವನಾನರಿವೆನೆಂತು"—ಎನ್ನುವಲ್ಲಿ 'ಸತೀ' ಎಂದು ಕರೆಯುವವನಿಲ್ಲದೆ, 'ಅಮ್ಮ' ಎಂದು ತೊದಲುವವರಿಲ್ಲದೆ ಹದಿನಾಲ್ಕು ವರ್ಷಗಳನ್ನು ಬರಡಾಗಿ ಕಳೆದದ್ದಾಯಿತು. ಮುಂದಾದರೂ ಆ ಭಾಗ್ಯ ತನಗೆ ಬರಲೆಂದು ಸ್ತ್ರೀ ಸಹಜವಾದ ಆಶಯವೂ ಪ್ರಕಟವಾಗುತ್ತದೆ. ಒಟ್ಟಿನಲ್ಲಿ ಕಾವ್ಯದ ಮೊದಲ ಸ್ವಗತ ಭಾಷಣವು ಊರ್ಮಿಳೆಯ ಹೃದಯಕ್ಕೆ ಹಿಡಿದ ಕನ್ನಡಿಯಂತಿದೆ.

ಲಕ್ಷ್ಮಣನು ಜಿಂಕೆ ಮರಿಯನ್ನೆತ್ತಿಕೊಂಡು ಊರ್ಮಿಳೆಯಲ್ಲಿಗೆ ಬರುವ ಸನ್ನಿವೇಶವೂ ತುಂಬ ಮನೋಜ್ಞವಾಗಿದೆ. ಮರಿಜಿಂಕೆ ತಾಯನ್ನು ಹಂಬಲಿಸುವಂತೆ ತಾನಾದರೂ ಕಿವಿಗೆ, ಎದೆಗೆ ಸೊದೆಗರೆಯುವ ನಲ್ನುಡಿಯ ನಲ್ಲೆಯನ್ನು ಸೇರಲು ಕಾತರನಾಗಿದ್ದೇನೆ ಎಂಬರ್ಥದ ಮಾತನ್ನು ಆಡುತ್ತಾನೆ ಲಕ್ಷ್ಮಣ. ಮರಿಯನ್ನು ಕುರಿತು, "ತಾಯಂತೆ ಲಾಲಿಸಲು, ಪಾಲಿಸಲು, ಪ್ರೀತಿಸಲು ಬಲ್ಲ ತಾಯ್ತನದ ತಪಸಿಯ ಮಡಿಲಲ್ಲಿ ನಿನ್ನನ್ನು ಇರಿಸುತ್ತೇನೆ" ಎಂದು ಲಕ್ಷ್ಮಣನು ಹೇಳುವಾಗ ಊರ್ಮಿಳೆ ಬರಿಯ ಹೆಣ್ಣಲ್ಲ: ತಾಯ್ತನವೇ ಸಾಕಾರವೆತ್ತು ಕಣ್ಣ ಮುಂದೆ ನಿಂತಂತಾಗುತ್ತದೆ; ಅವನಿಗೆ ತನ್ನ ಸತಿಯ ಬಗ್ಗೆ ಎಂತಹ ಉಚ್ಚ ಭಾವವಿದೆ ಎಂಬುದು ವ್ಯಕ್ತವಾಗುತ್ತದೆ. ವನವಾಸಕ್ಕೆ ಹೊರಡುವಾಗ ಊರ್ಮಿಳೆ 'ಬಾಲೆ'; ಈಗ 'ಸ್ಥಿರೆ, ಗಂಭೀರೆ, ತಪದ ಪರಿಚಯದಿ ಪರಿಶುದ್ಧೆ'— ಎಂದುಕೊಳ್ಳುವನು ಲಕ್ಷ್ಮಣ. ಊರ್ಮಿಳೆಯ ಸಮೀಪ ಬಂದ ಲಕ್ಷ್ಮಣ "ದೇವಿ ನಿನ್ನ ತಪ ಮುಗಿದುದೆಯೋ" ಎಂದಾಗ ಅವಳ ಉತ್ತರ "ಈಗಲೇ ಸಿದ್ಧಿ;"—ಮಡದಿಯಾದವಳಿಗೆ ಬಾಳಿನಲ್ಲಿ ಇದಕ್ಕಿಂತ ದೊಡ್ಡ ಲಾಭ—ಪತಿಯ ಸಾನಿಧ್ಯ—ಬೇರೊಂದಿದೆಯೇ? ಹದಿನಾಲ್ಕು ವರ್ಷಗಳ ಅಗಲಿಕೆ ಊರ್ಮಿಳೆಗೊಂದು ಶಾಪವಲ್ಲ; "ಉಭಯ ಜೀವನದ ಶೋಧನೆಗೊಂದು ಅವಕಾಶ". ವಿರಹದ ಕುಲುಮೆಯಲ್ಲಿ ಇಬ್ಬರ ಬದುಕೂ ಪುಟಕ್ಕಿಟ್ಟ ಬಂಗಾರದಂತೆ ಸ್ವಚ್ಛವಾಯಿತು, ಶುದ್ಧವಾಯಿತು; ಬೇರೆ ಬೇರೆಯಾಗಿರಬಹುದಾಗಿದ್ದ

ಎರಡು ಜೀವ ಲೋಹಗಳು ಚೆನ್ನಾಗಿ ಬೆರೆತು ಒಂದಾಯಿತು.

ಮುಂದೆ ಲಕ್ಷ್ಮಣನು ಸೀತಾಪಹರಣ ವೃತ್ತಾಂತವನ್ನು ಚಿತ್ರಿಸುವ ಭಾಗವು ರಮ್ಯವಾಗಿದೆ ; ಕನ್ನಡಿಯಲ್ಲಿ ಆನೆಯನ್ನು ತೋರುವಂತೆ ಅಡಕವಾಗಿದೆ. ಅದರಲ್ಲೂ ಶೂರ್ಪನಖೀ ಸಂದರ್ಭವು ಮೃದು ಹಾಸ್ಯರಂಜಿತವಾಗಿದೆ. ಆ ಮೇಲಿನ ಕಥಾಭಾಗವು ಊರ್ಮಿಳೆಯ ಆತುರ—ಉದ್ವೇಗ—ಸಂದೇಹ ಸೂಚಕವಾದ ವಿವಿಧ ಪ್ರಶ್ನೆಗಳಿಂದಲೂ, ಲಕ್ಷ್ಮಣನ ಸಮರ್ಪಕ ಉತ್ತರಗಳಿಂದಲೂ ಪಾಠಕರ ಚಿತ್ತವನ್ನು ಹಿಡಿದು ನಿಲ್ಲಿಸುತ್ತದೆ. ಕಾಂಚನಮೃಗ ನಿಮಿತ್ತವಾಗಿ ಪಂಚವಟಿಯ ಪರ್ಣಕುಟಿಯನ್ನು ಬಿಟ್ಟು ದೂರ ಹೋದ ರಾಮಲಕ್ಷ್ಮಣರು, ಹಿಂದೆ ಬಂದದ್ದು ಹೀಗೆ :—

“ ತನು ಮುಂದೋ, ಮನ ಮುಂದೋ ಎಂದು........”

ರಾವಣ ವಧೆಯ ಬಳಿಕ, ರಾಮನು ಸೀತೆಯನ್ನು ‘ ಸಂಶಯಗೊಂಡ ಪಾಮರರಿಗಾಗಿ ’ ಅಗ್ನಿಪರೀಕ್ಷೆಗೆ ಒಳಪಡಿಸಬೇಕಾಯ್ತು ಎನ್ನುವಾಗ ಊರ್ಮಿಳೆಯ ಟಿಪ್ಪಣಿ :

“ ಶಿಕ್ಷೆ ಜಾನಕಿಗಲ್ಲ ; ಸಂಶಯಾತ್ಮರಿಗಾಯ್ತು ;”

ಹೀಗೆ ಊರ್ಮಿಳೆ—ಲಕ್ಷ್ಮಣರ ಪ್ರಶ್ನೋತ್ತರ ಸಂದರ್ಭವು ಚುರುಕಾಗಿಯೂ, ಚುಟುಕಾಗಿಯೂ ಸೊಗಸಾಗಿದೆ. ಸೀತಾರಾಮರ ಸಲ್ಲಾಪಪ್ರಸಂಗವೂ ಹೀಗೆಯೇ ಹೃದ್ಯವಾದದ್ದು. ‘ ತಪಸ್ವಿನೀ ’ಯಾದ ಊರ್ಮಿಳೆಯನ್ನು ಕಂಡಾಗ ರಾಮನಾಡುವ ಮಾತು :

“ ಸೀತಾ ! ಅಚ್ಚರಿಯೊಳಚ್ಚರಿಯು, ಮನವ ಜಯಿಸಿದಳೀಕೆ ರಣವ ಹೂಡಿದೆ ನೀನು !”

ರಾಮ ಸೀತೆಯರಿಬ್ಬರೂ ಊರ್ಮಿಳೆ—ಲಕ್ಷ್ಮಣರನ್ನು “ ಹಿರಿಯರಿವರೆಮ್ಮಿಂದೆ ” ಎಂದು ಕೊಂಡಾಡುವರು. ಅಂತಹ ಮನ್ನಣೆಯ ಮಾತಿಗೆ ಪ್ರತಿಯಾಗಿ ಊರ್ಮಿಳೆ—

“ ತಾಯಿ : ಸಾಹಸನ ನಾ ಕಾಣೆ. ತಪವ ನಾನರಿಯೆ ” ಎಂದೂ ಲಕ್ಷ್ಮಣನು—

“ ಎನಿತು ಕೊಂಡಾಟವೆಮಗೆ ನಿಮ್ಮ ಹರಕೆಯೊಳಾದುದೆಮ್ಮ ಧನ್ಯತೆ ” ಎಂದೂ

ತಮ್ಮ ತಮ್ಮ ನಿರಹಂಕಾರ ಬುದ್ಧಿಯನ್ನು ತೋರುವರು. ಹೀಗೆ ಹುಸಿ ಮುನಿಸು, ನಸು ಹಾಸ್ಯ, ಕೊಂಡಾಟ, ವಿನಯಮಂತಿಕೆಗಳ ಮಾತುಕತೆಗಳಲ್ಲಿ ರೂಪಕವು ಕೊನೆಗೊಳ್ಳುತ್ತದೆ.

ಅಂಗ್ಯೆಯಗಲದ ಈ ಕಿರು ನಾಟಕದಲ್ಲಿ ‘ ಭಾರತಿ ’ಯವರು ಊರ್ಮಿಳೆಯ ಶೀಲ ಸ್ವಭಾವಗಳ ಖಚಿತವಾಗಿ ರೇಖಿಸಿದ್ದಾರೆ. ಲಕ್ಷ್ಮಣನು ಆ ಸಾಧ್ವಿಗೆ ತಕ್ಕ ಪತಿಯಾಗಿ, ರಾಮನಿಗೆ ತಕ್ಕ ಸೋದರನಾಗಿ ಬೆಳಗುತ್ತಾನೆ. ಇರುವ ಅವಕಾಶದಲ್ಲಿ ಸೀತಾ—ರಾಮರ ಪಾತ್ರ ನಿರೂಪಣೆಯನ್ನೂ ಸೊಗಸಾಗಿ ಮಾಡಿದ್ದಾರೆ. ನಾಲ್ಕು ಮಾತುಗಳಲ್ಲಿ ರಾಮಭಕ್ತ ಹನುಮಂತನ ವ್ಯಕ್ತಿತ್ವವನ್ನು ಸ್ಫುಟವಾಗಿ ಪರಿಚಯಿಸಿದ್ದಾರೆ. ಇಲ್ಲಿಯ ಮಾತುಗಳೆಲ್ಲ ಕಿರುದಾಗಿ, ಸರಳವಾಗಿ, ಅರ್ಥವತ್ತಾಗಿವೆ. ಸನ್ನಿವೇಶ ಚಿತ್ರಣವು ದೃಶ್ಯಕಾವ್ಯಕ್ಕೆ ಒಪ್ಪುವಂತಿವೆ. ಮಾಸ್ತಿಯವರು ಹೇಳುವಂತೆ, ‘ ತಪಸ್ವಿನಿ ’ ಯು—“ ಸಹಜವಾದ ಕಾವ್ಯದೃಷ್ಟಿಯೂ ಸರಳವಾದ ಕಾವ್ಯಶಕ್ತಿಯೂ ಸೇರಿ ಸುಂದರವಾದ ಒಂದು ಕಾವ್ಯ ”.

ರಾಮಾಯಣದಲ್ಲಿ ಇಲ್ಲದ ಒಂದು ಸ್ನಿಗ್ಧ ವಾತಾವರಣದ ಕೋಮಲ ಪ್ರಪಂಚವನ್ನು ಕಣ್ಣೆದುರು ತೆರೆಯಬಲ್ಲ ಕೃತಿ ' ತಪಸ್ವಿನೀ '.

ಶ್ರೀಮತಿ ' ಭಾರತಿ 'ಯರು ' ತಪಸ್ವಿನಿ 'ಯ ವಸ್ತುವಿನಲ್ಲಿ ಮಾತ್ರ ನೂತನತೆಯನ್ನು ತೋರಿದ್ದಲ್ಲ; ದೃಶ್ಯಕ್ಕಾಗಿ ಬಳಸಿದ ಬಂಧದಲ್ಲೂ ಅಂತಹದೇ ನವೀನ ದೃಷ್ಟಿಯಿದೆ. ಇಂಗ್ಲಿಷಿನ 'blank verse 'ಗೆ ಸಂವಾದಿಯಾಗುವಂತಹ ' ಸರಳರಗಳೆ 'ಯನ್ನು (ಶ್ರೀ ಮಾಸ್ತಿಯವರು ಇದನ್ನು ' ಬಿಡಿವೃತ್ತ 'ವೆಂದು ಕರೆದಿದ್ದಾರೆ) ಇದರಲ್ಲಿ ಪ್ರಯೋಗಿಸಿದ್ದಾರೆ. ಕನ್ನಡದಲ್ಲಿ ಹೊಸ ಹೊಸ ಛಂದಸ್ಸುಗಳಿನ್ನೂ ಪ್ರಯೋಗಸ್ಥಿತಿಯಲ್ಲಿದ್ದಾಗ ಭಾರತಿಯವರು ಹಿಡಿದ ದಾರಿ ನಿಜವಾಗಿಯೂ ಶ್ಲಾಘನೀಯವೇ. ಈ ಬಗೆಯ ಛಂದಸ್ಸನ್ನು ರೂಪಿಸಿ ಕೊಳ್ಳುವಲ್ಲಿ ಲೇಖಿಕೆಯ ಸ್ವೋಪಜ್ಞತೆಯು ಚೆನ್ನಾಗಿಯೇ ಪ್ರಕಟವಾಗುತ್ತದೆ.

ಹೊಸಗನ್ನಡದಲ್ಲಿ ಸಾಹಿತ್ಯ ನಿರ್ಮಾಣಮಾಡಿ ಮಹಿಳೆಯರು ಒಂದು ಗಣ್ಯ ಸ್ಥಾನ ವನ್ನು ಗಳಿಸಿದ್ದು ಕೇವಲ ಎರಡು ದಶಕಗಳ ಈಚೆಗೆ. ಶ್ರೀಮತಿ ತಿರುಮಲೆ ರಾಜಮ್ಮನಾದರೊ ಇದಕ್ಕಿಂತ ಎಷ್ಟೋ ಹಿಂದೆ, ಅಖಿಲ ಕರ್ನಾಟಕದ ಮಹಿಳೆಯರೆಲ್ಲರ ಪರ ವಾಗಿ ನೀಡಿದ ಮುಂಗಡವೇ ' ತಪಸ್ವಿನಿ ', ಆದರಿಂದಾಗಿ ಕನ್ನಡ ಕಾವ್ಯ ಪ್ರೇಮಿಗಳಿಗೆ ಮಹಿಳೆಯರ ಲೇಖನ ಸಾಮರ್ಥ್ಯಗಳಲ್ಲೂ ವಿಚಾರ ಶಕ್ತಿಯಲ್ಲೂ ಭರವಸೆ ಹುಟ್ಟಿ, ಅವರ ಕೃತಿಗಳನ್ನು ಆತುರದಿಂದ ಹಾರೈಸುವಂತಾಯಿತು.

## ೧೮. ಪ. ರಮಾನಂದರ 'ಹೂಬಾಣಗಳು'

'ನಕ್ಕು ನಗಿಸುವಾ ನುಡಿ ಲೇಸು' ಎಂದು ಉದ್ಘೋಷಿಸಿದ ಪ್ರಾಚೀನ ಕವಿ ಸರ್ವಜ್ಞ. 'ನಗುವು ಸಹಜದ ಧರ್ಮ, ನಗಿಸುವುದು ಪರಧರ್ಮ'ವೆಂದು ಸಾರಿದರು. ಅರ್ವಾಚೀನ ಡಿ. ವಿ. ಜಿ. ನಿತ್ಯಜೀವನದ ನೋವು ನುಲಿತಗಳನ್ನು ಮರೆತು ಕಳೆಯುವುದಕ್ಕೆ ನಗೆ ಯಂತಹ ಭೇಷಜ ಬೇರೊಂದಿಲ್ಲ ಎಂಬುದನ್ನು ಜನ ಎಂದೋ ಕಂಡುಕೊಂಡಿದ್ದರು. 'laugh and grow fat' ಎಂಬುದು ಸುಪ್ರಸಿದ್ಧ ಆಂಗ್ಲ ಸೂಕ್ತಿ. ಜೋನಾಥನ್ ಸ್ವಿಫ್ಟ್‌ನ ಅಭಿಮತದಂತೆ ಆರೋಗ್ಯ ಪ್ರದಾಯಕ ವೈದ್ಯತ್ರಯದಲ್ಲಿ 'Docter Merry Man' (ವಿನೋದಶೀಲ) ಒಬ್ಬ. ತ್ರಿಮೂರ್ತಿಗಳ ಮುಖಾರವಿಂದದಲ್ಲೂ ಹಾಸ್ಯದ ಮಕರಂದವನ್ನು ಕಂಡುಕೊಂಡಿದ್ದಾರೆ ನಮ್ಮ ಕವಿಗಳು. ಆದುದರಿಂದ ನಗೆಯ ಸಾರ್ವತ್ರಿಕತೆ, ಸಾರ್ವದೇಶಿಕತೆಗಳ ಬಗ್ಗೆ ಹೆಚ್ಚು ಹೇಳಬೇಕಾಗಿಲ್ಲ.

ಹೀಗಿದ್ದರೂ 'ಭಾರತೀಯರ ಮುಖಕ್ಕೆ ನಗೆಯ ಪರಿಚಯವಿಲ್ಲ' ಎಂಬ ಅಪವಾದ ವಿರುವುದು ಎಂತಹ ವಿಪರ್ಯಾಸ! ಆದರೆ ಈ ಆರೋಪ ಸಾಹಿತ್ಯಕ್ಕೆ ಸಂಬಂಧಿಸಿದುದೇ ವಿನಾ ಜನಜೀವನಕ್ಕಲ್ಲ. ಜೀವನದಲ್ಲಿ ಸರ್ವವ್ಯಾಪಿಯಾದ ಹಾಸ್ಯ ಸಾಹಿತ್ಯದಲ್ಲಿ ಏಕೆ ಸ್ಥಾನ ಗಳಿಸಲಿಲ್ಲ ಎಂಬುದು ಒಂದು ನಿಗೂಢ ರಹಸ್ಯವೇ ಸರಿ. ನಮ್ಮ ಕಾವ್ಯ ತತ್ವಜ್ಞರು ಎಂಟೋ-ಒಂಬತ್ತೋ ರಸಗಳಲ್ಲಿ 'ಹಾಸ್ಯ'ವೂ ಒಂದೆಂದು ಹೆಸರಿಸಿ, ಅದರ ನಾನಾ ಪ್ರಭೇದಗಳನ್ನು ಸ್ಮಿತ, ಹಸಿತ, ವಿಹಸಿತ, ಉಪಹಸಿತ, ಅಪಹಸಿತ, ಅತಿಹಸಿತ, ಹೀಗೆಂದು ಪಟ್ಟಿಮಾಡಿ ವಿವರಿಸಿದ್ದಾರೆ. ಸಾಲದುದಕ್ಕೆ 'ಅಂತಃಸ್ಮಿತ', 'ಕೋಪಗರ್ಭ ಸ್ಮಿತ' ಮುಂತಾದುವೂ ಕಾಲಾಂತರದಲ್ಲಿ ಪಟ್ಟಿಯನ್ನು ಸೇರಿಕೊಂಡಿವೆ. ಇಷ್ಟೊಂದು ಸೂಕ್ಷ್ಮ ವಾಗಿ ಹಾಸ್ಯರಸ ವಿವೇಚನೆ ಮಾಡಿರುವ ನಮ್ಮ ಜನ ಅದೇಕೆ ಹಾಸ್ಯರಸ ಸೃಷ್ಟಿ ಮಾಡದೆ ಸಾಹಿತ್ಯ ಕ್ಷೇತ್ರವನ್ನು ಗಾರುಗಟ್ಟಿಸಿದರೋ ಹೇಳಲಾಗದು.

ಭಾರತೀಯ ದೇಶಭಾಷಾ ಸಾಹಿತ್ಯಗಳ ಮಾತು ಹಾಗಿರಲಿ, ಅವೆಲ್ಲಕ್ಕೂ ಮಾತೃಕಾ ಪ್ರಾಯವಾಗಿ, ವೈವಿಧ್ಯ-ವೈಫಲ್ಯಗಳಲ್ಲಿ ಅಸ್ವಾದೃಶ್ಯವೆಂಬಂತಿರುವ ಸಂಸ್ಕೃತದಲ್ಲೇ ಹಾಸ್ಯವು ಅಲ್ಲಿ-ಇಲ್ಲಿ ತೊಟ್ಟಿಕ್ಕುತ್ತಿದೆಯೇ ವಿನಾ ಎಲ್ಲೂ ನಿರ್ಜರವಾಗಿ ಹರಿದದ್ದಿಲ್ಲ. ವಾಲ್ಮೀಕಿ ವ್ಯಾಸಾದಿ ಮಹಾಕವಿಗಳಲ್ಲೂ ಭಾಸಕಾಳಿದಾಸಾದಿ ನಾಟಕಕಾರರಲ್ಲೂ ನಗೆ ಮಿಂಚು ಒಮ್ಮೊಮ್ಮೆ ಸುಳಿಯುವುದನ್ನಷ್ಟೇ ಕಾಣಬಹುದು. ಈ ಕೆಲವು ಕವಿ-ಕಾವ್ಯ ಪ್ರಸಂಗಗಳನ್ನು ಬಿಟ್ಟರೆ ಮಿಕ್ಕೆಡೆಗಳಲ್ಲಿ ಕಂಡುಬರುವ ಹಾಸ್ಯವಾದರೂ ಎಂತಹದ್ದು ?- ಅದು ಮಲ್ಲಿಗೆಯ ಘಮಲಲ್ಲ, ಉಳ್ಳಾಗಡ್ಡೆಯ ಘಾಟು! ಮುಖ ಮುಚ್ಚಿಕೊಳ್ಳೋಣ ಎಂಬಷ್ಟು ಅಸಭ್ಯವಾದದ್ದು. 'ಕಾವ್ಯೇಷು ರಮ್ಯ'ವಾದ ನಾಟಕಗಳಲ್ಲೂ ಹೊಟ್ಟೆ ಯುಳಿದು ಕೊಂಡು ತೆವಳಾಡುವ ತಿಂಡಿ ಬಾಕ ವಿದೂಷಕ-ಅವನ ನಿದ್ದೆ, ಗೊರಕೆ, ಅಸಂಬದ್ಧ ಜಲ್ಪಗಳಲ್ಲೇ ಹಾಸ್ಯದ ಪರಮಾವಧಿ, ಸಮಾಧಿ! ಅಪವಾದವೆಂಬಂತೆ ಶೂದ್ರಕನೊಬ್ಬ 'ಮೃಚ್ಛಕಟಿಕ' ಪ್ರಕರಣದಲ್ಲಿ ನಿರ್ಮಲ ಹಾಸ್ಯಕ್ಕೆ ಪಟ್ಟವಣೆಯನ್ನು ಕೊಟ್ಟ.

ಇನ್ನು ಹಳೆಗನ್ನಡ ಸಾಹಿತ್ಯವನ್ನು ಪಿಕ್ಕಿ ನೋಡಿದರೆ (ನಾಟಕವೇ ಇಲ್ಲವೆಂಬುದು ವಿಚಾರಣೀಯ) ಪದ್ಯ ಕಾವ್ಯಗಳಲ್ಲಿ ನಾರಣಪ್ಪನ ಉತ್ತರ ಭೂಪ, ರತ್ನಾಕರನ ಭರತಚಕ್ರೇಶ ವಾಚಕರಿಗೆ ಕಚಗುಳಿಯಿಡುತ್ತಾರೆ. ಹಳಬರಲ್ಲಿ ಕೊನೆಯವನಾಗಿ, ಹೊಸಬರಲ್ಲಿ ಮೊದಲಿಗನಾದ ಮುದ್ದಣ ಹಾಸ್ಯದ ಒಳ ಹೊರಗುಗಳನ್ನು ಚೆನ್ನಾಗಿ ಬಲ್ಲ 'ನಗೆಗಾರ'ನೇ ಸರಿ!–ಅವನ 'ಹಿಂದೆಯೇ ಹೊಸಗನ್ನಡ ಹುಟ್ಟಿತು.' ಜತೆಯಲ್ಲಿ ನಗೆಗಾರಿಕೆಯೂ ಬೆಳೆಯಿತು.

ಹಳೆಗನ್ನಡದಲ್ಲಿ ವಾಮನನಾಗಿದ್ದ ಹಾಸ್ಯಮೂರ್ತಿ ಆಧುನಿಕ ಸಾಹಿತ್ಯದಲ್ಲಿ ತ್ರಿವಿಕ್ರಮನಾಗಿರುವುದನ್ನು ಕಾಣುತ್ತೇವೆ. ಸಣ್ಣ ಕತೆ, ಕಾದಂಬರಿಗಳಲ್ಲಿ, ನಾಟಕಗಳಲ್ಲಿ, ವ್ಯಂಗ್ಯ–ವಿಡಂಬನೆಗಳಲ್ಲಿ, ಲಘು ಪ್ರಬಂಧಗಳಲ್ಲಿ, ಕವಿತೆಗಳಲ್ಲಿ, ಪತ್ರಿಕೆಗಳಲ್ಲಿ ಹೀಗೆ ಸರ್ವವ್ಯಾಪ್ತಿಯಾಗಿದೆ ಹಾಸ್ಯ. ನಗೆಗೇ ಮೀಸಲಾದ 'ಕೊರವಂಜಿ' ಯಂತಹ ಪತ್ರಿಕೆ ಎರಡು ದಶಕಗಳಷ್ಟು ಕಾಲ ಜನಕ್ಕೆ ಮಂತ್ರ ಹಾಕಿ, ಕಾಡಿಗೆ ಓಡಿಹೋದದ್ದು ಮಾತ್ರ ಶೋಚನೀಯ. ವಿಕಟ ವಿನೋದಿನಿ–ವಿನೋದಗಳಂತಹ ಪತ್ರಿಕೆಗೂ ಕನ್ನಡದಲ್ಲಿ ಹಾಸ್ಯವು ಹಬ್ಬಿ ಹರಿಯಲು ಯಥಾಶಕ್ತಿ ಶ್ರಮಿಸಿವೆ. ಇಪ್ಪತ್ತೈದು ವರ್ಷಗಳಷ್ಟು ಹಿಂದೆ ಪ್ರಸಿದ್ಧವಾದ, ಅದಕ್ಕಿಂತಲೂ ಹಿಂದೆಯೇ ಸಿದ್ಧವಾಗಿದ್ದ ಪಡುಕೋಣೆ ರಮಾನಂದರಾಯರ 'ಹೂಬಾಣಗಳು.' ಕನ್ನಡದಲ್ಲಿ ಮರೆಯಲಾಗದೊಂದು ಹಾಸ್ಯಕೃತಿ. ಅದರ ಪರಿಚಯ ಈ ಲೇಖನದ ಉದ್ದೇಶ.

'ಹುಚ್ಚು ಬೆಳದಿಂಗಳ ಹೂಬಾಣಗಳು' (ಪುಸ್ತಕದ ಇಡಿಯ ಹೆಸರು) ಹದಿನಾಲ್ಕು ಪ್ರಬಂಧಗಳ ಒಂದು ಬತ್ತಳಿಕೆ. ಬತ್ತಳಿಕೆಯ ಬಾಣಗಳಲ್ಲಿ ಎಲ್ಲವುಗಳ ಮೊನೆಗೂ ಸವರಿದ ನಗೆಯ ಲೆಪ್ಪ ಒಂದೇ ಪ್ರಮಾಣದಲ್ಲಿದೆ ಎನ್ನಲಾಗದು. ಕೊಡೆಯ ವಿಚಾರ, ಹರಿಕಮತನ ನೆನಪು, ಚಿಕ್ಕರಾಮು ಅಜ್ಜಿಗೆ ಹೇಳಿದ ಕಥೆ, ನನ್ನ ಭಾವ, ಅಂಕುಡೊಂಕು ಸಂಕಪಾಲ, ಪತ್ತೇದಾರನಾದ ಸೂಕ್ಷ್ಮಬುದ್ಧಿ, ನಾನು ನಾಗಣ್ಣ ಈ ಏಳು ಮಾತ್ರ ಶುದ್ಧಾಂಗವಾಗಿ ಹಾಸ್ಯ ಪ್ರಬಂಧಗಳು. ಉಳಿದ ಏಳರಲ್ಲಿ ಅಷ್ಟಿಷ್ಟು ನಗೆಯ ತುಂತುರುಗಳಿದ್ದರೂ ಅವು ಕಥಾಂಶ ಪ್ರಧಾನ. ಹಾಗೆಯೇ ಹಾಸ್ಯಾತ್ಮಕ ಪ್ರಬಂಧಗಳಲ್ಲಿ 'ನನ್ನ ಭಾವ' ಮಾತ್ರ ಕನ್ನಡಿಗರು ಎಂದೆಂದಿಗೂ ಮರೆಯಬಾರದ ಪ್ರಬಂಧ. ಕನ್ನಡಕ್ಕೊಬ್ಬನೇ 'ನನ್ನ ಭಾವ' ಎಂದರೂ ಸರಿಯೇ; ಆತ ಶೂದ್ರಕನ ಶಕಾರ, ಕುಮಾರವ್ಯಾಸನ ಉತ್ತರಕುಮಾರ, ಶೇಕ್ಸ್‌ಪಿಯರಿನ ಫಾಲ್‌ಸ್ಟಾಫ್‌ರಂತೆ ಚಿರಂಜೀವಿ. ಅನಾವಶ್ಯಕ ಪ್ರಶ್ನೆ ಕೇಳಿ ಕೊರೆಯುವವರು ನಮ್ಮಲ್ಲೇನೂ ಕಡಮೆಯಿಲ್ಲ. ಅಂತಹ ಅಧಿಕಪ್ರಸಂಗಿಯೊಬ್ಬ ನನ್ನ ಭಾವ–ಈ ಪ್ರಬಂಧದಲ್ಲಿ ಮಾಡುವ ಹಾವಳಿ, ಅದಕ್ಕೆ ಲೇಖಕರು ನೀಡುವ ಉಚಿತ ಉತ್ತರ ಓದುಗರು ತುಟಿ ಮೀರಿ ನಗುವಂತೆ ಮಾಡುತ್ತವೆ. ಅದರಲ್ಲೂ ಕೊನೆಕೊನೆಗೆ ಲೇಖಕರು ಸೋತು, ಸಹನೆ ಮೀರಿ, ಕ್ಷೌರದ ಕತ್ತಿಯನ್ನು ಭಾವನತ್ತ ಬೀಸಿ "ಇದು....ನಿನ್ನಂಥ ಭಾವಂದಿರ ಕುತ್ತಿಗೆಯನ್ನು ಕಡಿಯುವ ಕತ್ತಿ!..." ಎಂದು ಗುಡುಗಾಡುವಾಗ ಹಲ್ಲು ಕಿರಿದು, ಕಣ್ಣು ಪಿಳುಕಿಸಿ ಕೇಳುತ್ತಿದ್ದು, ಗುಡುಗೆಲ್ಲ ನಿಂತಮೇಲೆ

ತಣ್ಣಗೆ " ಭಾಡಯ್ಯಾ, ನಿನಗೆ ಸಿಟ್ಟು ಬಂದಿದೆಯೇ ?" ಎಂದು ಪ್ರಶ್ನಿಸುವಾಗಂತೂ ಓದು ಗನ ಪಕ್ಕೆ ಬಿರಿಯುತ್ತದೆ. ಭಾವನ ಈ ಪ್ರಶ್ನೆ ಶೇಕ್ಸ್‌ಪಿಯರನ "Look may Lord, it comes "ಮುಂತಾದ ಉದ್ಗಾರಗಳಂತೆ ಸಂದರ್ಭೋಚಿತವಾಗಿ ಉದ್ಧರಣ ಯೋಗ್ಯವಾದದ್ದು.

ನಗು ತರಿಸುವ ಇನ್ನೆರಡು ಬರೆಹಗಳೆಂದು 'ಹರಿಕಮತನ ನೆನಪು' ಮತ್ತು 'ಅಂಕುಡೊಂಕು ಸಂಕಪಾಲ'. 'ಹೂಬಾಣ'ಗಳಲ್ಲಿ ಲೇಖಕರು ಸ್ಥಾಯಿಯಾದರೆ ಹರಿ ಕಮತ ಸಂಚಾರಿ ; ಇಬ್ಬರೂ ಸೇರುವಾಗ ರಸೋತ್ಪತ್ತಿ. ಅರ್ಧಾಂಗಿನಿ ರುಕ್ಮಿಣಿ 'ಬಣ್ಣದ ಬೀಸಣಿಗೆ' ಎಂಬ ಸಿನೆಮಾ ನೋಡಬೇಕೆಂದು ಬಯಸಿದುದನ್ನು ಹರಿಕಮತನು ಮರೆತೇ ಬಿಟ್ಟು ಅದೇನೆಂದು ತಿಳಿಯಲು ಚಡಪಡಿಸುತ್ತಿರುವಾಗ ಮಿತ್ರ ರಮಾನಂದನು ಕಾಣಸಿಗು ವುದು, ಕಮತನಿಗೆ ನೆನಪಾಗಲೆಂದು 'ಬ' ಕಾರಾದಿಯಾದ ಒಂದೊಂದೇ ಶಬ್ದಗಳನ್ನು ಉಚ್ಚರಿಸಿದ ರಮಾನಂದ ಸೋತು ಬಕರಾ ಆಗುವುದು 'ಹರಿಕಮತನ ನೆನಪು' ಎಂಬ ಪ್ರಬಂಧದ ವಸ್ತು. 'ಅಂಕುಡೊಂಕು ಸಂಕಪಾಲ' ಎಂಬ ಒಗಟು ಬೇತಾಳದಂತೆ ಲೇಖಕನ ಬೆನ್ನು ಹತ್ತಿ ಅದನ್ನು ಬಿಡಿಸಲಾರದೆ ಆತ ಒದ್ದಾಡುತ್ತಿರುವಾಗ ಮಿತ್ರನನ್ನು ನೋಡಲೆಂದು ಬಂದ ಹರಿಕಮತನನ್ನು ಆ ಪಿಶಾಚಿ ಹಿಡಿದುಕೊಳ್ಳುವುದೂ ತುಂಬ ರೋಚಕವಾಗಿದೆ–'ಅಂಕುಡೊಂಕು ಸಂಕಪಾಲ'ದಲ್ಲಿ.

'ಕೊಡೆಯ ವಿಚಾರ'ದಲ್ಲಿ ಲೇಖಕರ ವಿಚಾರ–ವಿಲಾಸ ಕೊಡೆಯ ಬೆನ್ನೇರಿ ವಿಹರಿ ಸುವುದು ಸ್ವಾರಸ್ಯವಾಗಿದೆ. ಕೊಡೆಯೆಂದರೇನು ಎಂದು ಜಿಜ್ಞಾಸೆ ಮಾಡುತ್ತಾ ಅದರ ಬಣ್ಣ, ಬಟ್ಟೆ, ಗಾತ್ರ, ಕಡ್ಡಿ, ಕಾಲು ಮುಂತಾದುವನ್ನೆಲ್ಲ ವರ್ಣಿಸಿ, ಕೊಡೆಗೂ ತನಗೂ 'ದೀರ್ಘ ಕಾಲದ ದಾಂಪತ್ಯ ಸುಖವನ್ನು ವಿಧಾತನು ಕರುಣಿಸಲೇ ಇಲ್ಲ'ವೆಂದು ಲೇಖ ಕನು ಕೊರಗುವುದಾಗಲೀ, ಸ್ವಂತದ ಕೊಡೆ ಕೈಬಿಟ್ಟು ಹೋದಾಗ ಪರರ ಕೊಡೆಗೆ ಕೈ ಕೊಡಬೇಕೆಂಬ ರಹಸ್ಯ ಮಂತ್ರೋಪದೇಶವಾಗಲಿ ವಿನೋದಪೂರ್ಣವಾಗಿದೆ. 'ಚಿಕ್ಕ ರಾಮು ಅಜ್ಜಿಗೆ ಹೇಳಿದ ಕಥೆ' ಅಜ್ಜಿ ಕತೆಯಂತೆಯೇ ಕಲ್ಪನಾ ರಮ್ಯವಾದುದು. ವಿಶೇಷ ತೆಯೆಂದರೆ ಅಜ್ಜಿ ಕೂಡ ನಂಬದ ಕತೆಯನ್ನು ಮೊಮ್ಮಗ ಹೇಳುವುದು !–ಗಿಳಿಮರಿಯನ್ನು ಹೆರುವ ಕೋಳಿ ತತ್ತಿಯನ್ನು ಸೂಜಿ ಮೊನೆಯ ಮೇಲೆ ನಿಂತು ಚಿಕ್ಕರಾಮು ಹುಡುಕು ವುದು, ಮಾವಿನ ಮರದಲ್ಲಿ ಕಲ್ಲಂಗಡಿ ಹಣ್ಣು ಪುಷ್ಕಳವಾಗಿ ಬೆಳೆಯುವುದು, ಅಂತಹ ಒಂದು ಹಣ್ಣಿನೊಳಕ್ಕೆ ಚಿಕ್ಕರಾಮು ಹೊಕ್ಕು ಹೊರಡುವುದು ಇವೆಲ್ಲ ಚಿಕ್ಕ ಮಕ್ಕಳ ಕಿವಿ ನಿಗುರಿಸುವ ಅದ್ಭುತ ಪ್ರಸಂಗಗಳೇ ಸರಿ. 'ಪತ್ತೇದಾರನಾದ ಸೂಕ್ಷ್ಮ ಬುದ್ಧಿ' ಎಂಬುದು ಒಂದು ಕಾಲದಲ್ಲಿ ನಾಯಿ ಕೊಡೆಗಳಂತೆ ಕನ್ನಡದಲ್ಲಿ ತಲೆಯೆತ್ತುತ್ತಿದ್ದ ಸಾಸಿವೆ ಕಾಳಿನಷ್ಟು ಉಚಿತತೆ–ಸಹಜತೆಗಳಿಲ್ಲದಿದ್ದರೂ 'ರಹಸ್ಯಮಯ, ಅತ್ಯಾಶ್ಚರ್ಯಕರ, ಅದ್ಭುತ ರಮ್ಯ ಪತ್ತೇದಾರಿ ಕಾದಂಬರಿ'ಗಳೆಂದು ಮೆರೆಯುತ್ತಿದ್ದ ಅಬದ್ಧ ರಚನೆಗಳ ನವಿರಾದ ವಿಡಂಬನ. ಅರವಿಂದ–ಕೇಸರಿಗಳೆಂಬ ದಂಪತಿಗಳಿಗೆ ದಾಂಪತ್ಯ ಯೋಗವನ್ನು ಬೋಧಿಸಿ ಅವರ ನಡುವೆ ಸಾಮರಸ್ಯದ ಸೇತುವನ್ನು ಬಿಗಿಯುವವನು ನಾಗಣ್ಣ. ಆ ಕುರಿತಾದ ಲೇಖನ 'ನಾನು

ನಾಗಣ್ಣ'. ಆ ಗಂಡಹೆಂಡಿರ ವಕ್ರಚೇಷ್ಟೆಗಳಲ್ಲಿ, ವಿನೋದಕ್ಕೆ ಧಾರಾಳ ಅವಕಾಶ ವಿದೆ.

ಕಥಾತ್ಮಕವಾದ ಏಳು ಪ್ರಬಂಧಗಳಲ್ಲಿ 'ವಿಮೋಚನೆ' ಹೆಚ್ಚು ರಸವತ್ತಾದದ್ದು. ಮುದ್ದು ಹುಡುಗಿ ಕಮಲೆ ತನ್ನ ನಡೆ ನುಡಿಗಳಿಂದ ಸರ್ವೋತ್ತಮ ನಾಯಕನ ಕಲ್ಲೆದೆ ಯನ್ನೂ ಕರಗಿಸಿ, ಅದರಲ್ಲಿ ದಯೆಯ ಎಳಲತೆಯೊಂದು ಕುಡಿಯೊಡಿಯುವಂತೆ ಮಾಡಿ ಬಿಡುವ ಸನ್ನಿವೇಶ ಸರ್ವೋತ್ತಮ ನಾಯಕನಷ್ಟೇ ಅಲ್ಲ ಓದುಗರೂ ಕಂಬನಿ ಮಿಡಿಯು ವಷ್ಟು ಪ್ರಭಾವಿಯಾಗಿದೆ. ಶ್ರೀನಿವಾಸನ ಅಕೃತ್ಯ, ರಮೇಶ, ಚಿನ್ನದ ತೊಟ್ಟಿಲುಗಳಲ್ಲಿ ಹೆಚ್ಚಿನ ಕಥನ ಕೌಶಲವೇನೂ ಇಲ್ಲ. ಇವುಗಳಲ್ಲಿ ಕೈಯಲ್ಲಿದ್ದ ಒಂದು ಹಕ್ಕಿಯನ್ನು ಹಾರಬಿಟ್ಟು, ಪೊದೆಯೊಳಗಿನ ಎರಡಕ್ಕಾಗಿ ಕೈಚಾಚಿ ಮೂರನ್ನೂ ಕಳಕೊಳ್ಳುವ ರಮೇಶನ ಮೂರ್ಖತನಕ್ಕಾಗಿ ಒಂದಿಷ್ಟು ಮರುಕವುಂಟಾಗುತ್ತದೆ. 'ಆತ್ಮಹತ್ಯೆ' ಎಂಬುದರಲ್ಲಿ ಒಂದು ಕಾಲದ ನಾಟಕ-ನಾಟಕ ಮಂಡಳಿಗಳನ್ನು ನಗೆಯ ಜರಡಿಯಲ್ಲಿಟ್ಟು ಸೋಸುವು ದನ್ನು ಕಾಣಬಹುದು. ಅಂತ್ಯದ 'ದೀಪಾವಳಿ' ಅತ್ತ ಹಾಸ್ಯವೂ ಅಲ್ಲ, ಇತ್ತ ಕತೆಯೂ ಅಲ್ಲದ ಒಂದು ಲಘು ಪ್ರಬಂಧ. 'ಬಾಳಿನ ಗುಟ್ಟಿರುವುದು ತಾಳುವುದರಲ್ಲಿ' ಎಂಬ ಸಂದೇಶವನ್ನು ಬೀರುತ್ತಾ, ಇಡಿಯ ಗ್ರಂಥಕ್ಕೆ ಸಂಹರಣರೂಪದಲ್ಲಿದೆ' ದೀಪಾವಳಿ.'

ಇಲ್ಲಿರುವ ಲೇಖನಗಳಲ್ಲಿ ಹಲವದರ ಮೇಲೆ ಮಾರ್ಕ್‌ಟ್ವೈನ್, ವೋಡ್ ಹೌಸ್, ಜೇಕಬ್ಸ್, ಓ ಹೆನ್ರಿ ಮುಂತಾದವರ ನೆರಳು ಹಾದಿರುವುದನ್ನು ಲೇಖಕರೇ ಒಪ್ಪಿಕೊಂಡಿ ದ್ದಾರೆ. ಹಾಗಿದ್ದರೂ ಹಾಸ್ಯ ಪ್ರಬಂಧವೇ ಇರಲಿ, ಕಥೆಯೇ ಆಗಿರಲ್ಲಿ ಕನ್ನಡದ್ದಾಗಿಯೇ ಕಾಣುತ್ತವೆ ವಿನಾ 'ಸೀರೆಯುಟ್ಟ ದೊರೆಸಾನಿ'ಯಂತೆ ತೋರುವುದಿಲ್ಲ. ಪಾಶ್ಚಾತ್ಯ ಲೇಖಕರ ವರ್ಚಸ್ಸಿನಿಂದಾಗಿಯೇ ಆದರೂ ಕನ್ನಡದಲ್ಲಿ ಹುಲುಸಾದ ನಗೆಯ ಒಂದು ಬೆಳೆ ಬಂದಿರುವುದು ಶ್ಲಾಘನೀಯ ಸಂಗತಿಯೇ. ತಮ್ಮ ಕೃತಿ ಯಾರು ಯಾರಿಗೆ ಉಪಕೃತ ವಾಗಿದೆ ಎಂದು ಒಪ್ಪಿಕೊಳ್ಳುವ ಈ ಪ್ರಾಂಜಲತೆ ನಿಜವಾಗಿಯೂ ಅನುಸರಣೀಯ. ಎಲ್ಲ ತೊಂಡು ದನಗಳೂ ಮೇದು ಮಲಗಬಹುದಾದ 'ಗೋಮಾಳ' ಹಾಸ್ಯ ಎಂದು ಕೆಲವರು ತಿಳಿದುಕೊಂಡಂತಿದೆ; ಅದೇ ಸಾಧುವೆಂದು ಸಾಧಿಸುತ್ತಲೂ ಇದ್ದಾರೆ! ಏನೇ ಇರಲಿ, ಶ್ರೀ ಬೇಂದ್ರೆಯವರು ಮುನ್ನುಡಿಯಲ್ಲಿ ಹೇಳಿದಂತೆ "ಪ. ರಮಾನಂದ ರಾಯರ ಪರಮಾ ನಂದಕರವಾದ ಈ ಬರೆಹಗಳು ಕೇವಲ 'ಪ್ರಯೋಗ'ಗಳು ಎಂದು ಯಾರೂ ಒಪ್ಪಲಾರರು. ಅಲ್ಲಿಯ ನಗೆಯಲ್ಲಿ ಹೊಸತನವಿದೆ; ನವೀನ ದೃಷ್ಟಿಯಿದೆ, ಶೈಲಿಯಲ್ಲ ಹಿಡಿತವಿದೆ... ಒಂದೊಂದಲ್ಲೂ ಒಂದೊಂದು ಬಗೆಯ ಮೋದಕ, ಮಾದಕ, ಆಹ್ಲಾದಕ, ಚೋದಕ ಶಕ್ತಿಯಿದೆ."

ಪುಸ್ತಕದ ಹಾಳೆಗಳನ್ನು ತಿರುವುತ್ತಾ ಹೋದಂತೆ ಎದೆಯನ್ನು ಹೊಕ್ಕು ನೆತ್ತರನ್ನಲ್ಲ ನಗೆ ಹಾಲನ್ನು ಚಿಮ್ಮಿಸುವ ಹೂಬಾಣಗಳು ಅತ್ತಿತ್ತ ಹಾರಾಡುವದನ್ನು ಕಾಣುತ್ತೇವೆ—

"ಕೊಡೆ ರಾಮಗೆ ಸೀತೆಯನು....ರಾಮದೇವರ ಕಾಲದಲ್ಲಿಯೂ ಕೊಡೆಗಳಿ ದ್ದುವು...."

" ಅಂಗಡಿಕಾರನು....ಕಬ್ಬಿಣದ ಬಟ್ಟಲಲ್ಲಿ ಪಾಯಸವನ್ನು ಹಾಕಿ ನನ್ನ ಮುಂದಿಟ್ಟನು. ಪಾಯಸ ಆ ಬಟ್ಟಲಲ್ಲಿ ನಿಜವಾಗಿಯೂ ಇತ್ತೆಂದು ಒಂದು ಭೂತಕನ್ನಡಿಯಿಂದ ನೋಡಿ ಸಮಾಧಾನಪಟ್ಟೆನು. "

" ನಿಶ್ಶಬ್ದವನ್ನು ' ದೇವಿ ' ಎಂದು ನಮ್ಮ ಬರೆಹಗಾರರು ಯಾಕೆ ಸಂಬೋಧಿಸುವರೋ ನನಗೆ ತಿಳಿಯದು. ನಿಶ್ಶಬ್ದವಾಗಿರುವ ದೇವಿಯರನ್ನು ನಾನು ಇನ್ನೂ ನೋಡಬೇಕಷ್ಟೆ."

ಇದು ಸ್ಥಾಲೀ ಪುಲಾಕ ನಿರ್ದೇಶನ. ಇಂತಹ ಉದಾಹರಣೆಗಳಿಂದಲೇ ಪುಸ್ತಕದ ಪೂರ್ಣ ಪರಿಚಯ ಆಗಲಾರದು. ' ಹೂಬಾಣ ' ಗಳಲ್ಲಿರುವುದು ಬರಿಯ ನಗೆಹನಿಗಳಲ್ಲ, ಹಳ್ಳಗಳು. ಆದರದು ತಿಳಿನೀರಿನ ಹಳ್ಳ. ಆ ಹಳ್ಳದಲ್ಲಿ ಅವಗಾಹಿಸಿದಾಗ ಮಾತ್ರ " ಪರಮಾನಂದರಾಯರ ಪರಮಾನಂದಕರ " ಹಾಸ್ಯದ ಅರಿವಾದೀತು.

ಪ್ರಾಚೀನ ಸಾಹಿತ್ಯದಲ್ಲಿ ಹಾಸ್ಯಪ್ರಸಂಗಗಳು ಅತ್ಯಲ್ಪವೆಂದು ಮೊದಲಲ್ಲೆ ಹೇಳಿದ್ದಾಗಿದೆ. ಇರುವ ಹಾಸ್ಯವೂ ಶೃಂಗಾರಕ್ಕೆ ಪೂರಕವಾಗಿರುವುದೇ ಹೆಚ್ಚು. ಪರಿಣಾಮವಾಗಿ ಶೃಂಗಾರವನ್ನು ಸೋಂಕುವ ಅಶ್ಲೀಲತೆಯ ರೋಗ ಹಾಸ್ಯವನ್ನೂ ಬಿಟ್ಟಿಲ್ಲ. ಹೊಸ ಸಾಹಿತ್ಯದಲ್ಲಿ ಹಾಸ್ಯವು ಸ್ವತಂತ್ರ ಸ್ಥಾನಮಾನಗಳನ್ನು ಪಡೆದಿದ್ದರೂ ಅದು ಆಗಾಗ ಅತಿಹಸಿತ ' ಅಪಹಸಿತ 'ಗಳು ಅಂಚನ್ನು ಮುಟ್ಟುವುದೂ ಇದೆ. ಪ. ರಮಾನಂದರು ಆ ಅಂಚಿನತ್ತ ಸುಳಿಯದಿದ್ದರೂ ಒಮ್ಮೊಮ್ಮೆ ಅವರ ಹಾಸ್ಯವಾಗಲಿ, ಭಾಷೆಯಾಗಲಿ ತೀರ ಬಾಲಿಶವಾಗಿ, ಪೆಡಸಾಗಿ ತೋರುತ್ತದೆ. ' ನಾನು ನಾಗಣ್ಣ ' ಇದಕ್ಕೊಂದು ಉದಾಹರಣೆಯಾದೀತು. ' ಬಾಳ್ವೆಯ ಮಸಾಲೆ 'ಯ ರುಚಿ ಯಾವುದೆಂಬುದೇ ಗೊತ್ತಾಗುವುದಿಲ್ಲ. ಹಾಸ್ಯ—ಅತ್ಯುಕ್ತಿಗಳಿಗೆ ಯಾವಾಗಲೂ ನಿಕಟ ಸಂಬಂಧ. ' ಹೂಬಾಣಗಳು ' ಇದನ್ನು ಪುಷ್ಟೀಕರಿಸುತ್ತದೆ.

ಹೀಗೆ, ಲೋಪ—ದೋಷಗಳು ಹಲವಿದ್ದರೂ ' ಹೂಬಾಣಗಳು ' ಮೊದಲಬಾರಿ ಪ್ರಕಟವಾದ ಕಾಲವನ್ನು ಗಮನಿಸಿದಾಗ ಲೇಖಕರ ಪ್ರಯತ್ನವು ಅಭಿನಂದನೀಯವೆನ್ನಲೇಬೇಕು. ಪರಮಾನಂದರ ಹಾಸ್ಯದ ಅಂತರಂಗವನ್ನು ತೆರೆದು ತೋರುವ ಆಕರ್ಷಕ ಚಿತ್ರಗಳೂ ಹತ್ತಾರಿವೆ ಪುಸ್ತಕದಲ್ಲಿ. ಇದರಿಂದ ನಗೆ ಹೂವಿಗೆ ಪರಿಮಳವೂ ಸೇರಿದಂತಾಗಿ ವಾಚಕನ ಮನೋಭೂಮಿಕೆಯಲ್ಲಿ ಆಹ್ಲಾದಕರ ವಾತಾವರಣವೊಂದನ್ನು ನಿರ್ಮಿಸುತ್ತದೆ ' ಹೂಬಾಣಗಳು '

## ೧೯. ದ.ಬಾ.ಕು. ಅವರ ‘ ಹಕ್ಕಿನೋಟ ’

ಇಂಗ್ಲಿಷಿನಲ್ಲಿ profile ಅಥವಾ penportarit ಎಂದು ಪ್ರಚುರವಾಗಿರುವ ವ್ಯಕ್ತಿಚಿತ್ರಣ ಕಲೆ ಕನ್ನಡದಲ್ಲಿ ಇತ್ತೀಚಿನ ಬೆಳಸು ; ಇನ್ನಿತರ ಕೆಲವು ಸಾಹಿತ್ಯ ಪ್ರಕಾರಗಳಂತೆ ಇಂಗ್ಲಿಷಿನ ಸಂಪರ್ಕ—ವರ್ಚಸ್ಸುಗಳಿಂದಾಗಿ ಕನ್ನಡದ ಕಳದಲ್ಲಿ ಹುಟ್ಟಿದ್ದು. ಭಾವಗೀತೆ, ರೇಖಾಚಿತ್ರ (ವ್ಯಂಗ್ಯಚಿತ ಸಹ) ಮತ್ತು ವ್ಯಕ್ತಿಚಿತ್ರ—ಈ ಮೂರನ್ನು ಜ್ಞಾತಿಗಳೆನ್ನಬಹುದೇನೋ. ಒಂದು ರೇಖೆ, ಒಂದು ವಾಕ್ಯಗಳಿಂದ ವಿಶಾಲವಾದೊಂದು ಅರ್ಥ ಪ್ರಪಂಚವನ್ನೇ ತೆರೆದು ತೋರುವ ಪ್ರಯತ್ನ ಅಲ್ಲಿಯದು. ಮೂಲತಃ ವ್ಯಕ್ತಿಚಿತ್ರಣ, ಜೀವನಚರಿತ್ರೆ ಮತ್ತು ಆತ್ಮಕಥನಗಳು ಒಂದೇ ಕುಟುಂಬದವುಗಳಾದರೂ ವ್ಯಕ್ತಿಚಿತ್ರವು ಉಳಿದೆರಡಕ್ಕಿಂತ ಭಿನ್ನ. ಜೀವನಚರಿತ್ರೆಯಲ್ಲಿ ಕಥಿತ ವ್ಯಕ್ತಿಗೂ ಕಥನಕಾರನಿಗೂ ನಿಕಟ ಪರಿಚಯವಿರಬೇಕೆಂದಿಲ್ಲ! ಅವರಿಬ್ಬರೂ ಸಮಕಾಲೀನರಾಗಬೇಕಾದದ್ದೂ ಇಲ್ಲ. ಆತ್ಮಕಥೆ ತೀರ ಸ್ವಕೀಯವಾದದ್ದು. ಆದರೆ ವ್ಯಕ್ತಿಚಿತ್ರದ ಬಗೆಯೇ ಬೇರೆ. ಅದರಲ್ಲಿ ವ್ಯಕ್ತಿಯ ಜನನ, ಬಾಲ್ಯ, ವಿದ್ಯೆ, ವಿವಾಹ, ಸಾಧನೆ ಸಿದ್ಧಿಗಳಂತಹ ಸಂಗತಿಗಳ ವಾಚ್ಯ ವಿವರಣೆಗಳಿಲ್ಲ. ವ್ಯಕ್ತಿ ಮೊತ್ತದಲ್ಲಿ ಹೇಗೆ ಎಂಬುದೇ ಅಲ್ಲಿ ಪ್ರಧಾನ ಲಕ್ಷ್ಯ. ಅಷ್ಟನ್ನು ವ್ಯಕ್ತಿಚಿತ್ರಕಾರ ನಾಲ್ಕು ಸಾಲುಗಳಲ್ಲಿ, ಹತ್ತು ಮಾತುಗಳಲ್ಲಿ ಸೂಚಿಸುತ್ತಾನೆ. ಅಂತಹ ಪಂಕ್ತಿ—ಪದಗಳ ನಡುವೆ ‘ ವ್ಯಕ್ತಿ ’ ಪ್ರತ್ಯಕ್ಷನಾಗುತ್ತಾನೆ. ಡಿ.ವಿ.ಜಿ. ಯವರು ‘ ಸಣ್ಣ ಕತೆ ’ಯನ್ನು ವರ್ಣಿಸಿದಂತೆ ‘ ವ್ಯಕ್ತಿಚಿತ್ರಣ ’ವೂ “....ಸೂಕ್ಷ್ಮದಲ್ಲಿ ಸರ್ವಾಂಗ ಪ್ರತಿಬಿಂಬ. ‘ ರಿಸ್ಟ್‌ವಾಚ್ ’ ಎಂಬ ಮುಂಗೈ ಗಡಿಯಾರ ”ದಂತೆ—ನೋಟಕ್ಕೆ ಸಣ್ಣದು; ಮಾಟದಲ್ಲಿ ದೊಡ್ಡದು.

ಕನ್ನಡದ ವ್ಯಕ್ತಿಚಿತ್ರ ಪ್ರಕಾರದಲ್ಲಿ ಸುತ್ತಿ ಸುಳಿದಾಡಿದವರು ಹಲ ಕೆಲವರಿದ್ದಾರೆ. ಆದರೆ ಅಲ್ಲಿ ದುಡಿದು ಹೊನ್ನಿನ ಬೆಳೆ ತೆಗೆದವರು ಬೆರಳೆಣಿಕೆಯಷ್ಟೇ ಜನ. ಅಂತಹವರಲ್ಲಿ ಒಬ್ಬರಾಗಿ ಹೆಸರಾದವರು ದಿ. ದ. ಬಾ. ಕುಲಕರಣಿ. ವ್ಯಕ್ತಿ ಚಿತ್ರಣವು ಅವರ ‘ ಪ್ರಥಮ ಪ್ರೇಮ ’ವಾಗಿತ್ತು. ಅದರಲ್ಲಿ ದ. ಬಾ. ರವರ ಸತ್ವ, ಸ್ವತ್ವಗಳು ಪ್ರಕಟವಾದಂತೆ ಇನ್ನಿತರ ಕ್ಷೇತ್ರಗಳಲ್ಲಿ ಆಗಿಲ್ಲ. ಇದಕ್ಕೆ ಉತ್ತಮ ಉದಾಹರಣೆಯೆಂದರೆ 1945 ರಲ್ಲಿ ಮೊದಲ ಬಾರಿ, ಆಮೇಲೆ ಒಂದೆರಡು ಸಲ ಪುನರ್ಮುದ್ರಣಗೊಂಡ, ‘ ಹಕ್ಕಿನೋಟ ’. ಅದರ ಮೇಲೊಂದು ಇಣುಕು ನೋಟವನ್ನು ಹಾಯಿಸುವುದು ಪ್ರಕೃತ ಲೇಖನೋದ್ದೇಶ.

ಹತ್ತು ಚಿತ್ರಗಳ ಒಂದು ಆಲ್ಬಮ್ ‘ ಹಕ್ಕಿನೋಟ ’. ಅವುಗಳಲ್ಲಿ ಒಂಬತ್ತು ಬಿಡಿ ಬಿಡಿಯಾದ ಚಿತ್ರಗಳಾದರೆ ಐದನೆಯದೊಂದು ಮಾತ್ರ ಹದಿನಾಲ್ಕು ಸಣ್ಣ ಚಿತ್ರಗಳನ್ನು ಸೇರಿಸಿ ಕಟ್ಟಿದ ಚಿತ್ರ ಗುಚ್ಛ. ದೊಡ್ಡದಿರಲಿ, ಸಣ್ಣದಿರಲಿ ಒಂದೊಂದಕ್ಕೂ ತನ್ನದೇ ಆಗಿರುವ ಬಣ್ಣ, ಸೊಗಸು, ಮಿರುಗು, ಸೆಳತ ಇದೆ. ಇಲ್ಲಿ ಚಿತ್ರಿತರಾದವರೆಲ್ಲ ಲೇಖಕರಿಗೆ ಪರಿಚಿತರು, ಆತ್ಮೀಯರು. ಆದರೆ ದೂರದ ಗುರುತಿನವರಿರಲಿ, ಹತ್ತಿರದ ಒಡನಾಡಿಗಳಾಗಿರಲಿ ಯಾರ ಬಗೆಗೂ ಅನುದಾರತೆ, ಅತ್ಯುಕ್ತಿಗಳಿಲ್ಲದ ಸಮತೋಲದ ದೃಷ್ಟಿ ಲೇಖಕ

ನದ್ದು. ತನ್ನ ಹೃತ್ಪಟದಲ್ಲಿ ಆಯಾ ವ್ಯಕ್ತಿಗಳ ಭಾವಚಿತ್ರ ಹೇಗೆ ಪ್ರಕಟವಾಗಿದೆವೆಂಬುದನ್ನು ಅನಾವರಣ ಮಾಡುವುದರಲ್ಲಿ ದ. ಬಾ. ರಿಗೆ ಆಸಕ್ತಿ ವಿನಾ ಅವರ ಹಿರಿಮೆ—ಗರಿಮೆಗಳ ಬಗ್ಗೆ ಪರಾ ಬರೆಯುವುದಲ್ಲ.

'ಹಕ್ಕಿನೋಟ'ದಲ್ಲಿ ಮೊದಲ ಚಿತ್ರ ಬೇಂದ್ರೆಯವರದು. ಬೇಂದ್ರೆ ಎಂದರೆ 'ಕಾವ್ಯಕ್ಕೆ ಇನ್ನೊಂದು ಹೆಸರು.' 'ಗರಿ'ಯಾಗಿ ಹಾರಿ, 'ನಾದಲೀಲೆ'ಯನ್ನು ತೋರಿ, 'ಸಖೀಗೀತ'ವನ್ನು ಹಾಡಿ, 'ಗಂಗಾವತರಣ' ಮಾಡಿ ಕನ್ನಡ ಜನವನ್ನು ಹುಚ್ಚೆಬ್ಬಿಸಿದವರು, ಮನವನ್ನು ಹಸನುಗೊಳಿಸಿದವರು ಬೇಂದ್ರೆ. ಆದರೆ ದ. ಬಾ. ರವರದ್ದು ಕಾವ್ಯ ವಿಮರ್ಶೆಯಲ್ಲ, ವ್ಯಕ್ತಿಚಿತ್ರ. "ಒರೆ ಬೇರೆ, ಒಳಬಾಳು ಬೇರೆ" ಎಂದು ಕನ್ನಡದ ಇನ್ನೊಬ್ಬ ಕವಿ ಹಾಡಿದ್ದಾನೆ. ಹೊರನೋಟಕ್ಕೆ 'ಅನಾಕರ್ಷಕ'ವಾಗಿ ತೋರುವ ಬೇಂದ್ರೆ ಒಳಗಣ್ಣಿಗೆ ಹೇಗೆ ಆಕರ್ಷಕ, ಆತ್ಮೀಯ ವ್ಯಕ್ತಿ ಎಂಬುದನ್ನಿಲ್ಲಿ ಎಸಳೆಸಳಾಗಿ ಬಿಡಿಸಿದ್ದಾರೆ ಕುಲಕರಣಿ. ಎಲ್ಲರೊಂದಿಗೆ ಬೆರೆಯಬಲ್ಲ ಹೃದಯಸಂಪನ್ನತೆಯಲ್ಲಿ, ಮಾತಿನ ಮಂಟಪವನ್ನು ಎತ್ತರೆತ್ತರಕ್ಕೆ ಕಟ್ಟಬಲ್ಲ ವಚೋ ವಿನ್ಯಾಸದಲ್ಲಿ, ನಗಿಸಿ ನಕ್ಕು ಹಗುರವಾಗಬಲ್ಲ ಧಾರಾಳತನದಲ್ಲಿ ಬೇಂದ್ರೆಯವರನ್ನು ದ. ಬಾ. ಕು. ಗುರುತಿಸಿದ್ದಾರೆ. ಅವರ ತಲೆಯ ಮೇಲಿನ ಟೊಪ್ಪಿ, ಕೈಯೊಳಗಿನ ಕೊಡೆ, ಮೈಮೇಲಿನ ಕೋಟುಗಳಲ್ಲೂ ಮಾತಿನರೀತಿ, ಕಣ್ಣ ಹೊಳಪು, ಕೈಯ ತಿರುವು, ಕೊರಳ ಕೊಂಕುಗಳಲ್ಲೂ ಬೇಂದ್ರೆತನದ 'ಛಾಪೆ' ಇದೆಯೆನ್ನುತ್ತಾರೆ ದ. ಬಾ. ಕುಲಕರಣಿ.

"ಕಡಲ ತೀರದ ಭಾರ್ಗವ..." "ಕಾಲನಟ" ಶಿವರಾಮ ಕಾರಂತರದ್ದು ಎರಡನೆಯ ಚಿತ್ರ. ತಲೆಬರಹದಡಿಯಲ್ಲೆ 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' ಎಂಬ ಉದ್ಧೃತ ವಾಕ್ಯ. ಅಷ್ಟರಿಂದಲೇ ಕಾರಂತರ ವ್ಯಕ್ತಿತ್ವ, ವೈಶಿಷ್ಟ್ಯಗಳ ಸಮ್ಯಗ್ದರ್ಶನ ಓದುಗನಿಗಾಗುತ್ತದೆ. ಲೇಖನದ ಆರಂಭವೇ ಆಕರ್ಷಕವಾದದ್ದು. ಕನ್ನಡಿಗ ಗೋಕಾಕರು ದೂರದೇಶ—ಇಂಗ್ಲೆಂಡಿನಲ್ಲಿದ್ದಾಗ ವಿದೇಶೀಯನೊಬ್ಬ 'ನಿಮಗೆ ಕಾರಂತರ ಪರಿಚಯವಿದೆಯೆ?' ಎಂದು ಕೇಳಿದನಂತೆ ಎಂದು ದ. ಬಾ. ಕು. ತೊಡಗುವಾಗ ಓದುಗನ ಹುಬ್ಬು ಮೇಲೇರಿ, ಕಣ್ಣು ಅರಳುತ್ತದೆ; ಬಾಯಿ ತೆರೆಯುತ್ತದೆ. ಮುಂದಿನ ಹತ್ತೆಂಟು ಪುಟಗಳಲ್ಲಿ ಗಡ್ಡ ಬೆಳೆಸಿದ, ಬ್ರಹ್ಮಚರ್ಯದ ಬೆನ್ನು ಹತ್ತಿದ, ಕಾಲಿಗೆ ಚಕ್ರ ಕಟ್ಟಿ ಊರೂರು ತಿರುಗಾಡುವ, 'ಬಾಲವನ'ವನ್ನು ಬೆಳೆಸುವ, ಮಕ್ಕಳ ಕೂಟವನ್ನು ಕಟ್ಟುವ, ಕಾದಂಬರಿ—ಗೀತನಾಟಕ—ವಿಶ್ವಕೋಶ ಮೊದಲಾದ ರಚನೆಗಳಲ್ಲಿ ತೊಡಗುವ ಎಲ್ಲಕ್ಕಿಂತ ಮಿಗಿಲಾಗಿ ಲೋಕ ಹೊಗಳಲಿ, ತೆಗಳಲಿ ತನಗೆ ಸರಿ ಕಂಡದ್ದನ್ನು ಮಾಡಿಯೇ ತೀರಬೇಕೆಂಬ ಎದೆಗಾರಿಕೆಯ ಕಾರಂತರ ಹತ್ತು ಮುಖಗಳನ್ನು ಕಾಣುತ್ತೇವೆ. ಕಾರಂತರು ಮೈಸೂರಿನ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಗೊಂಡುದನ್ನು ಪ್ರಸ್ತಾವಿಸುತ್ತಾ "ನಮ್ಮ 'ಶೂನ್ಯ ಸಿಂಹಾಸನ' ವನ್ನೇರುವ ಶ್ರೀ ಕಾರಂತರು ಈ ಶೂನ್ಯಗಳ ಹಿಂದೆ ಅಂಕೆಯಾಗಿ ನಿಲ್ಲಲಿ...." ಎಂದು ಹಾರೈಸಿದುದು ಕಾರಂತರ ಗಟ್ಟಿತನವನ್ನೂ ಒಂದುತನ (individuality) ವನ್ನೂ ಚೆನ್ನಾಗಿ ಮನಗಾಣಿಸುತ್ತದೆ!

ಕನ್ನಡದ ಕರಿಮಣ್ಣಿಂದ ಬಿಳಿಯರ ಇಂಗ್ಲೆಂಡಿಗೆ ಹೋಗಿ ಅಲ್ಲಿ ತಮ್ಮ ಪ್ರತಿಭಾ ಸಂಪನ್ನತೆ, ಇಂಗ್ಲಿಷ್ ಪಾಂಡಿತ್ಯಗಳಿಂದ ಬಿಳಿಯರೂ ಬಿಳಿಚುವಂತೆ ಮಾಡಿದ ಪ್ರೊ. ವಿ. ಕೃ. ಗೋಕಾಕರ ಮಾತೃಭಾಷಾ ಪ್ರೇಮ, ಸ್ನೇಹಪರತೆ, ಸರಳತೆ, ಅಧ್ಯಯನಶೀಲತೆ, ಅಧ್ಯಾಪನ ಕುಶಲತೆಗಳನ್ನೂ ಅವರ ಸಾರಸ್ವತ ಸೇವೆಯನ್ನೂ ಕನ್ನಡದ ಗಡಿ ದಾಟಿ ಹೋದರೂ ಹೋದಲ್ಲೆಲ್ಲ ಕನ್ನಡದ ಗುಡಿಯನ್ನು ಹಾರಿಸಿದ ಧೀಮಂತಿಕೆಯನ್ನೂ ಮೂರನೆಯ ಚಿತ್ರದಲ್ಲಿ ಕಾಣುತ್ತೇವೆ. ರಂಗನಟ, ನರ್ತನಪಟು, ಕಥಾ ಲೇಖಕ, ಪತ್ರಕರ್ತ— ಹೀಗೆ ಬಹುಮುಖಿಯಾಗಿದ್ದರೂ ಕನ್ನಡ ನಾಡಿನಲ್ಲಿ ಹಿತ್ತಿಲಗಿಡವಾಗಿ ಬಾಳಿದ ಕುಲಕರಣಿ ಶ್ರೀನಿವಾಸ, ಕನ್ನಡ ಪಂಡಿತರಿಗೆ ತಲೆಮಣಿಯಾಗಿ ಕನ್ನಡದ ಶಿಷ್ಯರಿಗೆ ದೀಪಸ್ತಂಭವಾಗಿ, ಅಧ್ಯಾಪಕನಾಗಿದ್ದರೂ ಹೃದಯ ಶ್ರೀಮಂತರಾಗಿ ಮೆರೆದ ಮುಳಿಯ ತಿಮ್ಮಪ್ಪಯ್ಯ, ಕನ್ನಡಕ್ಕಾಗಿ ಕೈಯೆತ್ತಿದ, ಕೊರಳೆತ್ತಿದ, ದುಡಿದುಡಿಯುತ್ತ ಮಡಿದ ಪೋತದಾರ ಶ್ರೀನಿವಾಸರಾಯ. ಕರ್ನಾಟಕ ವಿಶ್ವವಿದ್ಯಾಲಯದ ಕನಸನ್ನು ಕಂಡು ಅದರ ಹುಟ್ಟಿಗೆ ಕಾರಣರಾಗಿ, ಅನೇಕ ಪ್ರಾಚೀನ ಕಾವ್ಯ ಸಂಶೋಧನ—ಸಂಪಾದನ ಮಾಡಿ, ಧಾರವಾಡದ ಲಿಂಗಾಯತ ವಾಙ್ಮಯ ಸಂಸ್ಥೆಗಳಂತಹ ಸಾರಸ್ವತ ಮಂದಿರಗಳನ್ನು ಕಟ್ಟಿ—ಬೆಳೆಸಿದವರಾದರೂ 'ಎನ್ನಿಂದ ಕಿರಿಯರಿಲ್ಲ' ವೆನ್ನುತ್ತ ತುಂಬಿದ ಕೊಡದಂತೆ ಬಾಳಿದ ಪ್ರೊ. ಬಸವನಾಳ, 'ಹೆಣ್ಣು ಗಂಡಿನ ಕುತ್ತಿಗೆಯ ಗುಂಡಲ್ಲ, ಬೆನ್ನಿಗೆ ಬೆಂಡು' ಎಂಬ ಕವಿ ವಾಕ್ಯವನ್ನು ಸಾರ್ಥಕ ಗೊಳಿಸುವಂತೆ ಪತಿಸೇವಾನಿರತೆಯಾಗಿ ಬಾಳಿ ಮನೆಯನ್ನು ಆಳಿದ ಕತೆಗಾತಿ ಶ್ಯಾಮಲಾದೇವಿಯವರನ್ನು ಮುಂದಿನ ಲೇಖನಗಳಲ್ಲಿ ಚಿತ್ರಿಸಿದ್ದಾರೆ. ಈ ಚಿತ್ರಗಳ ನಡುವೆ 'ನಾನು ಕಂಡ ಕೆಲ ಕನ್ನಡ ಕವಿಗಳು' ಎಂಬ ಚಿತ್ರಮಂಜರಿಯಲ್ಲಿ (ಬೇಂದ್ರೆ, ಗೋಕಾಕರೂ ಸೇರಿದಂತೆ) ಹದಿನಾಲ್ಕು ಕವಿಗಳತ್ತ ದ. ಬಾ. ಕು. ಬೀರಿದ ಕ್ಷ—ಕಿರಣಗಳಿವೆ. ಮಿತವಾದ ಅವಕಾಶದಲ್ಲಿ ಈ ಕವಿಗಳ ಅಂತರಂಗದ ಆಕಾಶದಲ್ಲಿ ನಿರಾತಂಕವಾಗಿ ವಿಹರಿಸಿದ್ದಾರೆ ಲೇಖಕರು. ಕುವೆಂಪು, ರಾಜರತ್ನಂ, ವಿ. ಸೀ., ಮಧುರಚೆನ್ನ, ಕಡೆಂಗೋಡ್ಲು, ಗೋವಿಂದ ಪೈ, ಪು. ತಿ. ನ., ಮಾಸ್ತಿ, ಬಿ. ಎಂ. ಶ್ರೀ, ಪಂಜೆ, ಮುಗಳಿ, ಆನಂದಕಂದ ಇವರೆಲ್ಲ ಓದುಗರ ಮನಸ್ಸಿನ ಬೆಳ್ಳಿ ಪರದೆಯಲ್ಲಿ ಒಬ್ಬೊಬ್ಬರಾಗಿ ಚಿಕ್ಕೆಗಳಂತೆ ಹೊಳೆದು ಮರೆಯಾಗುತ್ತಾರೆ.

'ಹಕ್ಕಿನೋಟ'ದಲ್ಲಿ ಹತ್ತನೆಯದು "ನಾನು ಕಂಡ ಗೌರಮ್ಮ". ಪರಿವಿಡಿಯಲ್ಲಿ ಕೊನೆಯದಾದರೂ ಪರಿಪೂರ್ಣತೆಯಲ್ಲಿ ಮೊದಲನೆಯದು ಆ ಚಿತ್ರ. ದ. ಬಾ. ಕು. ರವರನ್ನು ಸಾಹಿತ್ಯಲೋಕಕ್ಕೆ ಪರಿಚಯಿಸಿ, ಅವರಿಗೊಂದು ನೆಲೆಯನ್ನೂ ಬೆಲೆಯನ್ನೂ ದೊರಕಿಸಿಕೊಟ್ಟ ಲೇಖನ ಅದು. ಜೋಳದ ಊರಿನ ದ. ಬಾ. ಕು. ಕಿತ್ತಳೆ ತೋಟದ ಗೌರಮ್ಮ ಇವರಿಬ್ಬರ ನಡುವೆ ಎರಡು ವರ್ಷಗಳ ಅಲ್ಪಾವಕಾಶದಲ್ಲಿ ಅವ್ಯಾಜ ಸೋದರ್ಯವು ಹೇಗೆ ಬೆಳೆಯಿತೆಂಬುದು ಈ ಲೇಖನದಲ್ಲಿ ರಸ ಘಟ್ಟಿಯಾಗಿ ನಿಂತಿದೆ. ತಮ್ಮ ಪ್ರಥಮ ಕಥಾ ಸಂಗ್ರಹ—'ಕಂಬನಿ'—ಪ್ರಕಟವಾದುದನ್ನು ನೋಡುವ ಮೊದಲೆ, ಇನ್ನೂ ಇಪ್ಪತ್ತೇಳರ ಎಳೆ ಹರೆಯದ ಗೌರಮ್ಮ ಆಕಸ್ಮಿಕ ದುರ್ಮರಣ ಹೊಂದಿ ಕನ್ನಡಿಗರೆಲ್ಲ

ಕಂಬನಿಗರೆವಂತೆ ಮಾಡಿದುದು ಎಂತಹ ದಾರುಣ ದೈವಲೀಲೆ!-ಆಂಗ್ಲ ಕವಿ ಶೆಲ್ಲಿ—

"Our sweetest songs are those that till of saddest thought"

ಎಂದು ಉದ್ಗರಿಸಿದ್ದಾನೆ. ದೂರ ದೂರದ ಇಬ್ಬರು ಸಾಹಿತ್ಯಪ್ರೇಮಿ—ಸಹೃದಯಿಗಳು ಅಣ್ಣ—ತಂಗಿ ಎಂಬಷ್ಟು ಹತ್ತಿರದವರಾಗಿ ನಡೆದುಕೊಳ್ಳುತ್ತಿರುವಾಗಲೇ ತಂಗಿ "ಓಗೊಡದ ನಾಡಿಗೆ ನಡೆದುಬಿಟ್ಟಳು" 'ಅಣ್ಣ'ನ ಹೃದಯ ಕಾವೇರಿತು; ಈ ಶೋಕ ಭಾರವನ್ನು ತಾಳಲಾರದೆ ತತ್ತರಿಸಿತು; 'ಮಾತು ಮಾತು ಮಥಿಸಿ'ತು—ಲೇಖನವೊಂದು ಹೊರಬಂತು: ಅದೇ 'ನಾನು ಕಂಡ ಗೌರಮ್ಮ' ಓದುಗನನ್ನು ಕರಗಿಸಿ ಅವನಿಂದಲೂ ಕಂಬನಿಯುಕ್ಕಿಸಬಲ್ಲಷ್ಟು ಶಕ್ತಿಪೂರ್ಣವಾದದ್ದು. ಲೇಖನದ ಗದ್ಯಶೈಲಿಯೂ ಹಾಗೆಯೇ—ಇದು ಗದ್ಯವಲ್ಲ, ಗದ್ಯಕಾವ್ಯವೆಂಬಷ್ಟು ಮೋಹಕವಾದದ್ದು. 'ಹಕ್ಕಿನೋಟ'ದ ಬಗ್ಗೆ ಬರೆಯುತ್ತಾ ಶ್ರೀ ಪಾ. ವೆಂ. ಆಚಾರ್ಯರು "....'ನಾನು ಕಂಡ ಗೌರಮ್ಮ' ಒಂದು ನಾಯಕರತ್ನ....ಕೀಟ್ಸ್ ಕವಿ ಸತ್ತಾಗ ಇಂಗ್ಲಿಷ್ ಸಾಹಿತ್ಯದ ಅತ್ಯುದಾತ್ತ ಚರಮಗೀತೆ ಶೆಲ್ಲಿಯ ಲೇಖನಿಯಿಂದ ಬಂತಂತೆ. 'ನಾನು ಕಂಡ ಗೌರಮ್ಮ' ಅಂಥ ಇನ್ನೊಂದು ನಿದರ್ಶನ...." "....ಕನ್ನಡ ಸಾಹಿತ್ಯದ ವ್ಯಕ್ತಿ ಚಿತ್ರರಂಗದಲ್ಲಿ ಅದನ್ನು ಮೀರಿಸುವಂಥದು ಇಂದಿಗೂ ಬರಬೇಕಷ್ಟೆ..." ಎಂದು ಶ್ಲಾಘಿಸಿದುದು ಯಥೋಚಿತವೇ ಸರಿ.

'ಹಕ್ಕಿನೋಟ'ದ ಹತ್ತೂ ಲೇಖನಗಳನ್ನು ಓದುತ್ತಿರುವಂತೆ ವರ್ಣಿತ ವ್ಯಕ್ತಿಗಳು ನಮ್ಮ ಕಣ್ಣಿಗೆ ಕಟ್ಟಿ, ಎದೆಯ ಕದವನ್ನು ತೆರೆದು ಒಳಹೊಕ್ಕುಬಿಡುವುದಕ್ಕೆ ಆಯಾ ವ್ಯಕ್ತಿಗಳ ವಿಶಿಷ್ಟತೆ ಒಂದು ಕಾರಣವಾದರೆ ಚಿತ್ರಣಕಾರ್ಯ-ಭಾಷೆ, ಶೈಲಿ, ವರ್ಣನೆ, ಉದಾಹರಣೆ ಇತ್ಯಾದಿ-ಅಷ್ಟೇ ಹೃದಯಸ್ಪರ್ಶಿಯಾಗಿರುವುದು ಮತ್ತೊಂದು ಕಾರಣ. ಇಲ್ಲಿ ಉದಾಹೃತರಾದವರೆಲ್ಲ ಒಂದೊಂದು ನಿಟ್ಟಿನಲ್ಲಿ ಮಟ್ಟದಲ್ಲಿ ಮಹನೀಯರು, ಸ್ಮರಣೀಯರು. ಅವರ ಬಹಿರಂಗವನ್ನು ಮುಟ್ಟಿ ಅಂತರಂಗವನ್ನು ತೆರೆದು ತೋರುವ ಕೀಲಿಕೈಯಾಗುತ್ತದೆ, ದ.ಬಾ.ಕು. ಲೇಖನಿ:

ಬೇಂದ್ರೆಯವರಿಗೆ "ಮಾತು ಸಿಕ್ಕರೆ ಮಾರು ಹೊಲ ಸಿಕ್ಕಂತೆ". ಕಾರಂತ"ವ್ಯಾಪಾರ ಚತುರರೆನ್ನುವುದಕ್ಕಿಂತ ವ್ಯವಹಾರ ನಿಷ್ಠರೆನ್ನಬಹುದು." ಕುಲಕರ್ಣಿ ಶ್ರೀನಿವಾಸರ "ಬಾಯೊಡನೆ ಕೈಯೂ ಮಾತಾಡುತ್ತದೆ, ಮೈಯೂ ಮಾತಾಡುತ್ತದೆ". ಪುಟ್ಟಪ್ಪನವರ "ಬರಹ ಬಹಳ! ಮಾತು ವಿರಳ". "ವೀ. ಸೀ. ನಮ್ಮ ನಯದ ಪತಾಕೆ". ಗೋವಿಂದ ಪೈ 'ಹುಬ್ಬಿನಿಂದ ನಗುತ್ತಾ'ರೆ. "ಪು. ತಿ. ನ. ನುಣ್ಣಗಿನ ತಲೆ, ಅವರ ಪದ್ಯದ ಮಾಂದಳಿರು ಚಿಗುರು ಮುಖದಲ್ಲೂ ಇರುತ್ತದೆ." ಮಾಸ್ತಿ "ಮೂರ್ತಿಮಂತ ಮಾನವಕಾವ್ಯ." "ಬಿ. ಎಂ. ಶ್ರೀ. ಯವರದು ಶ್ರೀಮದ್ಗಾಂಭೀರ್ಯ, ಅವರು ರಾಜಕವಿ." ಶ್ಯಾಮಲಾದೇವಿಗೆ "ಬಾಯಿ ಹೇಗೋ ಹಾಗೆ ಕೈಯೂ ಸಡಿಲು"-ಹೀಗೆ "ಮುಕ್ತಕ' ದಂತಹ ವಾಕ್ಯಗಳು 'ಹಕ್ಕಿನೋಟ'ದ ಉದ್ದಕ್ಕೂ ಹೊಳೆಯುತ್ತವೆ; ಚಿತ್ರ-ಚಿತ್ರಕಾರ ಚಿತ್ರಿತ ವ್ಯಕ್ತಿಗಳ ಮೇಲೆ ಒಟ್ಟಾಗಿ ಬೆಳಕು ಬೀರುತ್ತವೆ.

ಮೇಲಿನವು ಮಿಂಚಿನಂತಹ ಮಾತುಗಳಾದರೆ, ಜೇನ ತೊಟ್ಟಿಗಳಂತಹ ಎಷ್ಟೋ ಸಂದರ್ಭಗಳ ಉಲ್ಲೇಖವೂ ಇಲ್ಲಿದೆ-ಬೇಂದ್ರೆಯವರನ್ನು ಕುರಿತದ್ದು ಇದು: ಔಷದ ವ್ಯಾಪಾರಿಯೊಬ್ಬ ತನ್ನ ಔಷಧಿಗಳ ಬಗ್ಗೆ 'ಅನುಭವದಿಂದ ಹೇಳುತ್ತೇನೆ. ಬಹಳ ಗುಣ ಶಾಲಿ' ಇತ್ಯಾದಿಯಾಗಿ ಪ್ರಚಾರ ಮಾಡುತ್ತಿದ್ದನಂತೆ. ಬೇಂದ್ರೆಯವರು 'ಶಕ್ತಿವರ್ಧಕ ತ್ರಾಣಿಕ' (ಟಾನಿಕ್)ವೊಂದನ್ನು ಕೇಳಿದಾಗ ಆತ "ಅದು ಶಕ್ತಿಯನ್ನು ಕೊಡುವುದಲ್ಲದೆ ನಪುಂಸಕತೆಯನ್ನೂ ಕಳೆಯುತ್ತದೆ" ಎಂದನಂತೆ. ಕೂಡಲೇ ಬೇಂದ್ರೆ, "ಇದನ್ನೂ ಅನುಭವದಿಂದ ಹೇಳುತ್ತೀರಾ?" ಎಂದು ಕೇಳಿಯೇ ಬಿಟ್ಟರಂತೆ!

ಮಹನೀಯರೊಬ್ಬರು ತಮ್ಮ ಸಂಘದ ಸದಸ್ಯರೊಬ್ಬರನ್ನು ಕಾರಂತರಿಗೆ ಪರಿಚಯಿಸುತ್ತಾ, "ಇವರು ನಮ್ಮ ಕೋಶಾಧ್ಯಕ್ಷರು" ಎಂದಾಗ ಕಾ (ಖಾ)ರಂತರು, "ಏನು ಶೋಕಾಧ್ಯಕ್ಷರೇ" ಎಂದು ಕೇಳಿದರಂತೆ!

ಕೊಡಗಿನ ಗೌರಮ್ಮ ತಮ್ಮ ಸಾಕು ನಾಯಿಗಳಿಗೆ ಫ್ರೆಡ್ಡಿ, 'ಗ್ರೇಟಾ' ಮೊದಲಾದ ಆಂಗ್ಲ ನಾಮಕರಣ ಮಾಡಿದ್ದರು. ದ ಬಾ. ಕು "ನಾಯಿಗೆ ಇಂಗ್ಲಿಷ್ ಹೆಸರೇಕೆ?" ಎಂದು ಕೇಳಿದಾಗ "ಇಂಗ್ಲಿಷ್ ಹೆಸರು ನಾಯಿಗೂ ಒಪ್ಪುವುದಿಲ್ಲವೆ?" ಎಂದು ಪ್ರಶ್ನಿಸಿದರಂತೆ ಗೌರಮ್ಮ!

ದ. ಬಾ. ಕು. ಹೆಚ್ಚು ಬರೆಯಲಿಲ್ಲ. ಹೆಚ್ಚು ಬರೆಯುವುದಕ್ಕೆ 'ಗುಣ ಮಣವಿಲ್ಲ'ದ ಕಾಲಪುರುಷ ಅವರಿಗೆ ಅವಕಾಶ ಆಯುಷ್ಯಗಳನ್ನೂ ಕೊಡಲಿಲ್ಲ. ಆದರೆ ಎಷ್ಟು ಬರೆದರೋ ಅಷ್ಟೂ ಬಂಗಾರ. ಅದರಲ್ಲೂ ಅವರ ವ್ಯಕ್ತಿ ಚಿತ್ರಣಗಳೆಂದರೆ ಪುತ್ತಳಿ ಚಿನ್ನವೇ ಸರಿ. 'ಹಕ್ಕಿನೋಟ', 'ಸೀಮಾಪುರುಷರು' 'ಬದುಕಿದ ಬಾಳು'ಗಳಂತಹ ಕೃತಿಗಳೊಂದಿಗೆ ದ. ಬಾ. ಕು. ಸ್ಮೃತಿ ಹಸಿರಾಗಿ ಉಳಿಯುತ್ತದೆ.

## ೨೦. ಚ. ವಾಸುದೇವಯ್ಯನವರ 'ಆರ್ಯಕೀರ್ತಿ'

ರಜಪೂತರ ಹೆಸರನ್ನು ನೆನೆದೊಡನೆ ಶೌರ್ಯ, ಸಾಹಸ, ತ್ಯಾಗ, ಬಲಿದಾನಗಳು ಒಂದೊಂದಾಗಿ ಕಣ್ಣ ಮುಂದೆ ಕುಣಿಯುತ್ತವೆ; ರಜಪುತಾನದ ಮರುಭೂಮಿಯೆ ರಣ ರಂಗವಾಗಿ, ಅಲ್ಲಿ ಹುಟ್ಟಿ ಬೆಳೆಯುವ ಹುಲ್ಲುಗಿಡಗಳೆ ವೀರಯೋಧರಾಗಿ ಕತ್ತಿ ಗುರಾಣಿ ಹಿಡಿದು ಸಮರಕೇಳಿಯಾಡುತ್ತವೆ: ಅಡಿಯನ್ನು ಮುಂದಿಟ್ಟರೆ ವೀರಸ್ವರ್ಗ, ಹಿಂದಿರಿಸಿ ದರೆ ಘೋರನರಕ, ದೇಹನಶ್ವರ, ಕೀರ್ತಿ ಶಾಶ್ವತ ಎಂದು ಛಲಕ್ಕಾಗಿ ಕಾದವರು, ಪ್ರಾಣ ವನ್ನೇ ಪಣಕ್ಕಿಟ್ಟವರು, ಮಾನಕ್ಕಾಗಿ ಮಡಿದವರು ಅದೆಷ್ಟು ಮಂದಿ! ಪ್ರಾಣ ಅವರಿಗೆ ಹುಲ್ಲು, ಯುದ್ಧ ಅವರಿಗೆ ಆಟ! ಇದು ವೀರಪುರುಷರ ಮಾತಾಯಿತು ; ಇನ್ನು ರಜಪೂತ ಸ್ತ್ರೀಯರೋ—ಅಲ್ಲಲ್ಲ—ವೀರನಾರಿ ಯರೋ? ಸೌಟು ಹಿಡಿಯುವ ಕೈ ಕತ್ತಿ ಹಿಡಿ ದೀತು, ತೊಟ್ಟಿಲು ತೂಗುವ ಕೈ ಜಗತ್ತನ್ನಾಳೀತು ಎಂದು ತೋರಿ ಸಾರಿದವರು ಅವರು. ಒಂದೋ ಗಂಡುಡುಗೆಯುಟ್ಟು ಕಾದಿ, ಇಲ್ಲವೇ ಗಂಡಂದಿರನ್ನು ಯುದ್ಧಕ್ಕೆ ಹುರಿದುಂಬಿಸಿ ಸೋಲುವ ಕಾಲ ಬಂದಾಗ ಅನ್ಯರಿಗೆ ಮೆಯ್ಯೊಪ್ಪಿಸುವ ಬದಲು ಅಗ್ನಿನಾರಾಯಣನಿಗೆ ಪ್ರಾಣವೊಪ್ಪಿಸಿ ಮಾನವುಳಿಸಿಕೊಂಡ ಪ್ರಾತಃಸ್ಮರಣೀಯರು ಅವರು!

ಚ. ವಾಸುದೇವಯ್ಯನವರ 'ಆರ್ಯಕೀರ್ತಿ'ಯ ಪ್ರಥಮ ಖಂಡವು ಅಂಥ 'ಆರ್ಯ' ನರ–ನಾರಿಯರ ಕೀರ್ತಿ ಕಥನ ; "ಸ್ವದೇಶ ಪ್ರೀತಿಯನ್ನು ಗುರುತರ ಧರ್ಮವೆಂದೆ ಣಿಸಿ, ಹಿತ ಸಾಧನೆಗಾಗಿ ಸ್ವಾರ್ಥವನ್ನು ಬಿಟ್ಟು ಜೀವನ ಪಥವನ್ನು ನಡೆದ" ಮಹಾತ್ಮರ ವೃತ್ತಾಂತ. ಕ್ರಿ. ಶ. ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಕದ ವರೆಗಿನ ಸುಮಾರು ಎಂಟುನೂರು ವರ್ಷಗಳ ನಿಡುಗಾಲದಲ್ಲಿ ರಾಜಸ್ಥಾನದ ವಿಭಿನ್ನ ದೇಶ ಗಳನ್ನು ಆಳಿದ ಆಳಿಸಿದ, ಕಾಳಗದ ಕಳದಲ್ಲೋ ಬೆಂಕಿಯ ಉಡಿಯಲ್ಲೋ ಅಳಿದ, ಉಳಿದ ಹದಿನೆಂಟು ಮಂದಿ ರಜಪೂತ, ಧೀರ—ಧೀರೆಯರ ರಮ್ಯೋಜ್ವಲ ಗುಣವರ್ಣನೆಯೇ— 'ಆರ್ಯಕೀರ್ತಿ'.

ರಾವಣ ವಧೆಯ ಅನಂತರ, ಲಂಕೆಯನ್ನು ವಿಭೀಷಣನಿಗೊಪ್ಪಿಸಿ, ಶ್ರೀರಾಮನು ಪರಿವಾರ ಸಮೇತ ಆಯೋಧ್ಯೆಗೆ ಅಭಿಮುಖನಾಗುವ ಕಾಲಕ್ಕೆ ಲಕ್ಷ್ಮಣನು "ಲಂಕೆಯಲ್ಲೇ ಉಳಿಯಬಾರದೇಕೆ" ಎಂದು ಹೇಳಿಕೊಂಡನಂತೆ; ಆಗ ಶ್ರೀರಾಮನು ನೀಡಿದ ಉತ್ತರವು ಲೋಕೋತ್ತರವಾದದ್ದು :

"ಅಪಿ ಸ್ವರ್ಣಮಯೀ ಲಂಕಾ ನ ಮೇ ಲಕ್ಷ್ಮಣ ರೋಚತೇ
ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ"

'ತಾಯಿ ಮತ್ತು ತಾಯಿನಾಡು ಸ್ವರ್ಗತುಲ್ಯವಾದದ್ದು—ಅಲ್ಲ ಸ್ವರ್ಗಾಧಿಕ ವಾದದ್ದು!'—ರಾಜಪುತ್ರರು ಇದನ್ನು ಕಂಡುಕೊಂಡವರು, ಹಾಗೆ ನಡೆದುಕೊಂಡವರು. ಎಂಟು ಶತಮಾನಗಳ ದೀರ್ಘಕಾಲ ಘಜನಿ, ಘೋರಿ, ಖಿಲ್ಜಿ, ಲೋದಿ, ಪಠಾನ್,

ಮೊಗಲ್ ಎಂದು ಖ್ಯಾತರಾದ ಲುಂಠನಕಾರಿಗಳ ದಂಡುದಾಳಿಗಳಿಂದಲೂ ತಂತ್ರಜಾಲಗಳಿಂದಲೂ ತಮ್ಮ ತಾಯ್ನಾಡನ್ನು ಕಾಯುವುದಕ್ಕೂ ತಮ್ಮ ತಾಯಂದಿರ ಮಾಸವುಳಿಸುವುದಕ್ಕೂ ಅನ್ನದ ಹಂಗು, ಜೀವದ ಆಸೆಗಳಿಲ್ಲದೆ ಹೋರಾಡಿದರು; ಹೋರಾಟದಲ್ಲಿ ಆಗಾಗ ಗೆದ್ದರು, ಆಗಾಗ ಸೋತರು:—ಸೋತರೂ ಸೋಲೊಪ್ಪದೆ ಮತ್ತೆ ಮತ್ತೆ ತಲೆಯೆತ್ತಿದರು, ಬಲ ಸಂವರ್ಧನೆ ಮಾಡಿದರು, ಆಕ್ರಮಣಕಾರಿಗಳನ್ನು ತರಿದರು, ತಡೆಗಟ್ಟಿದರು, ಹೆಡೆಮೆಟ್ಟಿದರು. ಹೀಗೆ, ಭರತಖಂಡದ ಸುದೀರ್ಘ ಇತಿಹಾಸದಲ್ಲಿ ರಾಜಪುತ್ರ ಸೋಲು—ಗೆಲುವುಗಳ ಉಜ್ವಲ ಅಧ್ಯಾಯಗಳು ಯಾರ ಕಣ್ಮನಗಳನ್ನೂ ಸೆರೆ ಹಿಡಿಯದೆ ಇರುವುದಿಲ್ಲ. ಕರ್ನಲ್ ಟೌಡರಂತಹ ವಿದೇಶಿಯರೇ ರಾಜಸ್ಥಾನದ ವೀರೇತಿಹಾಸಕ್ಕೆ ತಲೆದೂಗಿದರು, ತಲೆಬಾಗಿದರು ಎನ್ನುವಾಗ ಭಾರತೀಯ ಪ್ರಜೆಯು ಅದನ್ನು ಅವಜ್ಞೆ ಮಾಡಲು ಸಾಧ್ಯವೇ ?

ಚ. ವಾಸುದೇವಯ್ಯನವರ 'ಆರ್ಯಕೀರ್ತಿ' ಸ್ವತಂತ್ರ ಕೃತಿಯಲ್ಲ; ಸ್ವತಂತ್ರವೆಂದೇ ಭಾಸವಾಗುವ ಕೃತಿ. ಅದರ ಮೂಲ ವಂಗ ಭಾಷೆಯಲ್ಲಿ ಶ್ರೀ ರಜನೀಕಾಂತ ಗುಪ್ತರಿಂದ ರಚಿತವಾದದ್ದು. ಆದರೂ ಮಾಸ್ತಿಯವರು ಹೇಳಿರುವಂತೆ, ಅನುವಾದದ "....ಶೈಲಿಯಲ್ಲಿ ಪರಭಾಷೆಯ ಮೂಲ ಬೇರೆ ಒಂದಿದೆಯೆನ್ನುವುದು ಕಾಣುವುದಿಲ್ಲ. ಶೈಲಿ ಅಷ್ಟು ಸಹಜವಾಗಿದೆ, ಸರಳವಾಗಿದೆ, ಹದಿನಾರಾಣೆ ಕನ್ನಡದ್ದಾಗಿದೆ." ಗ್ರಂಥವನ್ನು ಓದುತ್ತಾ ಹೋದಂತೆ, ಇತಿಹಾಸವು ಸುರುಳಿ ಬಿಚ್ಚುತ್ತಾ ಮೇವಾಡ, ಚಿತ್ತೋಡ, ಅಂಬೇರ, ಅಜ್ಮೀರಗಳೆಲ್ಲ ಒಂದೊಂದಾಗಿ ಕಣ್ಣೆದುರು ಸುಳಿದು ಸರಿದು ಹೋಗುತ್ತವೆ. ಇನ್ನೊಂದು ವಿಶೇಷ ಸಂಗತಿಯೇನೆಂದರೆ 'ಆರ್ಯ ಕೀರ್ತಿ' ಮೊದಲು ಪ್ರಕಟವಾದದ್ದು 1896ರಲ್ಲಿ; ಹಳೆಗನ್ನಡ—ಹೊಸಗನ್ನಡಗಳ ಸಂಧಿಕಾಲದಲ್ಲಿ. ಅಂತಹ ಕಾಲದಲ್ಲೇ ಚ. ವಾಸುದೇವಯ್ಯನವರಿಗೆ ಒಗ್ಗಿದ ಭಾಷಾ—ಶೈಲಿಗಳನ್ನು ಕಂಡಾಗ ನಿಜವಾಗಿಯೂ ಆಶ್ಚರ್ಯವಾಗುತ್ತದೆ: ಅಷ್ಟೊಂದು ಹದವಾಗಿ, ಸಶಕ್ತವಾಗಿ ಅವರು ಭಾಷೆಯನ್ನು ಬಳಸಿದ್ದಾರೆ.

'ಆರ್ಯಕೀರ್ತಿ'ಯಲ್ಲಿ ವರ್ಣಿತರಾದ ಹದಿನೆಂಟು ಮಂದಿಯಲ್ಲಿ ಒಬ್ಬೊಬ್ಬರೂ ಒಂದೊಂದು ದೃಷ್ಟಿಯಲ್ಲಿ ಮಾನ್ಯರು, ಸ್ಮರಣೀಯರು. ಕನೋಜದ ರಾಜಕುಮಾರಿ ಸಂಯುಕ್ತೆಯ ವಿವಾಹ ನಿಮಿತ್ತವಾಗಿ ಅವಳ ತಂದೆ ಜಯಚಂದನ ಕೋಪಕ್ಕೂ ವಿದೇಶೀ ಆಕ್ರಮಣಕಾರಿ ಮಹಮ್ಮದ್ ಘೋರಿಯ ಕೌಟಿಲ್ಯಕ್ಕೂ ಒಳಗಾಗಿ ರಣರಂಗದಲ್ಲಿ ಒಡಲನ್ನು ಉಡುಗಿದ ದಿಲ್ಲೀಶ್ವರ ಪೃಥ್ವೀರಾಜ ಚೌಹಾನ್, ಕುತುಬುದ್ದೀನನನ್ನು ಬಗ್ಗುಬಡಿದ ಮೇವಾಡದ ವೀರರಾಣಿ ಕರ್ಮದೇವಿ, ರಾಜಪುತ್ರ ಕುಲಗೌರವವನ್ನು ರಕ್ಷಿಸಲು ಕಟಿಬದ್ಧನಾಗಿ ನಿಂತು ಮಹಾಭಾರತದ ಅಭಿಮನ್ಯುವನ್ನು ನೆನಪಿಗೆ ತರುವ ವೀರಬಾಲಕ ಬಾದಲ, ಮಾನವನ್ನು ಕಾಯುವುದಕ್ಕಾಗಿ ಜೋಹಾರ್ ವ್ರತಾಚರಣೆ ಮಾಡಿದ ಭುವನ ಮೋಹನ ಸುಂದರಿ ಚಿತ್ತೂರಿನ ಪದ್ಮಿನಿ, ಯುದ್ಧರಂಗದಲ್ಲಿ ಒಂದು ಕಣ್ಣು, ಒಂದು ಕೈ, ಒಂದು ಕಾಲುಗಳನ್ನು ಕಳಕೊಂಡು ಮೆಯ್ಮೇಲೆ ಎಂಬತ್ತು ಗಾಯಗಳನ್ನು ತಂದುಕೊಂಡರೂ ಮೊಗಲಾಯಿ ಬಾಬರನಿಗೆ ಹಣೆ ಮಣಿಯದ ಆತ್ಮತೇಜಶ್ಶಾಲಿ ಸಂಗ್ರಾಮ ಸಿಂಹ, ತನ್ನ

ಮುದ್ದುಗುವರನನ್ನೇ ದುಷ್ಟ ವನವೀರನ ಕತ್ತಿಗೆ ತುತ್ತಾಗಿಸಿ ಸ್ವಾಮಿಪುತ್ರನ ತಲೆ ಕಾಯ್ದ ತ್ಯಾಗಮಯಿ ವೀರಧಾತ್ರಿ ಪನ್ನೆ, ಚಿತ್ತೂರನ್ನು ನುಂಗಲು ಬರುತ್ತಿದ್ದ ಅಕ್ಬರಬಾದಶಹನ ಸೇನಾ ಪ್ರವಾಹಕ್ಕೆ ಅಣೆಕಟ್ಟಾಗಿ ನಿಂತು ಹೋರಾಡಿ ಸ್ವರ್ಗಕ್ಕೆ ಸಂದ ವೀರಚೂಡಾಮಣಿಗಳಾದ ಪುತ್ತ–ಜಯಮಲ್ಲ, ಜಗದೀಶ್ವರನೆಂದು ಪ್ರಥಿತ ಯಶಸ್ಕನಾದ ಅಕ್ಬರನಿಗೆ ನುಂಗಲಾರದ ತುತ್ತಾಗಿ, ಮುರಿಯಲಾಗದ ಮುಳ್ಳಾಗಿ, ಕಾಡುಮೇಡುಗಳಲ್ಲಿ ಅಲೆದಾಡಿ ಗಡ್ಡೆ–ಗೆಣಸುಗಳನ್ನು ತಿನ್ನುವ ದುರ್ಧರ ಪ್ರಸಂಗದಲ್ಲೂ ದೇಶಾಭಿಮಾನ–ಆತ್ಮಾಭಿಮಾನಗಳನ್ನು ತೊರೆಯದ 'ಆರ್ಯ ಕುಲ ಪ್ರದೀಪ' ಮೇವಾಡದ ರಾಣಾ ಪ್ರತಾಪ, ಖಿಲವಾಗುತ್ತಿದ್ದ ರಜಪೂತ ಶಕ್ತಿ–ಸಾಹಸಗಳನ್ನೆಲ್ಲ ಮತ್ತೊಮ್ಮೆ ಸಂಚಯಿಸಿ, ಔರಂಗಜೇಬನನ್ನು ಮಣಿಸಿದ ರಾಜಸಿಂಹ, ತಾನು ಬದುಕಿ ಉಳಿಯುವ ಅಳಿಯಾಸೆಯಿಂದ ಹಡೆದ ತಂದೆಯೇ ಮಗಳೊಂದಿಗೆ 'ವಿಷ ಕುಡಿದು ಸಾಯಿ' ಎಂದಾಗ ಒಂದಿಷ್ಟೂ ಹಿಂಜರಿಯದೆ ವಿಷಪ್ರಾಶನ ಮಾಡಿ ಪ್ರಾಣತ್ಯಾಗ ಮಾಡಿದ ಕೃಷ್ಣಾಕುಮಾರಿಯೇ ಮುಂತಾಗಿ ಹದಿನೆಂಟು ಮಂದಿಯು, ಆನುಷಂಗಿಕವಾಗಿ ಇನ್ನೂ ಕೆಲವರ ಜ್ವಲಂತ ಚಿತ್ರಗಳನ್ನು 'ಆರ್ಯಕೀರ್ತಿ' ಯಲ್ಲಿ ಕಾಣಬಹುದು.

'ಆರ್ಯ ಕೀರ್ತಿ'ಯಲ್ಲಿರುವ ರಾಜಪುತ್ರರ ಶೌರ್ಯ—ತ್ಯಾಗಗಳ ಕಥೆಯು ವಾಚಕರಲ್ಲೂ ಆ ದೇಶಪ್ರೇಮವನ್ನು ಬಲಿಸಿ, ಆತ್ಮಾಭಿಮಾನವನ್ನು ಉಕ್ಕೇರಿಸಿ ಕಿಡಿ ಕೆದರಿಸುವಂತೆ ವಿವೃತವಾಗಿದೆ. ರಾಜಪುತ್ರರ ರಕ್ತಗತವಾಗಿದ್ದ "ಸ್ವದೇಶಪ್ರೇಮ, ಸ್ವಧರ್ಮಾನುರಾಗ, ಸ್ವಾರ್ಥತ್ಯಾಗ"ಗಳನ್ನಾಗಲಿ, ಅವರಿಗೆ ಮಾನ್ಯವಾಗಿದ್ದ, "ಕೃತಜ್ಞತೆ, ಆತ್ಮ ಸನ್ಮಾನ, ವಿಶ್ವಾಸಪಾಲನೆ"ಗಳನ್ನಾಗಲೀ ಪ್ರತಿಯೊಬ್ಬ ಭಾರತೀಯನೂ ತನ್ನ ದೃಷ್ಟಿಪಥದಲ್ಲಿರಿಸಿಕೊಂಡು ನಡೆಯುವುದಕ್ಕೆ ಪ್ರಯತ್ನಿಸಬೇಕೆಂಬುದನ್ನು ಲೇಖಕರು ಸೂಚಿಸಿದ್ದಾರೆ. 'ವೀರ ಭೋಗ್ಯಾ ವಸುಂಧರಾ'–ಯಾರು ವೀರರೋ, ಕಾರ್ಯಶೀಲರೋ ಅವರನ್ನು ಲಕ್ಷ್ಮಿ ಓಲೈಸುತ್ತಾಳೆ. ಕಣ್ಣ ಮುಂದೆ ದೊಡ್ಡದಾದ ಗುರಿ, ಹಿಡಿದ ದಾರಿಯಲ್ಲಿ ನಿಚ್ಚಳವಾದ ನಂಬಿಕೆ, ಎದೆಯಲ್ಲಿ ಎಂದಿಗೂ ಬತ್ತದ ಧೈರ್ಯ, ಅದನ್ನು ಉತ್ಸಾಹ ಆತ್ಮವಿಶ್ವಾಸ—ಇಷ್ಟಿದ್ದರೆ ಎಂತಹ ಕಷ್ಟಗಳ ಕಾಡನ್ನೂ ಹಾಯಬಹುದು, ಎಂತಹ ಕಡಲನ್ನೂ ಈಸಬಹುದು, ಎಂತಹ ವೈರಿಗಳನ್ನೂ ತಲೆಮೆಟ್ಟಿ ಜಯಗಳಿಸಬಹುದು. 'ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹತಾಂ ನೋಪಕರಣೇ'—"ಆತ್ಮಶಕ್ತಿ ಮುಖ್ಯ, ಬಾಹ್ಯ ಉಪಕರಣಗಳಲ್ಲ"—ಎಂಬುದನ್ನು ರಜಪೂತರ ನಿದರ್ಶನದಿಂದ ಕಣ್ಣಿಗೆ ಎದ್ದು ಕಾಣುವಂತೆ ಎದೆಯಲ್ಲಿ ಒತ್ತಿ ನಿಲ್ಲುವಂತೆ ವಾಸುದೇವಯ್ಯನವರು ಬಣ್ಣಿಸಿದ್ದಾರೆ.

ರಜಪೂತರ ಧೀರಜೀವನ ಚಿತ್ರಣಕ್ಕೆ ಸತ್ವಪೂರ್ಣವಾದ ಭಾಷೆಯೇ ಬೇಕು. ಶ್ರೀ ವಾಸುದೇವಯ್ಯನವರ ಭಾಷೆ ಅಂತಹದ್ದೇ ಎಂಬುದನ್ನು ಮೊದಲಲ್ಲೇ ಸೂಚಿಸಿದ್ದಾಗಿದೆ. ಅವರದ್ದು 'ಗಂಡು ಶೈಲಿ'. ನುಡಿಗಳೆಲ್ಲ ಗುಂಡುಗಳಂತೆ ಎದೆಯನ್ನು ಬಡಿದು ಮೊಳಗುತ್ತವೆ. ಇದಕ್ಕೆ ಉದಾಹರಣೆಗಳನ್ನು ಕೊಡುವುದು ಕಷ್ಟ. ಏಕೆಂದರೆ ಉತ್ತಮ ಗ್ರಂಥವು ಹೇಗೆ ಅನನುಕರಣೀಯವೋ ಹಾಗೆಯೇ ಸಂಗ್ರಹಾತೀತವೂ ಹೌದು. ಇಲ್ಲಿಯ

ಭಾಷಾ ಶೈಲಿಯು ವಸ್ತುವಿಗೆ ಅನುಗುಣವಾದದ್ದು ; ಆದ್ಯಂತ ಗಂಭೀರವಾಗಿ ಓಜಸ್ವಿಯಾಗಿ ಉಳ್ಳದ್ದು. ನಿರ್ದೇಶನಾರ್ಥವಾಗಿ ಯಾವ ವಾಕ್ಯಗಳನ್ನು, ಯಾವ ವಾಕ್ಯಖಂಡಗಳನ್ನು ಆರಿಸೋಣ, ಯಾವುದನ್ನು ಬಿಡೋಣ ಎಂಬುದೇ ಇಲ್ಲಿಯ ಸಮಸ್ಯೆ. ಆದರೂ ಪಾಠಕರ ಕುತೂಹಲಶಮನಾರ್ಥ ಒಂದೆರಡು ಉದಾಹರಣೆಗಳು ಇಲ್ಲಿವೆ :—

" ಹಿಂದೆ, ಸೀತಾಪಹರಣವು ರಾಮ ರಾವಣರ ಯುದ್ಧಕ್ಕೆ ಕಾರಣವಾಯಿತು ; ದ್ರೌಪದಿಯ ಮಾನಭಂಗವು ಪಾಂಡವ ಕೌರವರ ದ್ವೇಷವನ್ನು ವೃದ್ಧಿಗೊಳಿಸಿತು. ಸಂಯುಕ್ತಾಪಹರಣದಿಂದ ಭಾರತ ಭೂಮಿ ಪರಾಧೀನವಾಯಿತು. ಅಬಲೆಯರು ಎಂತಹ ಪ್ರಬಲೆಯರು !...."

" ನಮ್ಮ ದೇಶದ ನಾರಿಯರಿಗೆ ಆದರ್ಶ ರಮಣಿಯರಿಬ್ಬರು—ಸೀತೆ, ದ್ರೌಪದಿ.... ಆ ರಮಣಿಯರಿಬ್ಬರೂ ಪತ್ನಿಯ ಕರ್ತವ್ಯ ಮತ್ತು ರಾಣಿಯ ಕರ್ತವ್ಯ ಇವೆರಡರ ಅನುಷ್ಠಾನದಲ್ಲಿಯೂ ದೃಢವ್ರತರು ; ಇಬ್ಬರೂ ಧರ್ಮನಿಷ್ಠೆಯುಳ್ಳವರು ; ಇಬ್ಬರೂ ಗುರುಜನರಲ್ಲಿ ಭಕ್ತಿ ವಿನಯವುಳ್ಳವರು....ಸೀತೆಯು ರಾಣಿಯಾದರೂ ವಿಶೇಷವಾಗಿ ಕುಲವಧು ; ದ್ರೌಪದಿಯು ಕುಲವಧುವಾದರೂ ವಿಶೇಷವಾಗಿ ತೇಜಸ್ವಿನಿಯಾದ ರಾಣಿ....ಸೀತೆಯು ರಾಮನಿಗೆ ತಕ್ಕ ಹೆಂಡತಿ ; ದ್ರೌಪದಿಯು ಭೀಮನಿಗೆ ಸರಿಯಾದ ವೀರ ಪತ್ನಿ...."

" ಅರವಲ್ಲಿ ಪರ್ವತಮಾಲೆಯ ಸಮಸ್ತ ಗುಹೆಗಳೂ ಪ್ರತಾಪನ ಯಾವುದಾದರೊಂದು ಸಾಹಸ ಕಾರ್ಯದಿಂದ, ಯಾವುದಾದರೊಂದು ಅಪಜಯದಿಂದ ಪವಿತ್ರವಾಗಿರುವುವು. ಅಹುದು, ಪ್ರತಾಪನ ಅಪಜಯವೂ ಪವಿತ್ರಕಾರಿಯೇ ! ಅವನ ಕೀರ್ತಿಸ್ತಂಭವು ಆಚಂದ್ರಾರ್ಕಸ್ಥಾಯಿಯಾಗಿರುವುದು.! ಆ ಕೀರ್ತಿಸ್ತಂಭವು ಜಲ ಮಗ್ನವಾಗುವುದೆಂದರೆ ಭಾರತ ಮಹಾಸಾಗರದಲ್ಲಿ ಅಷ್ಟು ನೀರಿಲ್ಲ ; ಬೆಟ್ಟಗಳು ಮೇಲೆ ಬಿದ್ದು ಮುರಿಯುವುದೆಂದರೆ ಅದ್ಭುತಕಾಯವುಳ್ಳ ಹಿಮವತ್ಪರ್ವತದ ಮೇಲೆ ಅಂತಹ ಶೃಂಗಗಳಿಲ್ಲ...."

"........ಆಷಾಢವು ಕಳೆಯಿತು, ಆದರೂ ಒಂದು ಹನಿ ಬೀಳಲಿಲ್ಲ; ಶ್ರಾವಣ ಭಾದ್ರಪದ ಮಾಸಗಳೂ ಕಳೆದು ಹೋದುವು ; ನೀರಿಲ್ಲದೆ ಜನರು ಹತಾಶರಾದರು, ಹಸಿವಿನಿಂದ ಹುಚ್ಚರಂತಾದರು....ಪಶ್ಚಿಮದಿಂದ ವಿಷದ ಗಾಳಿ ಬೀಸಿತು. ಇರುಳಿನಲ್ಲಿ ನಕ್ಷತ್ರಗಳು ಬಿಡದೆ ಕಾಣುತ್ತಿದ್ದುವು. ಹಗಲಂತೂ ಮೋಡದ ಸುಳಿವೇ ಇಲ್ಲ ; ಗುಡುಗು ಮಿಂಚುಗಳನ್ನು ಕಂಡುದೇ ಇಲ್ಲ....ಮನುಷ್ಯರು ಮನುಷ್ಯರನ್ನೇ ತಿಂದರು ! ಪಟ್ಟಣಗಳು ಜನಶೂನ್ಯವಾದುವು ; ಪ್ರಾಣಿಗಳು ವಂಶನಷ್ಟವಾದುವು ; ಮೀನುಗಳ ಹುಟ್ಟೇ ಇಲ್ಲದಂತಾಯಿತು...."

—ಉದಾಹೃತ ಗದ್ಯಭಾಗಗಳಿಗೆ ವಿವರಣೆ ಬೇಕಿಲ್ಲ. ಅವುಗಳ ಅರ್ಥ ಸ್ವಯಂವೇದ್ಯ. ಕನ್ನಡದಲ್ಲಿ ಒಳ್ಳೆಯ ಗದ್ಯ ಹೇಗಿರುತ್ತದೆ ಎಂದು ಯಾರಾದರೂ ಕೇಳಿದರೆ ' ಆರ್ಯ ಕೀರ್ತಿ 'ಯ ಗದ್ಯವನ್ನು ಸಂಕೋಚವಿಲ್ಲದೆ, ಸಂತೋಷದಿಂದ ತೋರಿಸಬಹುದು. ಎಂಬತ್ತು ವರ್ಷಗಳಷ್ಟು ಹಿಂದಿನ ಈ ಗದ್ಯ ಕಳಪೆಯಾಗದೆ, ಹಳಸಿ ಹೋಗದೆ, ಇಂಗ್ಲಿಷಿ ಹೇಳುವಂತೆ —'-Retaining the old fire'—ತನ್ನ ಸತ್ವಪೂರ್ಣತೆಯನ್ನು

ಅರ್ಥಗಾಂಭೀರ್ಯವನ್ನು ಉಳಿಸಿಕೊಂಡಿದೆ, ಅನುಸರಣ ಯೋಗ್ಯವಾಗಿದೆ.

ಒಂದು ಕಾಲದಲ್ಲಿ ' ಆರ್ಯಕೀರ್ತಿ ' ಮನೆಮಾತಾಗಿತ್ತು ; ಇಂದಿಗೂ ಹಲವು ಹಳಬರ ನಾಲಗೆಯಲ್ಲಿ ಅದರ ಹೆಸರು ನಲಿಯುತ್ತಿದೆ. ಅದರ ಕಥಾವಸ್ತು, ಅದರ ಉಪದೇಶ ಸಾರ, ಅದರ ಭಾಷಾಶೈಲಿ ಹೀಗೆ ಒಂದೊಂದು ಗುಣ ಒಬ್ಬೊಬ್ಬರ ಮನಸ್ಸನ್ನು ಹೊಕ್ಕು ನಿಂತಿದೆ. " ಎಷ್ಟೋ ಜನ ಇದನ್ನು (' ಆರ್ಯ ಕೀರ್ತಿ 'ಯ ವಾಕ್ಯಗಳನ್ನು) ತಮ್ಮ ಲೇಖನ ಭಾಷಣಗಳಲ್ಲಿ ಬಳಸಿದ್ದಾರೆ. ಕೆಲವರು ಉಂಡುಂಡೆಯಾಗಿ, ಕೆಲವರು ಚೂರು ಚೂರಾಗಿ "—ಹೀಗೆನ್ನುತ್ತಾರೆ, ಡಿ. ವಿ. ಜಿ. ಮಾನ್ಯ ಶಿವರಾಮ ಕಾರಂತರು ತಮ್ಮ ' ಅಬೂವಿಂದ ಬರಾಮಕ್ಕೆ ' ಪ್ರವಾಸ ಕಥನದಲ್ಲಿ ಒಂದು ಕಡೆ, "....ಅಂಬೇರಕ್ಕೆ ಹೊರಟ ನಾನು ' ಆರ್ಯ ಕೀರ್ತಿ 'ಯ ಪಾಠ ಹೇಳುತ್ತಾ ಕುಳಿತೆನಲ್ಲವೇ ?'' ಎಂದು ಬರೆದಿದ್ದಾರೆ. ವಿದ್ವತ್ಕವಿ ಸೇಡಿಯಾಪು ಕೃಷ್ಣಭಟ್ಟರು ' ಆರ್ಯ ಕೀರ್ತಿ 'ಯಿಂದಲೇ ಪ್ರಚೋದಿತರಾದರೆಂಬಂತೆ ' ಕೃಷ್ಣಾ ಕುಮಾರಿ ' ಎಂಬ ' ಗಂಡು ಕವಿತೆ 'ಯನ್ನು ರಚಿಸಿದ್ದಾರೆ. ಭರತ ವರ್ಷದಲ್ಲಿ ಸ್ವಾತಂತ್ರ್ಯಾಂದೋಲನಕ್ಕೆ ಮಹಾಪೂರ ಬರುತ್ತಿದ್ದ ಕಾಲದಲ್ಲಿ ಪ್ರಕಟವಾದ ಈ ಗ್ರಂಥ ಕನ್ನಡಿಗರಲ್ಲಿ ದೇಶಭಕ್ತಿಯನ್ನು ಉದ್ದೀಪಿಸಿ, ಸ್ವಾತಂತ್ರ್ಯಾಪೇಕ್ಷೆಯನ್ನು ಉತ್ತೇಜಿಸಿರಲೇಬೇಕು. ಏಕೆಂದರೆ 'Pen is mighter than sword' ' ಬಾಲಬೋಧೆ 'ಯನ್ನು ಬರೆದು ಎಳೆಯರ ಬುದ್ಧಿಯನ್ನು ತಿದ್ದಿ ಕುದುರಿಸಿದ ಚ. ವಾಸುದೇವಯ್ಯನವರು ' ಆರ್ಯಕೀರ್ತಿ 'ಯನ್ನು ರಚಿಸಿ ಎಳೆಯರೊಂದಿಗೆ ಹಳಬರ ಕಣ್ಣನ್ನೂ ತೆರೆಯಿಸಿದರು।

ಹಿಂದಿನ ಕಾಲದಲ್ಲಿ ' ಆರ್ಯ ಕೀರ್ತಿ 'ಯು ಮೈಸೂರು ಕರ್ನಾಟಕದಲ್ಲಿ ಆಗಾಗ ಪಠ್ಯವಾಗಿ ಅಂಗೀಕೃತವಾಗುತ್ತಿತ್ತು. ಪರಿಣಾಮವಾಗಿ 1948 ಕ್ಕಾಗುವಾಗ ಅದು ಐದು ಸಲ ಪುನರ್ಮುದ್ರಿತವಾಯಿತು. ಪಠ್ಯವಾಗಿ ಆರಿಸಿದರೆ ' ಆರ್ಯ ಕೀರ್ತಿ 'ಯಂಥ ಗ್ರಂಥವನ್ನು ಆರಿಸಬೇಕು. ಆದರೆ ಈಗ ಹಾಗಿಲ್ಲ. ' ರಾಷ್ಟ್ರೀಕರಣ ' (Nationali-sation) ದ ಹೆಸರಲ್ಲಿ ಪಠ್ಯಗಳನ್ನು ಹೊಲೆಗೆಡಿಸಿ ಎಳೆ ಮಕ್ಕಳ ಕುತೂಹಲ ಬುದ್ಧಿಯನ್ನು ಮುರುಟಿಸಿದ್ದೇವೆ. ನಮ್ಮದು ' ಸೆಕ್ಯೂಲರ್ ' ರಾಷ್ಟ್ರ ಎಂದು ಘೋಷಿಸುವ ಭರದಲ್ಲಿ ' ರಾಷ್ಟ್ರೀಯತೆ 'ಯ ಕುಡಿಯನ್ನೇ ಚಿವುಟಿದ್ದೇವೆ. ದೇಶಪ್ರೇಮ, ಅಖಂಡ ಭಾರತ, ಭಾವೈಕ್ಯವೇ, ಮುಂತಾದ ನುಡಿಗುಂಡುಗಳನ್ನು ಆಗಾಗ ಹಾರಿಸುತ್ತೇವೆ ವಿನಾ ' ದೇಶ— ಅಖಂಡ—ಐಕ್ಯಗಳ ಅರ್ಥವನ್ನೇ ಅರಿಯುವ ಗೋಜಿಗೆ ಹೋಗುವುದಿಲ್ಲ. ಅವೆಲ್ಲ ಆಕಾಶದಿಂದ ಇಳಿಯುವ ವಸ್ತುಗಳಲ್ಲ: ಚರಿತ್ರೆಯ ಅಧ್ಯಯನದಿಂದ, ಉತ್ತಮ ಗ್ರಂಥ ಪಠನದಿಂದ ಮೊಳೆಯಬೇಕಾದದ್ದು ; ಬೆಳೆಯಬೇಕಾದದ್ದು. ದೇಶವೆಂದರೆ ಬರಿಯ ಮಣ್ಣಲ್ಲ, ಉದ್ದಗಲಗಳಲ್ಲ, ಜನಸಂಖ್ಯೆಯಲ್ಲ, ಮಳೆ ಬೆಳೆಗಳಲ್ಲ—ಅವೂ ಹೌದು ; ಆದರೆ ಅವಕ್ಕಿಂತ ಮುಖ್ಯವಾಗಿ ಒಂದು ಸಂಸ್ಕೃತಿ, ಚರಿತ್ರೆ, ಪರಂಪರೆ. ' ರಾಷ್ಟ್ರೀಯತೆ 'ಯೆಂದರೆ ಅವುಗಳ ಪರಿಶೀಲನ, ಆರಾಧನ, ಅನುಶೀಲನ. ಹಾಗೆ ನಮ್ಮನ್ನು ಪ್ರೇರಿಸುವುದಕ್ಕೆ ಬೇಕು ಬಂಕಿಮರ ' ವಂದೇ ಮಾತರಂ ' ಠಾಕೂರರ ' ಜನಗಣಮನ ', ಇಕ್ಬಾಲರ ' ಸಾರೇ

ಜಹಾಂ ಸೇ ಅಚ್ಛಾ'ದಂತಹ ಗೀತಗಳು; ಆನಂದಮಠ, ಆರ್ಯಕೀರ್ತಿಗಳಂಥ ಗ್ರಂಥಗಳು.

ಡಿ. ವಿ. ಜಿ. ಹೇಳುವಂತೆ, "ಒಂದು ಪರಿಶುದ್ಧವಾದ ಜೀವನ ಕುಸುಮ ಸೌರಭವೇ 'ಆರ್ಯಕೀರ್ತಿ"–ಕನ್ನಡಿಗರು ಆಗಾಗ ವಾಚನ, ಮನನ, ನಿದಿಧ್ಯಾಸನ ಮಾಡಬೇಕಾದ ಗ್ರಂಥ–"ಆರ್ಯಕೀರ್ತಿ".

## ೨೧. ಎ. ಎನ್. ಮೂರ್ತಿರಾಯರ 'ಹಗಲುಗನಸುಗಳು'

ಸಣ್ಣ ಕತೆ, ಭಾವಗೀತೆ, ಲಘು ಪ್ರಬಂಧ–ಈ ಮೂರೂ ಜ್ಞಾತಿವರ್ಗದ ಸಾಹಿತ್ಯ ಪ್ರಕಾರಗಳೆನ್ನಬಹುದು. ಯಾವುದೋ 'ಒಂದು ಹೊತ್ತಿನ, ಒಂದು ನಿಟ್ಟಿನ ಮನೋಧರ್ಮ ಅಥವಾ ಸಂಗತಿ' ಇವುಗಳ ಹುಟ್ಟಿಗೆ ಬೀಜವೆನಿಸುತ್ತವೆ. ಇಲ್ಲೆಲ್ಲ ಲೇಖಕನ ಮನಸ್ಸು ಹೇಗೆ ನಡೆಯುತ್ತದೆ, ಮಿಡಿಯುತ್ತದೆ, ನುಡಿಯುತ್ತದೆ ಎಂಬುದೇ ಮುಖ್ಯ. ಈ ಮೂರು ಪ್ರಕಾರಗಳೂ ಪಶ್ಚಿಮದ ಗಾಳಿಯಲ್ಲಿ ಹಾರಿಬಂದು, ಕನ್ನಡದ ಮಣ್ಣಲ್ಲಿ ಬಿದ್ದು ಮೊಳಕೆಯೊಡೆದವುಗಳು ಎಂದು ಹೇಳುವುದಿದೆ. ಇವುಗಳಲ್ಲೆಲ್ಲ 'ಲಘು ಪ್ರಬಂಧ' ಅಥವಾ 'ಹರಟೆ'ಗೆ ಈ ಮಾತು ಹೆಚ್ಚು ಖಚಿತವಾಗಿ ಅನ್ವಯಿಸುತ್ತದೆ. ಈ ಶತಮಾನದ ಮೂರನೆಯ ದಶಕದಲ್ಲಿ ಕನ್ನಡದಲ್ಲೂ ಲಘು ಪ್ರಬಂಧಗಳು ಕಾಣಿಸಿಕೊಂಡವು. ಮೊದಲು ಮೊದಲು ಪತ್ರಿಕೆಗಳಲ್ಲಿ ಹರಡಿ ಹೋಗಿ, ಅನಂತರ ಗುಂಪುಗೂಡಿ ಪುಸ್ತಕ ರೂಪವನ್ನು ಪಡೆದು ಜನರ ಕಣ್ಮನಗಳನ್ನು ರಂಜಿಸಿದವು. ಕನ್ನಡದಲ್ಲಿ ಲಘು ಪ್ರಬಂಧ ಅಥವಾ ಹರಟೆ ಎನ್ನುವಾಗ ಥಟ್ಟನೆ ಹೊಳೆಯುವ, ಮನಸ್ಸನ್ನು ಮುತ್ತುವ ಹೆಸರುಗಳಲ್ಲಿ ಶ್ರೀ ಎ. ಎನ್. ಮೂರ್ತಿರಾಯರದ್ದು ಮುಖ್ಯವಾದುದು. ಅವರ 'ಹಗಲುಗನಸುಗಳು' ಎಂಬ ಸಂಗ್ರಹವು 1937ರಲ್ಲಿ ಪ್ರಕಟವಾಯಿತು. ಪ್ರಕಟವಾಗಿ ಮೂವತ್ತೈದು ವರ್ಷಗಳು ಸಂದರೂ ಕನ್ನಡ ಸಾಹಿತ್ಯಾಕಾಶದಲ್ಲಿ ಅದೊಂದು ವಿಶಿಷ್ಟ ನಕ್ಷತ್ರವಾಗಿ ಮಿನುಗುತ್ತಲೇ ಇದೆ.

'ಹಗಲುಗನಸುಗಳು' ಎಂಬ ಸಂಗ್ರಹವನ್ನಲ್ಲದೆ, 'ಅಲೆಯುವ ಮನ', 'ಮಿನುಗು ಮಿಂಚು' ಎಂಬ ಇನ್ನೆರಡು ಸಂಕಲನಗಳನ್ನೂ ಶ್ರೀ ಮೂರ್ತಿರಾಯರು ಕಾಲಾಂತರದಲ್ಲಿ ಪ್ರಕಟಿಸಿದ್ದಾರೆ. ಇವುಗಳಲ್ಲೂ ರೋಚಕವಾದ ಪ್ರಬಂಧ (ಎಂದರೆ ಲಘು ಪ್ರಬಂಧ) ಗಳಿದ್ದರೂ, 'ಹಗಲುಗನಸುಗಳ' ಸೊಗಸೇ ಸೊಗಸು! ಆ ಸಂಗ್ರಹದಲ್ಲಿರುವ ಏಳು ಲೇಖನಗಳೂ ಒಂದೊಂದು ಬಣ್ಣದವಾಗಿದ್ದು ಒಟ್ಟು ಸಂಗ್ರಹವು ಸಪ್ತವರ್ಣದ ಕಾಮನ ಬಿಲ್ಲಿನ ಬೆಡಗನ್ನು ಮೆರೆಯುತ್ತದೆ. ಶ್ರೀ ಅ. ರಾ. ಮಿತ್ರರು ಹೇಳುವಂತೆ, "ಲಲಿತವಾದ ಬರವಣಿಗೆ, ಉದ್ದಕ್ಕೂ ಚಿಮ್ಮುವ ತಿಳಿಹಾಸ್ಯವಾಹಿನಿ, ನವ ಪ್ರಣಯಿಗಳ ಮನೋವ್ಯಾಪಾರದ ಸೂಕ್ಷ್ಮ ವಿಶ್ಲೇಷಣೆ, ಗಂಭೀರ ವಿಷಯಗಳನ್ನೆತ್ತಿಕೊಂಡು ಹಗುರವಾದ ಶೈಲಿಯಲ್ಲೇ ನಡೆಸುವ ಮಾರ್ಮಿಕ ಹೃದ್ಬೋಧಕ ವಿಮರ್ಶೆ, ಎಲ್ಲ ಮಗ್ಗುಲುಗಳನ್ನೂ ಕಾಣಿಸುತ್ತ ಸಾಗುವ ವಿಚಾರದ ಪುಷ್ಟಿ, ನಿರ್ಜೀವ ವಸ್ತುಗಳ ವಿವರಣೆಯಲ್ಲೂ ಕಂಡುಬರುವ ನಾಟ್ಯಶಕ್ತಿ"–ಇವು ಇಲ್ಲಿಯ ಬರವಣಿಗೆಗಳ ವಿಶೇಷ ಗುಣಗಳು.

ಪ್ರಕೃತ ಸಂಗ್ರಹದ ಮೊದಲ ಪ್ರಬಂಧ 'ಗೌರಜ್ಜಿ'–ಮನೆಯ ಮಕ್ಕಳಿಗೆಲ್ಲ ವಿಧವೆ ಗೌರಜ್ಜಿಯಲ್ಲಿ ಸಹಾನುಭೂತಿ; ಗೌರಜ್ಜಿಗೆ ಮಕ್ಕಳಲ್ಲಿ ಮಮತೆ, ವಾತ್ಸಲ್ಯ. ಭೂತ ವರ್ತಮಾನಗಳ ನಡುವೆ ಸೇತುವೆಯಂತಿದ್ದಾರೆ ಗೌರಜ್ಜಿ. ತಮ್ಮ ಅತ್ತೆಮನೆಯ ವೈಭವವನ್ನಾಗಲೀ, ತವರು ಮನೆಯ ಚೆಲುವನ್ನಾಗಲೀ ವಿವರಿಸುವುದರಲ್ಲಿ ಗೌರಜ್ಜಿಗೆ ಅತ್ಯಂತ

ಆಸಕ್ತಿ. ಮನೆಯ ಹುಡುಗರಿಗೆಲ್ಲ ತಂದೆಯ ಬೆತ್ತ, ತಾಯಿಯ ಬಯ್ಗುಳಗಳಿಂದ ರಕ್ಷಣೆ ಬೇಕಾದಾಗ ಗೌರಜ್ಜಿಯೇ ಶರಣು–"ಹುಡುಗರ ಸಹಾಯಕ್ಕೆ ಒಂದು ದೊಡ್ಡ ಸೈನ್ಯವಿದ್ದ ಹಾಗೆ" ಗೌರಜ್ಜಿ! ಬೋಳು ತಲೆ, ಬೋಡು ಬಾಯಿ, ಕೆಂಪು ಸೀರೆಯ ಗೌರಜ್ಜಿಗಳು ಮನೆಮನೆಗಳಲ್ಲೂ ಇರಬಹುದು; ಆದರೆ ಸಹನೆ, ಸಹಾನುಭೂತಿ, ಆಸಕ್ತಿಗಳಿಂದ ಅವರನ್ನು ಸಮೀಪಿಸುವವರು ಕಡಮೆ. ಅವರ ಹತ್ತಿರ ಹೋದರೆ ತಿಳಿಯುತ್ತದೆ–ಅಜ್ಜಿಗಳೆಂದರೆ ನೆನಪಿನ ನಿಕ್ಷೇಪ; ಮಮತೆಯ ಮಡು!–ಮೂರ್ತಿರಾಯರ 'ಗೌರಜ್ಜಿ'ಯ ಬಣ್ಣನೆಯನ್ನು ಕೇಳುವಾಗ ನನ್ನ ಮನೆಯ ಅಜ್ಜಿಯನ್ನೇ ಕಂಡಂತಾಗುತ್ತದೆ!

'ಹಗಲುಗನಸುಗಳು' ಎರಡನೆಯದು (ಪುಸ್ತಕದ ಶೀರ್ಷಿಕೆಯೂ ಇದೇ). ಚಿಕ್ಕಂದಿನಲ್ಲಿ ನನ್ನ ಮನಸ್ಸು ಹೆಚ್ಚು ಕೋಮಲವಾಗಿರುತ್ತದೆ; ಕುತೂಹಲ ಪ್ರವೃತ್ತಿ ಹೆಚ್ಚಿರುತ್ತದೆ; ಕಲ್ಪನಾಶಕ್ತಿ ಅಮಿತವಾಗಿರುತ್ತದೆ. ಅಂತಹ ವಯಸ್ಸಿನಲ್ಲಿ 'ಅರೇಬಿಯನ್ ನೈಟ್ಸ್' ನಂತಹ ಕಥೆಗಳನ್ನೋದಿದರೆ, ಮನಸ್ಸು 'ಗಾಳಿಗುದುರೆ ಬೆನ್ನ ಏರಿ' ಸವಾರಿ ಮಾಡುವುದೇನೂ ಆಶ್ಚರ್ಯಕರವಲ್ಲ. ರಮ್ಯವಾದ ನಗರ, ಮನೋಹರವಾದ ಉದ್ಯಾನ, ಸುಂದರಿಯಾದ ರಾಜಕುಮಾರಿ–ಇಂತಹ ನೂರಾರು ವಿಷಯ–ವಸ್ತುಗಳು ಕಣ್ಮುಂದೆ ಸುಳಿದಂತಾಗಿ, ಸನ್ನೆ ಮಾಡಿ ಕರೆದಂತೆ ಭಾಸವಾಗುವುದಿದೆ. ಕಷ್ಟ ನಿಷ್ಠುರಗಳ ಈ ಅಸಹ್ಯ ಜಗತ್ತನ್ನೂ ದಾರುಣ ಜೀವನವನ್ನೂ ಮರೆತು 'ನಮ್ದೇ ಲೋಕಾನ ವುಟ್ಟಿಸ್ಕೋ ಬೇಕು' ಎಂಬುದೇ ಹಗಲುಗನಸಿಗೆ ಹಿನ್ನೆಲೆ, ಪ್ರೇರಣೆ. ಪ್ರಾಯ ಏರಿದಂತೆ ಕನಸುಗಾರಿಕೆ ಕಮ್ಮಿಯಾಗುತ್ತದೆ, ಬದುಕು ದುರ್ಭರವಾಗುತ್ತದೆ–ಶ್ರೀ ಮೂರ್ತಿರಾಯರು ಈ ಭಾವವನ್ನೇ ಎಸಳೆಸಳಾಗಿ ಬಿಡಿಸಿದ್ದಾರೆ ಪ್ರಸ್ತುತ ಪ್ರಬಂಧದಲ್ಲಿ.

ಕವಿವರ್ಯ ಬೇಂದ್ರೆಯವರು ತಮ್ಮ 'ಹೂ' ಎಂಬ ಕವಿತೆಯಲ್ಲಿ ಬ್ರಹ್ಮನು 'ಫು' ಎಂದು ಬಿಟ್ಟ ಉಸಿರೆ 'ಹೂ' ಎಂದಾಯಿತು ಎಂಬ ಸ್ವಾರಸ್ಯ ಪೂರ್ಣವಾದ ನವೀನ ತರ್ಕವೊಂದನ್ನು ಹೂಡಿ–

'ಇದುವೆ ಚೆಂದದ ಕುಸುರು
ನರುಗಂಪು ಇದರುಸಿರು
ಇದಕೆ 'ಹೂ' ಎಂಬ ಹಗುರಾದ ಸವಿ ಹೆಸರು'

ಎಂದು ನಿರ್ಣಯಿಸಿದ್ದಾರೆ. ಹೂವಿನ ವ್ಯಾಜದಲ್ಲಿ ಬೇಂದ್ರೆಯವರ ಕವಿಭಾವವು ಎಳೆಎಳೆಯಾಗಿ ಹರಿದಿರುವಂತೆಯೇ ಶ್ರೀ ಮೂರ್ತಿರಾಯರ 'ಹೂವುಗಳು' ಎಂಬ ಪ್ರಬಂಧದಲ್ಲೂ ಅವರ ಕಲ್ಪನಾಶಕ್ತಿ, ಪ್ರಕೃತಿ ನಿರೀಕ್ಷಣಾಸಕ್ತಿಗಳು ಜತೆಗೂಡಿ ಎಷ್ಟೊಂದು ಸೊಗಸಾದ ಕುಸುರಿಗೆಲಸವನ್ನು ಮಾಡಿವೆ ಎಂಬುದನ್ನು ಮನಗಾಣುತ್ತೇವೆ. ನಾಡಿನ, ಕಾಡಿನ ಬಗೆ ಬಗೆಯ ಹೂಗಳು, ಅವುಗಳ ರೂಪ, ಗಾತ್ರ, ಗಂಧ, ಸೌಕುಮಾರ್ಯ, ಹೂವುಗಳು ನಿರ್ಮಿಸುವ 'ರೋಮಾನ್ಸ್' ಪ್ರಪಂಚ ಇವನ್ನೆಲ್ಲ ಮನಸ್ಸು ತುಂಬ, ಬಾಯ್ತುಂಬ ಬಣ್ಣಿಸಿದ ಲೇಖಕರು ಗೋಲ್ಡ್‌ಸ್ಮಿತ್ ಕವಿಯಂತೆ ('Nature is truly bounteous

but man is ungrateful ') " ಸುತ್ತಲೂ ಸೌಂದರ್ಯವೇನೋ ತುಂಬಿದೆ; ನೋಡಲು ಕಣ್ಣು ಬೇಕು; ಅವಿಲ್ಲವಲ್ಲಾ" ಎಂದು ಕೊರಗಿದ್ದಾರೆ. ' ಹೂಗಳು ' ನಿಜವಾಗಿಯೂ ಒಂದು ಗದ್ಯ ಕವನ.

ಶಾಕುಂತಲ ನಾಟಕದ ಪಂಚಮಾಂಕದಲ್ಲಿ ಜನನಿಬಿಡವಾಗಿ, ಸದ್ದು-ಗದ್ದಲಗಳಿಂದ ಕೂಡಿದ ಹಸ್ತಿನಾವತಿಯನ್ನು ಕಂಡಾಗ ಕಣ್ವ ಶಿಷ್ಯ ಶಾರ್ಙ್ಗರವನು—

'ತಥಾಪೀದಂ ಶಶ್ವತ್ಪರಿಚಿತ ವಿವಿಕ್ತೇನ ಮನಸಾ
ಜನಾಕೀರ್ಣಂ ಮನ್ಯೇ ಹುತವಹ ಪರೀತಂ ಗೃಹಮಿವ'

ಎಂದು ಉದ್ಗರಿಸುತ್ತಾನೆ!—ಆಧುನಿಕ ನಗರ ಜೀವನದ ಅರ್ಭಟ, ಧಾವಂತ, ಕೃತಕತೆ, ಅವ್ಯವಸ್ಥೆಗಳನ್ನೆಲ್ಲ ಕಾಣುವಾಗ ಏಕಾಂತ, ಸಾವಧಾನಗಳನ್ನು ಬಯಸುವ ಮನಸ್ಸು ಕಾಳಿದಾಸನೊಂದಿಗೆ ಸಹಮತಿಸಿದರೆ ಆಶ್ಚರ್ಯವೇನೂ ಇಲ್ಲ!—' ಗಾಡಿಯ ಪ್ರಯಾಣ ' ವೆಂಬ ಪ್ರಬಂಧವು ' ವಿವಿಕ್ತ ಪರಿಚಿತ ' ಮನೋಧರ್ಮಿಗಳಿಗೇ ಸಾಧ್ಯವಾಗುವ ರಚನೆ ಯೆನ್ನಬೇಕು. ತೈಲಶಕಟಗಳ ಕರ್ಕಶ ಶಬ್ದವು ಕಿವಿಯನ್ನು ಕೊರೆದು, ಅವು ಎಬ್ಬಿಸುವ ಧೂಳು ಕಣ್ಣನ್ನು ಕವಿದು, ಅವುಗಳೊಳಗೆ ಕೂತಾಗ ' ಕಲಕತ್ತೆಯ ಕತ್ತಲುಮನೆಯ ' ಭ್ರಾಂತಿಯಾಗಿ ಮೂಗುಬ್ಬಸ ಬರುವಂತಾದಾಗ ಮೂರ್ತಿರಾಯರು ಹಾಡಿ ಹೊಗಳುವ ಗಾಡಿಯ ಪ್ರಯಾಣ ಯಾರಿಗೆ ತಾನೇ ಬೇಡವಾದೀತು ? —" ಮೇಲೆ ತಿಳಿಯಾದ ನಕ್ಷತ್ರ ಮಂಡಿತವಾದ ಆಕಾಶ ; ಮುಂದೆ ಬೆಳುದಿಂಗಳಿನಲ್ಲಿ ಇಲ್ಲಿ ಶುಭ್ರವಾಗಿಯೂ ಅಲ್ಲಿ ಅಸ್ಪಷ್ಟ ವಾಗಿಯೂ ನೆರಳಿನ ನಡುವೆ ನುಸುಳಿಕೊಂಡು ಹೋಗುವ ರಸ್ತೆ ; ಮೃದುವಾಗಿ ಬೀಸುವ ತಂಗಾಳಿ ; ಎತ್ತುಗಳ ಕೊರಳಿನಲ್ಲಿರುವ ಗೆಜ್ಜೆಯ ಶಬ್ದ—" ಇವೆಲ್ಲವೂ ಸೇರಿದರೆ ಒಂದು ಕನಸಿನ ಪ್ರಪಂಚವೇ ಕಣ್ಣ ಮುಂದೆ ತೆರೆಯುವುದಲ್ಲವೇ ? ಎತ್ತಿನಗಾಡಿಯಲ್ಲಿ ಏರಿ ಕುಳಿತು ಕೊಳ್ಳುವವರೆಗಿನ ಆ ಸಂಭ್ರಮ, ಆ ಮೇಲಿನ ಸಾವಧಾನ, ಗಾಡಿ ಹೊಡೆಯುವವನ ವಿರಹ ಗಾನ, ಪ್ರಯಾಣ ಕಾಲದಲ್ಲಿ ಎದುರಾಗುವ ಜಡೆಮುನಿ ಮೋಹಿನಿಯರ ಕಾಟ, ದರೋಡೆ ಕಾರರ ಹಾವಳಿ-ಇವನ್ನೆಲ್ಲ ಕಂಡು, ಕೇಳಿ, ತಿಳಿದು ಅನುಭವಿಸಬೇಕಾದರೆ ಮೂರ್ತಿ ರಾಯರ ' ಗಾಡಿಯ ಪ್ರಯಾಣ 'ವನ್ನು ಓದಬೇಕು. ಓದುತ್ತಾ ಹೋದಂತೆ, " ಈಗಿನ ಪ್ರಪಂಚದಲ್ಲಿ ವೇಗ ಹೆಚ್ಚು, ಸಂಪತ್ತು ಹೆಚ್ಚು, ಆದರೆ ಸೌಖ್ಯ ಹೆಚ್ಚೆಂದು ಹೇಳಲಾಗುವು ದಿಲ್ಲ" ಎಂಬ ಅಭಿಪ್ರಾಯಕ್ಕೆ ನಾವೂ ಬರುತ್ತೇವೆ; ' ಹುಣ್ಣಿಮೆಯ ರಾತ್ರಿ, ಸಾಲು ಮರಗಳ ನಡುವಿನ ರಸ್ತೆ, ಒಳ್ಳೆಯ ಜಾತಿಯ ಎತ್ತುಗಳು, ತುಯ್ಯುತ್ತಿರುವ ಗಾಡಿ, ಜೊತೆ ಯಲ್ಲಿ ನನ್ನ ನಲ್ಲೆ......' ಎಂದು ಮೂರ್ತಿರಾಯರು ಕಾಣುವ ಕನಸನ್ನು ನಾವೂ ಕಾಣು ತ್ತೇವೆ !

ಮುಂದಿನ ಮೂರು ಪ್ರಬಂಧ-ಕುರುಡ, ಲಲಿತೆಯ ವಿದ್ಯಾಭ್ಯಾಸ ಮತ್ತು ಪ್ರಣಯ ಯಾತ್ರೆಗಳು ಲೇಖಕನ ಜೀವನಕ್ಕೆ ನೇರವಾಗಿ ಸಂಬಂಧಿಸಿದಂತೆ ರಚಿತವಾಗಿವೆ. ' ಕುರುಡ ' ಎಂಬುದರಲ್ಲಿ ದಂಪತಿಗಳ " ಮನೋವ್ಯಾಪಾರದ ಸೂಕ್ಷ್ಮ ವಿಶ್ಲೇಷಣೆ "

ಯನ್ನು ಕಾಣಬಹುದು. ಭಿಕ್ಷುಕರಿಗೆ ದಾನ ನೀಡುವಲ್ಲಿ ಗಂಡು-ಹೆಣ್ಣು ಗಳ ಮನಸ್ಸು ಯಾವಯಾವ ದಾರಿಯಲ್ಲಿ ಹೇಗೆ ಹೇಗೆ ನಡೆಯುತ್ತದೆ ಎಂಬುದನ್ನು ಇಲ್ಲಿ ಮಾರ್ಮಿಕವಾಗಿ ವಿವೇಚಿಸಲಾಗಿದೆ. 'ಲಲಿತೆಯ ವಿದ್ಯಾಭ್ಯಾಸ' ಹಾಗೂ 'ಪ್ರಣಯ ಯಾತ್ರೆ'ಗಳಲ್ಲಿ ತಿಳಿಹಾಸ್ಯವು ಬಣ್ಣದಕಾರಂಜಿಯಾಗಿ ಪುಟನೆಗೆಯುತ್ತಿದೆ. ಲೇಖಕನು ತನ್ನ ಪ್ರಿಯ ತಮೆಗೆ ಇಂಗ್ಲಿಷ್ ಪಾಠ ಹೇಳಲು ಪ್ರಯತ್ನಿಸಿ, ಹೇಗೆ ಸೋತನೆಂಬುದನ್ನು ಒಂದರಲ್ಲಿ ವಿವರಿಸಿದ್ದರೆ, ಇನ್ನೊಂದರಲ್ಲಿ ದಂಪತಿಗಳು ಪ್ರಣಯ ಯಾತ್ರೆ (ಹನಿಮೂನ್)ಗೆ ಹೊರ ಟಾಗ ಎದುರಾದ ಕಷ್ಟ-ನಷ್ಟಗಳೂ, ಮೂವತ್ತು ದಿನಗಳ ಪ್ರಣಯವಾಸವು ಮೊಟಕಾಗಿ ಇಪ್ಪತ್ತೇ ದಿನಗಳಲ್ಲಿ ಕೊನೆಗೊಂಡ ಅನಿವಾರ್ಯ ಪರಿಸ್ಥಿತಿಯೂ ಚಿತ್ರಿತವಾಗಿದೆ.

ಮೊದಲೇ ಹೇಳಿದಂತೆ, ಇಲ್ಲಿಯ ಏಳೂ ಪ್ರಬಂಧಗಳೂ ಒಂದೊಂದು ವಿಧದಲ್ಲಿ ಸ್ವಾರಸ್ಯವಾಗಿದ್ದರೂ, ತುಲನಾತ್ಮಕವಾಗಿ ಹೇಳುವುದಾದರೆ ಮೂರು ಲೇಖನ-ಹಗಲು ಗನಸುಗಳು, ಹೂವುಗಳು, ಮತ್ತು ಗಾಡಿಯ ಪ್ರಯಾಣ-ಗಳು ವಾಚಕನ ಚಿತ್ತವನ್ನು ವಿಶೇಷವಾಗಿ ಸೆಳೆಯುತ್ತವೆ. ಇಂಗ್ಲಿಷಿನಲ್ಲಿ ಚಾರ್ಲ್ಸ್ ಲ್ಯಾಂಬಿನ 'ಕನಸಿನ ಮಕ್ಕಳ' (The Dream Children)ಲ್ಲಿ ಎಂಥ ಅನ್ಯಾದೃಶವಾದ ಚೆಲುವನ್ನು ಕಾಣಬಹುದೋ ಅಂತಹದೇ ಸೊಬಗನ್ನು—ಆತ್ಮೀಯ ನಿರೂಪಣೆ, ಹೃದಯಸ್ಪರ್ಶಿಯಾದ ಭಾವಲಹರಿ ಗಳಿಂದಾದದ್ದು ಈ ಸೊಬಗು—ಈ ಪ್ರಬಂಧಗಳಲ್ಲೂ ಕಾಣಬಹುದು. ಒಟ್ಟಿನಲ್ಲಿ ಎಲ್ಲ ಪ್ರಬಂಧಗಳಲ್ಲೂ ಮೂರ್ತಿರಾಯರ ಲೇಖನಿ ಎಂತಹ ಸರಸವಾದ, ಹೃದ್ಯವಾದ ಗದ್ಯವನ್ನು ನಿರ್ಮಿಸಿದೆ ಎಂಬುದನ್ನು ಕಂಡು ಕೊಂಡಾಡಲೇಬೇಕು.

ಮಿತವಾದರೂ ಹಿತವಾದ ಬರವಣಿಗೆ ಶ್ರೀ ಮೂರ್ತಿರಾಯರದ್ದು. ಬರೆದದ್ದನ್ನೆಲ್ಲ 'ಕಣ್ಗೆ ಮಯಿರ್ ಎಚ್ಚುವಂದದಿ ತೀಡಿ, ತಿದ್ದಿ' ಬರೆದಿದ್ದಾರೆ. ಆದುದರಿಂದಲೇ ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹೇಳುವಂತೆ "ಇವರ ಪ್ರಬಂಧಗಳನ್ನು ಓದುತ್ತಿ ರುವಾಗ ಪುಷ್ಪಭರಿತವಾದ ಉದ್ಯಾನವನದಲ್ಲಿ ಪಚ್ಚೆಯ ಹಸಿರು ಹುಲ್ಲಿನ ಮೇಲೆ ನಡೆ ಯುತ್ತ ಬಗೆ ಬಗೆಯ ಹೂಗಳ ಪರಿಮಳವನ್ನು ಆಘ್ರಾಣಿಸುವ ಮನೋಭಾವ ಉಂಟಾಗು ತ್ತದೆ."—ಕನ್ನಡದ ಹೊಲದಲ್ಲಿ ಬೆಳೆದ ಗಟ್ಟಿಕಾಳುಗಳಲ್ಲಿ ಶ್ರೀ ಮೂರ್ತಿರಾಯರ ಲಘು ಪ್ರಬಂಧಗಳೂ ಕೆಲವಾಗಿವೆ ಎಂಬುದು ನಿಸ್ಸಂದೇಹ.

## ೨೨. ಶಂಕರಭಟ್ಟರ 'ಕಾಣಿಕೆ'

ಹೊಸಗನ್ನಡ ಕವಿಗಳಲ್ಲಿ ಕಡೆಂಗೋಡ್ಲು ಶಂಕರ ಭಟ್ಟರದ್ದು ಹಿರಿಯ ತಲೆ, ಹಿರಿಯ ಹೆಸರು : ಪಂಜೆ, ಮುಳಿಯ, ಪೈ ಮುಂತಾದವರ ಕಾಲದಲ್ಲೇ, ಅವರ ಜತೆಯಲ್ಲೇ ಸಾಹಿತ್ಯ ವ್ಯವಸಾಯವನ್ನು ಆರಂಭಿಸಿದವರು ಶಂಕರ ಭಟ್ಟರು. ಅವರ ಮೊದಲ ಕವಿತಾ ಸಂಗ್ರಹ– 'ಕಾಣಿಕೆ'—ಪ್ರಕಟವಾದದ್ದು 1927 ರಲ್ಲಿ. ಆಗಿನ್ನೂ ಅವರಿಗೆ ಹದಿನೈದೋ, ಇಪ್ಪತ್ತೋ ವರ್ಷ ಪ್ರಾಯ. ಆ ಎಳೆಯ ಪ್ರಾಯದಲ್ಲೇ ಅವರಿಗೆ ಸಿದ್ಧಿಸಿದ್ದ ಕವಿತಾ ಶಕ್ತಿ, ಭಾಷಾ ಪ್ರಭುತ್ವಗಳಾಗಲೀ ಅವರು ತೋರಿದ ಅಲಂಕಾರ ಸಂಪತ್ತು, ಛಂದೋ ವೈವಿಧ್ಯವಾಗಲೀ ಆಶ್ಚರ್ಯಕರವೂ ಪ್ರಶಂಸನೀಯವೂ ಆಗಿದೆ.

ಆದಿನ್ನೂ ಕನ್ನಡದ ಬಳ್ಳಿಯಲ್ಲಿ ಭಾವಗೀತವು ಕುಡಿಯೊಡೆಯುತ್ತಿದ್ದ ಕಾಲ. ಬಿ. ಎಂ. ಶ್ರೀಯವರ 'ಇಂಗ್ಲಿಷ್ ಗೀತಗಳು' ಕನ್ನಡದಲ್ಲೊಂದು ಹೊಸ ಗಾಳಿಯನ್ನು ಊದಿ ಹೊಸ—ಹೊಸ ಕಾವ್ಯ ಕುಸುಮಗಳ ವಿಕಾಸಕ್ಕೂ, ವಿಲಾಸಕ್ಕೂ ಪ್ರೇರಣೆಯನ್ನು ನೀಡಿತ್ತು. ಮೈಸೂರಲ್ಲಿ ಶ್ರೀಯವರ ಶಿಷ್ಯರೂ, ಧಾರವಾಡದತ್ತ ಬೇಂದ್ರೆ ಮತ್ತು ಅವರ ಗೆಳೆಯರೂ ಬಿಡಿ ಬಿಡಿಯಾಗಿ ಕವನಗಳನ್ನು ಬರೆಯುತ್ತಿದ್ದರು, ಪ್ರಕಟಿಸುತ್ತಿದ್ದರು. ಅಂತಹ ಕಾಲದಲ್ಲಿ, ದಕ್ಷಿಣ ಕನ್ನಡದ ಕಡೆಂಗೋಡ್ಲು ಶಂಕರಭಟ್ಟರು ತಮ್ಮ 'ಕಾಣಿಕೆ' ಯನ್ನು ಕನ್ನಡಮ್ಮನ ಮುಂದಿಟ್ಟರು.

ಮಂಗಳೂರಿನ 'ಬಾಲ ಸಾಹಿತ್ಯ ಮಂಡಲ'ವು ಪ್ರಕಟಿಸಿದ 'ಕಾಣಿಕೆ'ಯು ಹದಿನೆಂಟು ಕವಿತೆಗಳಿರುವ ಮೂವತ್ತು ಪುಟಗಳ ಪುಟ್ಟ ಪುಸ್ತಕ. ಗಾತ್ರದಲ್ಲಿ ಮಾತ್ರ ಅದು ಸಣ್ಣದು. ಕಾವ್ಯಕ್ಷೇತ್ರದಲ್ಲಿ ಶಂಕರ ಭಟ್ಟರು ಮಾಡಿದ ಮೊದಲನೆಯ ಉಳುಮೆ ಆದಾದರೂ ಅಲ್ಲಿ ಗಟ್ಟಿ ಕಾಳುಗಳೇ ಹೆಚ್ಚಾಗಿವೆ. ಹಾಗೆಯೇ ಅದು ಕವಿಯ ಬಗ್ಗೆ ಕನ್ನಡಿಗರಲ್ಲಿ ಸಾಕಷ್ಟು ಭರವಸೆಯನ್ನು ಹುಟ್ಟಿಸಿದ ಸಂಗ್ರಹವೂ ಹೌದು. ಮುಂದೆ 'ಹಣ್ಣುಕಾಯಿ' 'ನಲ್ಮೆ'ಗಳು ಪ್ರಕಟವಾದಾಗ ಭರವಸೆ ಸುಳ್ಳಾಗಲಿಲ್ಲ ; ನಿಜವಾಯಿತು, ಬಲವಾಯಿತು.

ಪುಸ್ತಕದಲ್ಲಿರುವ ಹದಿನೆಂಟು ಕವಿತೆಗಳಲ್ಲಿ 'ಕಾಣಿಕೆ'ಯೇ ಮೊದಲಿನದು ; ಸಂಗ್ರಹದ ಶೀರ್ಷಿಕೆಯೂ ಅದೇ ಆಗಿದೆ. ಅದರಲ್ಲಿ ಕವಿಯ ನಾಡ—ನುಡಿಯ ಭಕ್ತಿಯು ತುಂಬ ಸೊಗಸಾಗಿ, ಹೃದಯಸ್ಪರ್ಶಿಯಾಗಿ ಪ್ರಕಟವಾಗಿದೆ.–

> **ಆವ ಕಾಣ್ಕೆಯ ಕೊಡುವೆ ಕನ್ನಡದ ಮಾತೆ-ನಿನ**
> **ಗಾವ ಕಾಣ್ಕೆಯ ಕೊಡುವೆ ಮಮ ಜನ್ಮದಾತೆ ?**

ಎಂದು ಹಾಡುವ ಕವಿ, ಕಡಲಾಳದ ಮುತ್ತುರತ್ನಗಳಿಂದ ನಿನ್ನ ಶಿರದ ರತ್ನಕಿರೀಟವನ್ನಲಂಕರಿಸಲೇ ? ತಾರೆಗಳನ್ನು ಬಳ್ಳಿ ಮಿಂಚುಗಳ ದಾರದಲ್ಲಿ ಕೋದು ಕಂಬುಕಂಧರಕೆ ತೊಡಿಸಲೇ ? ಸೂರ್ಯ ಚಂದ್ರರನ್ನೆ ತಾಳಗಳಾಗಿ ಬಡಿದು ನಿನ್ನ ಕೀರ್ತಿಗಾನವನ್ನು ಮಾಡಲೇ ? ಎಂದು ಪ್ರಶ್ನಿಸುತ್ತಾ, ಅವು ಯಾವುವೂ ಸಾಲದೆಂದು, ಕೊನೆಯಲ್ಲಿ—

ಹಿಡಿದೆಳೆದು ತಂದು ಸುಗ್ಗಿಯ ಚಿಗುರನೆಲ್ಲನಿ
ನ್ನಡಿಯನೆಡೆಬಿಡದೆ ಭಕ್ತಿಯೊಳಗರ್ಚಿಪೆನೆ ?
ಸಡಗರದೊಳೆನ್ನ ಜೀವನದ ಕುಸುಮವನೊಂದೆ
ಹಿಡಿಯೊಳಡಗಿಸಿ ಪಾದಪೂಜೆಗರ್ಪಿಪೆನೇ ?

ಎಂದು ಉದ್ಘೋಷಿಸುತ್ತಾನೆ. ಕವಿಯ ಭಕ್ತಿಭಾವಾವೇಶಗಳು ಘಂಟಾನಾದದಂತೆ ಓದುಗರ ಕಿವಿಯಲ್ಲಿ ಮೊಳಗುತ್ತವೆ. ಕವಿ ಅವರೆದೆಯಲ್ಲಿ ಎಡೆಯನ್ನು ಪಡೆಯುತ್ತಾನೆ. ಕವಿಯ ಈ ಭಕ್ತಿಯನ್ನು, ಸಮರ್ಪಣಭಾವವನ್ನು ಕನ್ನಡತಾಯಿ ಮೆಚ್ಚಿದುದಕ್ಕೆ ಬಾಹ್ಯನಿದರ್ಶನ ವೆಂಬಂತೆ ಮುಂದೆ ಬೇಂದ್ರೆ, ಕುವೆಂಪು ಮುಂತಾದವರ ಅಗ್ರಪಂಕ್ತಿಯಲ್ಲಿ ಕಡೆಂಗೋಡ್ಲು ರವರ ಹೆಸರೂ ಸೇರುವಂತಾಯಿತು.

'ಏತಕಿನಿತುಪಚಾರ'ವೆಂಬ ಮುಂದಿನ ಕವಿತೆಯೊಂದು ಅನ್ಯಾಪದೇಶ. ಅದರಲ್ಲಿ ನಂಟರ ಮನೆಗೆ ಬಂದ ಅಳಿಯನು ತಾನಿನ್ನು ತಂದೆ ತಾಯಿ ಇರುನಲ್ಲಿಗೆ ಹೊರಡುತ್ತೇನೆ, ಹೆಂಡತಿ ಮಕ್ಕಳು ಹಿಂದಿನಿಂದ ಬರಲಿ ಉಪಚಾರ ಸಾಕು, ಎನ್ನುತ್ತಾನೆ. ಈ ಲೋಕದ ಬಂಧನವನ್ನು ಕಳಚಿ ಮೇಲುಲೋಕಕ್ಕೆ, ಹೋಗಬಯಸುವ ಜೀವವೇ ಈ ಅಳಿಯ. 'ಭಿಕ್ಷುಕ' ಎಂಬ ಸೀಸಪದ್ಯದಲ್ಲಿ ಹಿಡಿ ಅನ್ನಕ್ಕಾಗಿ, ಮೊಳ ಬಟ್ಟೆಗಾಗಿ, ಪರದಾಡಿ ಕಂಗೆಟ್ಟು ದೇವರಿಗೆ ಶರಣಾಗುವ ಮನುಷ್ಯಜೀವದ ಚಿತ್ರಣವಿದೆ. 'ದಿನದ ಕೆಲಸ'ವೆಂಬು ದರಲ್ಲಿ ಬೆಳಗಾದರೂ ನಿದ್ರಿಸುತ್ತಿರುವ ತರಳನನ್ನು ಕವಿಯು ಎಬ್ಬಿಸಿ, 'ಹೊಸ ಬೆಳಗನ್ನು ಸ್ವಾಗತಿಸು' ಎನ್ನುವನು. ಜೀವನದ (ಹಗಲಿನ) ಕಷ್ಟ—ಸುಖಗಳನ್ನು ಅನುಭವಿಸಲು ಮನಸ್ಸು ಗಟ್ಟಿ ಮಾಡಿ ಸಿದ್ಧನಾಗು ಎಂದು ಬೋಧಿಸುವನು. 'ಪ್ರೇಮಪಾಶ'ದಲ್ಲಿ, ಮಾತೃವಾತ್ಸಲ್ಯ, 'ಪೂರ್ವಸ್ಮರಣೆ'ಯಲ್ಲಿ ಎಳೆ ಹರೆಯದ ಸವಿನೆನಪಿನ ಮೆಲುಕಾಟ, 'ಮುಗುಳು' ಎಂಬುದರಲ್ಲಿ ವನಕುಸುಮದೊಂದಿಗೆ ಕವಿಹೃದಯದ ಸಾಮರಸ್ಯ, ಸಮ ನ್ವಯ, 'ಆಕಾಶವಾಣಿ'ಯಲ್ಲಿ ಬದುಕಿನ ಏಳು ಬೀಳುಗಳಲ್ಲಿ ಸಿಕ್ಕಿ, ಸುತ್ತಿ, ಮೋಕ್ಷಕ್ಕೆ ಸಂದವನ ವಿವರಣೆ ಇವೆಯಾದರೆ 'ನಗೆ' ಎಂಬುದರಲ್ಲಿ ಎಳೆ ಹರೆಯದಲ್ಲಿ ಮುಖ ಮಂಟಪದಲ್ಲಿ ನಗೆಯು ಹೇಗೆ ಲಾಸ್ಯವಾಡುತ್ತದೆ, ನಡುಹರೆಯದಲ್ಲಿ ಮೊಗಸಿರಿಯು ಯೌವನದ ಕೋಟೆಯಲ್ಲಿ ಹೇಗೆ ದೊರೆತನವನ್ನು ಮಾಡುತ್ತದೆ, ಇಳಿ ಹರೆಯದಲ್ಲಿ ಹೇಗೆ ಅದರ ಬಣ್ಣಗೆಡುತ್ತದೆ—ಎಂಬುದನ್ನು ಸೊಗಸಾಗಿ ಬಣ್ಣಿಸುತ್ತಾ, ಕೊನೆಯಲ್ಲಿ ಕವಿ ಹೀಗೆನ್ನುವನು—

ಮೊಗಸಿರಿಗೆ ಸಿರಿಯಾಗಿ, ನಗೆಯೊಳೆಳನಗೆಯಾಗಿ
ಬಗೆಗೆ ಬಗೆ ತಾನಾಗಿ ನಿತ್ಯವೆನಿಸಿ,
ಜಗದ ದೇಹದೊಳಗಿರ್ಪಾತ್ಮಂಗೆ ಮೆಚ್ಚದೀ
ಮೊಗದ ಹುಸಿನಗೆಗಳ್ಗೆ ಮೆಚ್ಚಬಹುದೇ ?

—ಆದುದರಿಂದ ಹೊರ ನಗೆಗಿಂತಲೂ ಒಳಬಗೆ ಚೆನ್ನಾಗಿರುವುದೇ ಮುಖ್ಯ.

' ತಂಗಾಳಿ ' ' ಪದ್ಮಿನಿಯ ಸಂದೇಶ,' ' ತಾರೆ ', ' ದೊರೆ ', ' ವಿರಹಿಣೀ ಗೀತ' ಗಳ ಅನಂತರ ಬರುವ ' ಇಂದು ' ಎಂಬ ಕವಿತೆಯ ಕೆಲವು ಪಂಕ್ತಿಗಳು ಮನಸ್ಸನ್ನು ಹಿಡಿದು ನಿಲ್ಲಿಸುತ್ತವೆ. ' ನಿನ್ನ ಹೆಸರು ಹೇಳಿ ಇಂದು ಸುಖಪಡುತ್ತೇನೆ, ನಾಳೆಯದನ್ನು ನಿನಗೆ ಒಪ್ಪಿಸಿದ್ದೇನೆ '—ಎಂದು ದೇವರಿಗೆ ಶರಣಾಗಿದ್ದಾನೆ ಕವಿ:

ಇಂದೆಂಬ ದಿನ ನನಗೆ, ನಾಳೆಯೆಂಬುದು ನಿನಗೆ

* * *

ಕಳೆದ ನಿನ್ನೆಗಳೆಲ್ಲಿ, ಬರುವ ನಾಳೆಗಳೆಲ್ಲಿ

* * *

ಹರಿದ ನಿನ್ನೆಯ ಹುಡುಕಿ ನಿನ್ನ ಕಾಂಬವರುಂಟೆ
ಬರುವ ನಾಳೆಯನರಸಿ ನಿನ್ನನೊಲಿಸುವರುಂಟೆ ?

—ಹೀಗಿದೆ ಕವಿಯ ಅಭಿಪ್ರಾಯ ಸರಣಿ.

' ಕಾಣಿಕೆ 'ಯಲ್ಲಿರುವ ಕವಿತೆಗಳಲ್ಲಿ ' ಮಸಣ 'ವು ಹಿರಿದಾದದ್ದು ; ಹೆಚ್ಚು ಆವೇಗ ಪೂರ್ಣವಾದುದ್ದು ; ಬದುಕಿನ ನಶ್ವರತೆ, ಭಯಾನಕತೆಗಳನ್ನು ಕಣ್ಣಿಗೆ ಕಟ್ಟಿ, ಎದೆಯನ್ನು ಹಿಂಡುವಂಥದ್ದು. ಮಾನವನ ಪುಣ್ಯ–ಪಾಪಗಳೆಲ್ಲವಕ್ಕೂ ಕೊನೆ ' ಮಸಣ 'ದಲ್ಲಿ, ಸಿರಿತನ–ಬಡತನಗಳು ಕೊನೆಮುಟ್ಟುವುದು ' ಮಸಣ 'ದಲ್ಲಿ, ಸುಖ–ದುಃಖಗಳ ಅಂತ್ಯ ವಾಗುವುದು ಮಸಣದಲ್ಲಿ. ಮಸಣ ಎಲ್ಲರಿಗೂ ಒಂದೇ ; ಮಸಣದಲ್ಲಿ ಎಲ್ಲರೂ ಒಂದೇ. ಆಳಿಂದ ಹಿಡಿದು ಅರಸನವರೆಗೆ ಎಲ್ಲರೂ ಸ್ಥಾನಮಾನಗಳ, ಅಥವಾ ವಯೋಮಾನಗಳ ತಾರತಮ್ಯವಿಲ್ಲದೆ ಮಸಣಕ್ಕೆ ನಡೆಯಲೇಬೇಕು ; ಅಲ್ಲಿ ಸುಟ್ಟೋ, ಮಣ್ಣುಗೂಡಿಯೋ ಹೋಗಲೇಬೇಕು.

ಇಲ್ಲಿ ಮಲಗಿದ ಜನರ ಹೆಸರೆತ್ತಿ ಕರೆಯದಿರು
ಸೊಲ್ಲನಾಲಿಸರಿವರು ಬರಿದೆ ಹಂಬಲಿಸದಿರು
ಜೀವನದ ಸಮರದಲಿ ಬಳಲಿ ಬೆಂಡಾದವರು
ತಾವಳಲನಾರಿಸಲು ದೀರ್ಘ ನಿದ್ರೆಯೊಳಿಹರು

ಎಂದು ಆರಂಭವಾಗುವ ಈ ಕವನ ಮೂವತ್ತು ಪದ್ಯಗಳಷ್ಟು ದೀರ್ಘವಾಗಿದೆ. ಏಕೆಂದರೆ ಮಸಣದ ಬಸಿರು ದೊಡ್ಡದು–ಉಂಡಷ್ಟೂ ದಣಿವು, ತಣಿವು ಇಲ್ಲದ್ದು. ಅದಕ್ಕಾಗಿ ಈ ದೀರ್ಘ ವರ್ಣನೆ !

ವಿಷಮತೆಯಿರುವುದು ಬದುಕಿನಲ್ಲಿ ಮಾತ್ರ. ಸಾವಿನಲ್ಲಿ ಸಮತೆಯೊಂದೆ!

ಹೆಣವಾದ ಮೇಲೆ ತನು ತುಲನೆ ಮಾಡುವೆಯೇಕೆ ?
ಹೆಣಕೆ ಹೆಸರೊಂದೆ, ವಿವಿಧತೆಯಿಹುದು ಜೀವನಕೆ.

ಇಂಗ್ಲಿಷಿನಲ್ಲಿ ಹೇಳುವಂತೆ 'good man or a bad man, he is a dead man' ಇದರ ಅರ್ಥವನ್ನು ಎಳೆಎಳೆಯಾಗಿ ಬಿಡಿಸಿ ಹೇಳಿದ್ದಾನೆ ಕವಿ !

ಈ ಕವಿತೆಯಲ್ಲಿ ವಸ್ತುವಿಗೆ ತಕ್ಕ ಭಾಷೆ, ವಸ್ತು ಭಾಷೆಗಳಿಗೆ ತಕ್ಕ ಛಂದಸ್ಸು-ಇವುಗಳ ಮುಪ್ಪುರಿಯನ್ನು ನಾವು ಮನಗಾಣಬಹುದು. ಕವಿತೆಯನ್ನೋದುವಾಗ ಅಲ್ಲಲ್ಲಿ ಥಾಮಸ್ ಗ್ರೇ ಕವಿಯ 'ಎಲಿಜಿ' ಹಾಗೂ ಜೆ. ಶರ್ಲಿ ಕವಿಯ 'ಡೆತ್ ದ ಲೆವೆಲ್ಲರ್' ಗಳ ನೆನಪಾಗಬಹುದು; ಅವುಗಳ ಛಾಯೆ ಇದರ ಮೇಲೆ ಹಾಯ್ದಂತೆ ತೋರಬಹುದು-ಹೀಗಾಗುವುದು ಇಂಗ್ಲಿಷ್ ಕವಿತೆಗಳನ್ನೋದಿದವರಿಗೆ ಮಾತ್ರವಲ್ಲದೆ, ಅನ್ಯರಿಗಲ್ಲ.

'ಮಸಣ'ದ ಅನಂತರ ಬರುವ 'ಹಳೆಯ ನೆನಹು' ಅಳಿದು ಹೋದ ಎಳೆಯ ತಮ್ಮನಿಗೆ ಸಲ್ಲಿಸುವ ಶ್ರದ್ಧಾಂಜಲಿಯಾದರೆ 'ಮರವು' ಎಂಬುದರಲ್ಲಿ ಕವಿಯು 'ಜಗವ ನಾಂ ಮರೆದಪೆನು, ಜಗವೆನ್ನ ಮರೆತಿರಲಿ' ಎಂಬ ಅಲಿಪ್ತ ಭಾವವನ್ನು ಪ್ರಕಟಿಸುತ್ತಾನೆ. ಕೊನೆಯ 'ಪ್ರಾರ್ಥನೆ'ಯೆಂಬುದು, ಮೊದಲಿನ 'ಕಾಣಿಕೆ'ಗೆ ಪೂರಕವಾದ ಕವಿತೆ. ನಾಡತಾಯಿಯಲ್ಲಿ ಕವಿಗಿರುವ ಶ್ರದ್ಧೆ ಅಲ್ಲಿ ವ್ಯಕ್ತವಾದರೆ ಇಲ್ಲಿ ಲೋಕದ ತಂದೆಗೆ ಕವಿ ತನ್ನ ಋಣಭಾರವನ್ನು ಒಪ್ಪಿಸುತ್ತಿದ್ದಾನೆ—

ಎನ್ನೀ ಮನಸ್ಸಾಕ್ಷಿಪೂರ್ವಕವೆ, ಸುರಿಯುವೀ
ಕಣ್ಣೀರ ಮಸಿಯೊಳಂಕಿಸಿ ಕರಣವ
ಇನ್ನೇನೊ, ಧನಿಯೆ, ಬಗೆಯೋಲೆಯೊಳೆ ಬರೆದೀವೆ
ನಿನ್ನೊಳಾಂ ಗೈದ ಸಾಲಕೆ ಲೇಖವ.

ಕವಿ ತನ್ನ ಧನಿಗೆ—ದೇವರಿಗೆ—'ಪ್ರಾಮಿಸ್ಸರಿ ನೋಟ್' ಬರೆದು ಕೊಡುತ್ತೇನೆಂಬುದು ಎಷ್ಟೊಂದು ವಿಲಕ್ಷಣವಾದ ಕಲ್ಪನೆ!

'ಕಾಣಿಕೆ'ಯೆಂಬೀ ಸಂಗ್ರಹವು ಶಂಕರ ಭಟ್ಟರ ವಿಕಾಸಮಾನ ಕಾವ್ಯ ಪ್ರತಿಭೆಗೆ ಎತ್ತಿ ಹಿಡಿದ ಕನ್ನಡಿ ; ಅವರು ಕಾವ್ಯ ರಸಿಕರಿಗೆ ನೀಡಿದ ಸಂಚಕಾರ. ಪ್ರಾಯದ ಎಳ ಮೆಯು ಅಭಿಪ್ರಾಯದಲ್ಲಿ ಅಲ್ಲೊಮ್ಮೆ-ಇಲ್ಲೊಮ್ಮೆ ಕಂಡು ಬಂದರೆ ಅದೊಂದು ದೊಡ್ಡ ದೋಷವಲ್ಲ. ಎಳೆ ಕವಿಯು ದಟ್ಟಡಿಯಿಡುತ್ತಾ, ತೊದಲುಲಿಯುತ್ತಾ ನಡೆಯುವುದನ್ನು ಕಂಡು, ಕಾವ್ಯದೇವಿ ಅವನನ್ನು ಕೈಗೆತ್ತಿ, ಹಣೆಗೊತ್ತಿ ಚಿಟಿಕೆ ಮುರಿದು, ಕರುಣಿಸಿದಳೆಂಬುದರಲ್ಲಿ ಸಂದೇಹವೇ ಇಲ್ಲ: ಏಕೆಂದರೆ, ಮುಂದಿನ 'ಹೊನ್ನಿಯ ಮದುವೆ', 'ಮಾದ್ರಿಯ ಚಿತೆ'ಆ ಅನುಗ್ರಹದ ಫಲವಲ್ಲದೆ ಇನ್ನೇನು ?

ಒಟ್ಟಿನಲ್ಲಿ ಶಂಕರ ಭಟ್ಟರ ಕವಿತ್ವದ ಬೆಳವಣಿಗೆಯ ದೃಷ್ಟಿಯಿಂದಲೂ, ಹೊಸಗನ್ನಡ ಕಾವ್ಯೇತಿಹಾಸದ ದೃಷ್ಟಿಯಿಂದಲೂ 'ಕಾಣಿಕೆ'ಯು ವಿಶಿಷ್ಟವಾದೊಂದು ಸಂಗ್ರಹ, ಮರೆಯಬಾರದ ಪುಸ್ತಕ.

## ೨೩. ಕಾರಂತರ ‘ ಚಿತ್ರಮಯ ದಕ್ಷಿಣ ಕನ್ನಡ ’

ಕನ್ನಡ ಜನ ಏಕೆ ಪುಸ್ತಕ ಓದುವುದಿಲ್ಲ, ಕೊಳ್ಳುವುದಿಲ್ಲ ಎಂಬುದನ್ನು ಡಾ. ಶಿವರಾಮ ಕಾರಂತರು ಇತ್ತೀಚೆ ನಡೆದ ಪುಸ್ತಕಹಬ್ಬವೊಂದರಲ್ಲಿ ವಿವೇಚಿಸುತ್ತಾ, “ ಯಾವ ವಯಸ್ಸಿನಲ್ಲಿ ಅಭಿರುಚಿ ಬೆಳೆಸಬಹುದೋ ಆ ವಯಸ್ಸಿನ ಮಕ್ಕಳಿಗೆ ಬೇಕಾದ ಪುಸ್ತಕ ಇದೆಯೋ ?....ಹತ್ತರಿಂದ ಇಪ್ಪತ್ತು ವಯಸ್ಸಿನೊಳಗೆ ಯಾವೊಂದು ವಿಷಯದ ಮೇಲೂ ಅಭಿರುಚಿಯನ್ನು ಹುಟ್ಟಿಸಲಾರದ ನಮ್ಮ ಶಿಕ್ಷಣ ಕ್ರಮ, ಒದಗಿಸುವ ಪಠ್ಯಪುಸ್ತಕಗಳು ಈ ದುಸ್ಥಿತಿಗೆ ಮುಖ್ಯ ಕಾರಣ....ಪೈಪೋಟಿ ಇಲ್ಲದ, ಗುಣದ ಕಡೆಗೆ ಲಕ್ಷ್ಯಕೊಡದ, ಅಗ್ಗಬೆಲೆಯ ಪಠ್ಯ ಮಾರುತ್ತೇವೆಂಬ ನೆಪದ ಮೂರ್ಖ ರಾಷ್ಟ್ರೀಕರಣ ಮತ್ತು ತಜ್ಜನಿತ ಪುಸ್ತಕ ವ್ಯವಹಾರ ನಿರ್ಮೂಲವಾಗದೆ—ನಮ್ಮೆಲ್ಲ ಕನಸುಗಳೂ ವ್ಯರ್ಥ ” ಎಂಬ ಮಾತನ್ನಾಡಿದರೆಂದು ವರದಿಯಾಗಿದೆ. ಪಠ್ಯ ಪುಸ್ತಕಗಳ ಗುಣ ಲಕ್ಷಣವನ್ನು ಕುರಿತು ‘ ಹಿಂದೂ ’ ಪತ್ರಿಕೆ ಬರೆದ ಸಂಪಾದಕೀಯ ಲೇಖನವೊಂದರಲ್ಲಿ ಹೀಗಿದೆ: “ To correct this situation will call for a high degree of political and academic honesty and competence which a system of monopoly can not certainly be expected to promote unless it is subjected to some form of keen private competition…” ವಿದ್ಯಾಭ್ಯಾಸವು ಆರಂಭವಾಗುವುದೇ ಪುಸ್ತಕಗಳ ಮೂಲಕ. ಎಳೆಪ್ರಾಯದ ಮಕ್ಕಳು ಓದುವ ಪಠ್ಯಪುಸ್ತಕಗಳು ಅವರಲ್ಲಿ ಜ್ಞಾನದಾಹವನ್ನು ಹೆಚ್ಚಿಸುವಂತೆ ಇರಬೇಕಾದದ್ದು ಅತ್ಯವಶ್ಯ. ಪಠ್ಯಗಳ ಮೂಲಕವಾಗಿಯೇ ಜನರಲ್ಲಿ ವಾಚನಾಭಿರುಚಿ ಬೆಳೆಯಬೇಕಾಗಿರುವುದರಿಂದ ಪಠ್ಯ ಪುಸ್ತಕಗಳ ರಚನೆಯಲ್ಲಿ, ಆಯ್ಕೆಯಲ್ಲಿ ಸಂಪಾದಕ—ಶಿಕ್ಷಣ ತಜ್ಞರ ಹೊಣೆಗಾರಿಕೆ ಅತ್ಯಂತ ಮಹತ್ವವುಳ್ಳದ್ದು. ಡಾ. ಕಾರಂತರು ಇದನ್ನೇ ಪ್ರತಿಪಾದಿಸಿದುದು. ‘ ಹಿಂದೂ ’ ಪತ್ರಿಕೆಯೂ ಇಂತಹ ಅಭಿಪ್ರಾಯವನ್ನೇ ಪುಷ್ಟೀಕರಿಸುವಂತಿದೆ.

ನಮ್ಮಲ್ಲಿಂದು ಹೈಸ್ಕೂಲು ಮಟ್ಟದವರೆಗಿನ ಪಠ್ಯ ಪುಸ್ತಕಗಳು ಸರಕಾರದ ಮುಷ್ಟಿಯಲ್ಲೂ ಅಲ್ಲಿಂದ ಮುಂದಿನವು ವಿಶ್ವವಿದ್ಯಾನಿಲಯದ ಕೈಯೊಳಗೂ ಇರುವುದು ಹಲವರ ಅಸಮಾಧಾನ—ಖಂಡನೆಗಳಿಗೆ ಕಾರಣವಾಗಿದೆ. ಪಠ್ಯಗಳ ಆಯ್ಕೆಯಲ್ಲಿ ಸ್ಪರ್ಧೆಗೆ ಅವಕಾಶವೇ ಇಲ್ಲವಾಗಿ ಅಧ್ಯಾಪಕರೂ—ವಿದ್ಯಾರ್ಥಿಗಳೂ ‘ ಪಾಲಿಗೆ ಬಂದದ್ದೇ ಪಂಚಾಮೃತ’ವೆಂದು ತಿಳಿದುಕೊಳ್ಳಬೇಕಾಗಿದೆ. ಸರಕಾರೀ ಪಠ್ಯಪುಸ್ತಕ ಮಂಡಲಿಗಳು ವಿದ್ಯಾರಂಭವು ಅಕ್ಷರ ಮೂಲವಾಗಿರಬೇಕೇ ಶಬ್ದ ಮೂಲವಾಗಿರಬೇಕೇ ಇತ್ಯಾದಿ ಚರ್ಚೆಗೆ ತೊಡಗಿ ಶಿಕ್ಷಕರನ್ನು ತೊಡಕಿಗೆ ಸಿಲುಕಿಸಿ, ಬಡಮಕ್ಕಳ ಮೇಲೆ ಒಂದೊಂದು ವರ್ಷ ಒಂದೊಂದು ಬಗೆಯ ಪ್ರಯೋಗಗಳನ್ನು ನಡೆಯಿಸಿ, ಅಧ್ಯಾಪಕರು ‘ ತಾವು ಕಲಿಸುತ್ತಿರುವುದೇನನ್ನು’, ವಿದ್ಯಾರ್ಥಿಗಳು ‘ ತಾವು ಕಲಿಯುತ್ತಿರುವುದೇನನ್ನು ’ ಎಂಬುದನ್ನೇ ತಿಳಿಯಲಾಗದಂಥ ಒಂದು “ ಗೊಂದಲಪುರ ”ವನ್ನೇ ನಿರ್ಮಿಸಿಬಿಟ್ಟಿವೆ !

ಮಕ್ಕಳ ಮನಸ್ಸನ್ನು ಕತೆಗಳಷ್ಟು ಬೇಗ ಇನ್ನಾವುದೂ ಆಕರ್ಷಿಸುವುದಿಲ್ಲ. ಯಾವುದೇ ವಿಷಯವನ್ನೂ—ವೈಜ್ಞಾನಿಕವಾದುದನ್ನೂ ಕತೆ ಹೇಳುವಂತೆ ಹೇಳಿ, ಸೂಕ್ತ ಚಿತ್ರಗಳೊಂದಿಗೆ ವಿವರಿಸಿದರೆ ಬಾಲಕರು ಅದನ್ನು ಸಂತೋಷದಿಂದ ಕೇಳಿ, ಅಪ್ರಯಾಸ ವಾಗಿ ತಿಳಿದುಕೊಳ್ಳಬಲ್ಲರು. ನಮ್ಮಲ್ಲೀಗ ಹೈಸ್ಕೂಲುವರೆಗಿನ ಪಠ್ಯಗಳೆಲ್ಲವೂ ಸರಕಾರದ ಮುದ್ರೆಗಳನ್ನು ತಳೆದವುಗಳೇ ಆಗಿದ್ದು, ಸಂಪಾದಕ ಸಮಿತಿಗೆ ತನ್ನ ಧ್ಯೇಯ, ಧೋರಣೆ ಗಳಿಗೆ ತಕ್ಕಂತೆ ಪಾಠಗಳಾದರೆ ಸರಿ ಎಂಬುದೇ ಮುಖ್ಯವಾಗಿ, ಚಿಕ್ಕಮಕ್ಕಳಿಗೆ ಯಾವುದರಲ್ಲಿ ಆಸಕ್ತಿ, ಹೇಗೆ ಹೇಳಿದರೆ ಆಸಕ್ತಿ ಎಂಬ ಮುಖ್ಯ ವಿಷಯವು ಗೌಣವೆನಿಸಿದಂತಿದೆ. ಹಿಂದೆ ಹೀಗಿರಲಿಲ್ಲ. ವಿಷಯ ಸಂಗ್ರಹ, ನಿರೂಪಣೆ, ಚಿತ್ರಗಳ ಸೇರ್ಪಡೆ, ಪುಸ್ತಕಗಳ ಮುದ್ರಣ ಹೀಗೆ ಎಲ್ಲ ದೃಷ್ಟಿಯಿಂದಲೂ ಅವನ್ನು ಕೊಳ್ಳಬೇಕು, ಓದಬೇಕು ಎಂಬಂತಿದ್ದುವು. ಕಾರಣ ಆಯಾ ಪುಸ್ತಕ ಸಂಪಾದಕರಿಗಿದ್ದ ಮಕ್ಕಳ ಮನಸ್ಸಿನ ಪೂರ್ಣ ಜ್ಞಾನ ಒಂದಾ ದರೆ, ಒಂದೇ ವಿಷಯವನ್ನು ಕುರಿತು ಬೇರೆ ಬೇರೆ ಕಡೆ ಹತ್ತಾರು ಪುಸ್ತಕಗಳು ಪ್ರಕಟ ವಾಗುತ್ತಿದ್ದು ತಮ್ಮದು ಅತ್ಯುತ್ಕೃಷ್ಟವಾಗಿರಬೇಕೆಂಬ ಸ್ಪರ್ಧಾಬುದ್ಧಿ ಮತ್ತೊಂದು. ಈಗ ಹಾಗಿಲ್ಲ. ರಾಷ್ಟ್ರೀಯಕರಣದ ಹೆಗ್ಗಾಲಿಯ ಉರುಳಿಗೆ ಗುಣ ಪಕ್ಷಪಾತ (quality) ವಲ್ಲ, ಸಮಾನತೆ (uniformity) ಯೊಂದೆ ಗುಂಬಗೋಲಾಗಿಬಿಟ್ಟಿದೆ!

ಡಾ. ಕಾರಂತರು ಇಂದಿನ ಪಠ್ಯ ಪುಸ್ತಕಗಳನ್ನೂ, ಅವುಗಳ ಸಂಪಾದಕರ ನೀತಿ ನಿಯಮಗಳನ್ನೂ ಖಂಡಿಸಿದ್ದು ಅವರ ನೋವಿನ, ನಿರಾಶೆಯ ಸಂಕೇತ. ಮಕ್ಕಳ ಮನೋ ಧರ್ಮಕ್ಕೆ ಸಗ್ಗುವ, ವಯೋಮಾನಕ್ಕೆ ಒಗ್ಗುವ ಪಠ್ಯಗಳನ್ನು ಸಂಪಾದಿಸಿದವರು ಕಾರಂತರು. ಮಕ್ಕಳಿಗೆ ವಿಷಯ ಬೋಧನೆ ಮಾಡಿ, ಅವರ ರುಚಿಯನ್ನು ತಿದ್ದಿ, ಬೆಳೆಸಿ, 'ನಾವು ಇನ್ನಷ್ಟು ತಿಳಿಯಬೇಕು, ಇನ್ನಷ್ಟು ನೋಡಬೇಕೆಂ'ಬ ಕುತೂಹಲವನ್ನು ಅವರಲ್ಲಿ ಕೆರಳಿಸ ಬೇಕೆಂಬ ದೃಷ್ಟಿಯಿಂದಲೇ ಕಾರಂತರು ಮೂವತ್ತೆಂಟು ವರ್ಷಗಳ ಹಿಂದೆ, 1934 ರಲ್ಲಿ 'ಚಿತ್ರಮಯ ದಕ್ಷಿಣ ಕನ್ನಡ'ವೆಂಬ ಬಾಲಕರ ಭೂಗೋಳವನ್ನು ಪ್ರಕಟಿಸಿದ್ದು. ಸರಕಾರೀ ಶಿಕ್ಷಣ ತಜ್ಞರಾಗಲೀ, ಪಠ್ಯಪುಸ್ತಕ ಸಂಪಾದಕರಾಗಲೀ ಕಣ್ಣರಳಿಸಿ ನೋಡಬೇಕಾದ, ಕಣ್ಣು ಮುಂದಿರಿಸಿಕೊಳ್ಳಬೇಕಾದ ಒಂದು ಮಾದರಿ ಪಠ್ಯ ಅದೆಂದರೆ ತಪ್ಪಾಗಲಾರದು.

ಪುಸ್ತಕದ ಮುನ್ನುಡಿಯಲ್ಲಿ ಹೀಗಿದೆ "....ಯುರೋಪು, ಅಮೇರಿಕಾ ಮೊದಲಾದ ಮುಂದರಿದ ದೇಶಗಳಲ್ಲಿ ಪಠ್ಯ ಪುಸ್ತಕಗಳೆಂದರೆ ತುಂಬ ರಸವತ್ತಾಗಿರುವುವು. ಅದರಲ್ಲೂ ಭೂಗೋಲವೆಂದರೆ—ಕಾದಂಬರಿಯನ್ನು ಓದಿದಂತೆ. ಆದರೆ ನಮ್ಮ ದೇಶದಲ್ಲಿ ಭೂಗೋಲ ವೆಂದರೆ ಹೆಸರು, ಸಂಖ್ಯೆಗಳಿಂದ ತುಂಬಿದ ಒಂದು ಸಹಸ್ರನಾಮಾವಳಿ. ಚಿಕ್ಕ ಮಕ್ಕಳಿಗೆ ಅದರಲ್ಲಿ ಮಮತೆಯುಂಟಾಗುವುದೆಂತು ?" ಮಕ್ಕಳಿಗೆ ಪುಸ್ತಕವು ರುಚಿಸಬೇಕಾದರೆ— ಅದು ಭೂಗೋಲವೇ ಆಗಿರಲಿ, ಖಗೋಲವೇ ಇರಲಿ—ಅವರ, "ಮನಸ್ಸನ್ನು ಸೆಳೆಯು ವಂತೆ ಕಥಾನಕವಾಗಿ ಬರವಣಿಗೆಯಿರಬೇಕೆಂಬುದು ನನ್ನ ಆಸೆ....ಚಿತ್ರಗಳೆಂದರೆ ಮಕ್ಕಳಿಗೆ ತುಂಬ ಆಸೆ....ಉಪಾಧ್ಯಾಯರು ಬರೇ ಅವನ್ನೇ ಬಣ್ಣಿಸಿದರೂ ಭೂಗೋಲ ಕಲಿಸಿದಂತಾಗು

ವುದು."—' ಚಿತ್ರಮಯ ದಕ್ಷಿಣ ಕನ್ನಡ 'ದಲ್ಲಿ ಕಾರಂತರು ತಾವು ಆಡಿದ್ದನ್ನು ಮಾಡಿ ತೋರಿಸಿದ್ದಾರೆ.

ಪುಸ್ತಕದ ಮೊದಲ ಮೂವತ್ತಾರು ಪುಟಗಳಲ್ಲಿ ದಕ್ಷಿಣ ಕನ್ನಡದ ವಿವರಣೆ ಯಿದೆ. ಈ ವಿವರಣೆ ತೀರ ಸರಳವಾದದ್ದು ; ಎಳೆಯರ ಮಿತವಾದ ಶಬ್ದಸಂಗ್ರಹ (Vocabulary)ಕ್ಕೆ ಅಳವಡುವಂತೆ ಮಾಡಿದ್ದು. ಇಷ್ಟೇ ಅಲ್ಲ, ವಿವರಣೆಯು 'ಕಥಾನಕ'ವಾದದ್ದು : ಕಿಟ್ಟು ಎಂಬ ಬಾಲಕ ರಾಮು ಮತ್ತು ಪುಟ್ಟು ಎಂಬಿಬ್ಬರು ಗೆಳೆಯರೊಂದಿಗೆ ದಕ್ಷಿಣ ಕನ್ನಡದ ಯಾತ್ರೆ ಮಾಡಿದನೆಂಬಂತೆ ಕಲ್ಪಿಸಿ, ಜಿಲ್ಲೆಯ ಕತೆ ಹೇಳಿದ್ದಾರೆ. ದಕ್ಷಿಣ ಕನ್ನಡದ ಭೌಗೋಲಿಕ ಸ್ಥಿತಿ—ಗಾಳಿ, ಬೆಳಕು, ನದಿ, ಬೆಟ್ಟ, ಗದ್ದೆ, ತೋಟ, ಮೃಗ, ಪಕ್ಷಿ, ಜೀವನಕ್ರಮ—ಕೃಷಿ, ವ್ಯಾಪಾರ, ಉದ್ಯಮ, ವಿವಿಧ ವೃತ್ತಿಗಳು ; ತಾಲೂಕುಗಳು ; ಜನರ ನಡೆನುಡಿಗಳು ಇವೆಲ್ಲವನ್ನೂ ಹದಿನಾಲ್ಕು ಪುಟ್ಟ ಪಾಠಗಳಲ್ಲಿ ತಿಳಿಯಾಗಿ ತಿಳಿಯಹೇಳಿದ್ದಾರೆ. ಈ ಪಾಠಗಳಿಗೆ ಕಾರಂತರು ಕೊಟ್ಟಿರುವ ಶೀರ್ಷಿಕೆಗಳೂ ಆಕರ್ಷಕವಾಗಿವೆ : ' ಬೆಟ್ಟದಿಂದ ಬಯಲಿಗೆ '; ' ಕಾಡಿನ ಒಡೆಯರು ' ' ಹಳ್ಳಕ್ಕೆ ಅದರ ಹಾದಿ, ಹಳ್ಳಿಗೆ ನಮ್ಮ ಹಾದಿ ', ' ನೇಗಿಲೂ ಬೇಕು, ತ್ರಾಸೂ ಬೇಕೂ ' ಇತ್ಯಾದಿ. ಇಂಥ ತಲೆಬರಹಗಳಿಗೇ ಮಕ್ಕಳು ಮೋಹಿತರಾಗಿಬಿಡುತ್ತಾರೆ. ಈ ಮೋಹವು ಅವರನ್ನು ಪಾಠಪರವಶರಾಗುವಂತೆ ಮಾಡುತ್ತದೆ. ಆದುದರಿಂದ ಅಧ್ಯಾಪಕರು, ಬೆತ್ತ ಹಿಡಿದು, ಕಿವಿ ಹಿಂಡಿ ಒಂಟಿಕಾಲಲ್ಲಿ ನಿಲ್ಲಿಸಿ ಮಕ್ಕಳಿಗೆ ಪಾಠ ಮಾಡುವ ಪ್ರಸಂಗವೇ ಇರುವುದಿಲ್ಲ ; ಮಕ್ಕಳು ಶಿಕ್ಷೆ ಇಲ್ಲದೆಯೇ ಶಿಕ್ಷಿತರಾಗುತ್ತಾರೆ.

ಇನ್ನು ಕಾರಂತರ ಭಾಷಾ ಶೈಲಿಗಳೋ ? ನೇರವಾದದ್ದು, ತಿಳಿಯಾದದ್ದು ಅಡಕವಾದದ್ದು; ದೀರ್ಘ ವಾಕ್ಯಗಳಿಲ್ಲ, ಕ್ಲಿಷ್ಟ ಶಬ್ದಗಳಿಲ್ಲ. ಭೂಗೋಲದ ' ಶಾಸ್ತ್ರೀಯ ' ಭಾಷೆಯೂ ಒಮ್ಮೊಮ್ಮೆ ಕಾವ್ಯ ಭಾಷೆಯಂತೆ ಚಿತ್ತಾಕರ್ಷವಾಗುವುದಿದೆ—ಒಂದು ಉದಾಹರಣೆ : " ಸೂರ್ಯನ ಚೆಂಡು ಮೆಲ್ಲಗೆ ಕಡಲಲ್ಲಿ ಮುಳುಗುತ್ತ ಬಂತು. ಅರ್ಧವಾಗಿ, ಹೋಳಾಗಿ, ಕಿರಿದಾಗಿ, ಕೊನೆಗೊಂದು ಕಿಡಿಯಾಗಿ ಸೂರ್ಯನು ಕಣ್ಮರೆಯಾದನು. ಎಂತಹ ನೋಟ; ಎಂತಹ ಶಾಂತಿ !"–ಸರ್ವ ಧರ್ಮ ಸಮನ್ವಯದಂಥಹ ಗಹನ ವಿಚಾರವನ್ನು ಕಾರಂತರು ಹೇಳುವ ರೀತಿ—"ಕಿಟ್ಟುವಿಗೆ–'ನಮಗೆ ದೇವಾಲಯ, ದೇವರು ಇದ್ದ ಹಾಗೆ ಅಲ್ಬರ್ಟ್, ಅಮ್ಮದೆ, ಪದ್ಮರಾಜ, ಜೋಮರಿಗೆ ಇಲ್ಲವೆ ?' ಎಂದು ತೋರುವುದು. ಒಂದು ದಿನ ಅವರನ್ನು ಕೇಳಿದನು. ಆಲ್ಬರ್ಟನ ದೇವರು ' ಯೇಸು 'ವಂತೆ ; ಅಮ್ಮದೆಗೆ ' ಅಲ್ಲಾ 'ನಂತೆ ; ಜೋಮುನಿಗೆ ' ಪಂಜುರ್ಲಿ 'ಯಂತೆ ; ಪದ್ಮರಾಜನು ' ತೀರ್ಥಂಕರ 'ರೆನ್ನುವವರನ್ನು ಪೂಜಿಸುವವನಂತೆ ! ಕಿಟ್ಟುವು ಅವರ ದೇವರನ್ನು ಕಾಣುವ ಆಸೆಯಿಂದ ಅವರ ದೇವಾಲಯಗಳಿಗೂ ಹೋಗಿದ್ದನು" ಮಕ್ಕಳಿಗೆ ಆಟ–ಪಾಠಗಳು ಒಂದಕ್ಕೊಂದು ಪೂರಕ. " ಈ ತಾಳ ಮದ್ದಳೆಯಾದರೆ........ಕಿಟ್ಟು, ಪುಟ್ಟು, ರಾಮು ಸೇರಿ–ಎಷ್ಟೋಸಾರಿ ಅಲ್ಬರ್ಟ್ ಅಮ್ಮದೆಯರೂ ಬರುವುದುಂಟು—ಹಿಂದಿನ ರಾತ್ರಿ ಕೇಳಿದ ಪ್ರಸಂಗವನ್ನು ತಿರುಗಿ ತೆಗೆಯುವರು. ಚಿಮಿಣಿ ಡಬ್ಬಿಯೇ ಅವರ ಚಂಡೆ ; ಬಾಯಿಯೇ

ಮದ್ದಳೆ; ಸ್ಲೇಟೇ ಜಾಗಟೆ. ಆ ಅರ್ಥವೇನು ? ಆ ಆಟವೇನು ?...." ಇಂತಹ ವಾಕ್ಯಗಳನ್ನು ಓದುವಾಗ ಮಕ್ಕಳ ಮನಸ್ಸು ಗೆಲುವಾಗುವುದಲ್ಲವೆ ?

ಮಕ್ಕಳಿಗೆ ನೀತಿಯನ್ನು—ಅದು ಬಾಧೆಯಾಗದೆ--ಬೋಧೆಯಾಗುವಂತೆ ಹೇಳಬಲ್ಲ ಜಾಣ್ಮೆ ಕಾರಂತರದ್ದು. ಜಿಲ್ಲೆಯ ಶಿಲ್ಪ ವೈಭವವನ್ನು ವರ್ಣಿಸುತ್ತಾ, "ನಮ್ಮ ಹಿರಿಯರ ಬಿರುದನ್ನು ಸಾರುವ ಕೋಟೆ, ಗುಡಿ, ಗೋಪುರಗಳಿಗೆ ಮಿತಿಯಿಲ್ಲ. ಅವನ್ನು ನಾವು ಆಗಾಗ ಕಾಣುತ್ತಿರಬೇಕು. ಅವುಗಳ ವಿಷಯ ತಿಳಿದುಕೊಳ್ಳುತ್ತಿರಬೇಕು. ನಮ್ಮ ಕಾಲವಾದ ಮೇಲೆ ನಮ್ಮ ಹೆಸರು ಮರವೆಯಾಗುವುದು ನಮಗೆ ಸಂತೋಷವೇ ? ನಮ್ಮ ಹೆಸರಿನ ನೆನಪು ಉಳಿಯಲು ನಾವೇನು ಮಾಡಬೇಕು ? ನಮ್ಮ ಹಿರಿಯರಂತೆ ನಾವೂ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬೇಡವೇ ?" ಎಂದು ಹುರಿದುಂಬಿಸುತ್ತಾರೆ. ಹಾಗೆಯೇ ಜಿಲ್ಲೆಯ ಭಾಷಾ ವೈವಿಧ್ಯದ ಬಗ್ಗೆ ಬರೆಯುತ್ತಾ, "ಮುಖ್ಯ ಪಟ್ಟಣವಾದ ಮಂಗಳೂರಿನ ಬೀದಿಯಲ್ಲಿ ತಿರುಗುವಾಗ ಕನ್ನಡ, ತುಳು, ಕೊಂಕಣಿ, ಮಲೆಯಾಳ, ಹಿಂದುಸ್ಥಾನಿ—ಇಷ್ಟು ಭಾಷೆಗಳೂ ಕೇಳಿಸುವುವು. ಮಾತೆಷ್ಟಾದರೇನು ? ಮನಸ್ಸು ಒಂದಾದರಾಯಿತು" ಎಂದು ಭಾವೈಕ್ಯದ ದಾರಿಯನ್ನು ತೋರುತ್ತಾರೆ.

'ಸಾವಿರ ಶಬ್ದಗಳಿಗಿಂತ ಒಂದು ಚಿತ್ರ ಮೇಲು' ಎಂದು ಹೇಳುವುದಿದೆ. ಈ ಪುಸ್ತಕದಲ್ಲಿ ವಿವರಣೆ 30 ಪುಟಗಳಲ್ಲಾದರೆ ಮತ್ತಿನ 24 ಪುಟಗಳಲ್ಲಿ 96 ಚಿತ್ರಗಳಿವೆ. ಮಕ್ಕಳು ಕಿವಿಯಿಂದ ಕೇಳಿದ್ದನ್ನೆಲ್ಲ ಅವರ ಕಣ್ಣಿಗೆ ಕಟ್ಟಿಸುತ್ತವೆ ಈ ಚಿತ್ರಗಳು. ಈ ಚಿತ್ರ ಸಂಗ್ರಹವು ಕಾರಂತರು ಮುದ್ರಣದಲ್ಲಿ ಮಾಡಿದ 'ನವೀನ ಸಾಹಸ'ವೇ ಸರಿ. ಅದಕ್ಕಾಗಿ ನಲ್ವತ್ತು ವರ್ಷದಷ್ಟು ಹಿಂದೆ ಸಾವಿರಾರು ರೂಪಾಯಿ ವೆಚ್ಚ ಮಾಡಿದರು. ಅವರು ಚಿತ್ರಗಳನ್ನು ಜರ್ಮನಿಯಲ್ಲಿ "ಫೋಟೋಗ್ರೆವ್ಯೂರ್" ಕ್ರಮದಲ್ಲಿ ಮುದ್ರಿಸಿ ಬಳಸಿದ್ದಾರೆ. ಒಂದು ಪಠ್ಯ ಪುಸ್ತಕದ ಬಗ್ಗೆ ಇಷ್ಟೊಂದು ಕಾಳಜಿಯನ್ನು ನಾವು ಇಂದು ಕಾಣುವುದಿದೆಯೇ ? ಪಂಜೆಯವರ 'ನಾಗರಹಾವ'ನ್ನು ಪಠ್ಯದಲ್ಲಿ ಸೇರಿಸುವಾಗ, "ಹಳದಿಯ ಹೆಡೆಯನು ಬಿಚ್ಚೋ ನಾಗಾ" ಎಂದು ಹಾಡಿನಲ್ಲಿದ್ದರೆ ಪುಸ್ತಕದಲ್ಲಿ ಹಾವಿನ ಹೆಡೆಗೆ ಹಸುರು ಬಣ್ಣವನ್ನು ಬಳಿಯುವುದನ್ನೂ ನಾವಿಂದು ಕಾಣಬಹುದು !—ಅದಿರಲಿ, ಕಾರಂತರ ಪುಸ್ತಕದಲ್ಲಿರುವ ಚಿತ್ರಗಳು ಈಗಲೂ ಅಷ್ಟೊಂದು ಸ್ಪಷ್ಟವಾಗಿ ಸುಂದರವಾಗಿ ಕಂಗೊಳಿಸುತ್ತಿವೆ. ಈ ಜಿಲ್ಲೆಯಲ್ಲೇ ಹುಟ್ಟಿ ಬಳೆದವರು, 'ಇಲ್ಲಿ ಹುಟ್ಟಿದ್ದು ಸಾರ್ಥಕವಾಯಿತೆ'ಂದೆನ್ನುವಂತಹ, ಜಿಲ್ಲೆಯ ಹೊರಗಿನವರು 'ಸಾಯುವ ಮೊದಲೊಮ್ಮೆ ದಕ್ಷಿಣ ಕನ್ನಡ ನೋಡಲೇಬೇಕು' ಎನ್ನಿಸುವಂತಹ ಚಿತ್ರ ಸಂಗ್ರಹ ಈ ಪುಸ್ತಕದ್ದು.

ಕಾರಂತರು 'ಚಿತ್ರಮಯ ದಕ್ಷಿಣ ಕನ್ನಡ'ವನ್ನು ಇಂಗ್ಲಿಷಿನಲ್ಲೂ ಪ್ರಕಟಿಸಿದ್ದಾರೆ. ಮುಂದೆ ಅದೇ ದಾರಿಯಲ್ಲಿ ನಡೆದು 'ಚಿತ್ರಮಯ ದಕ್ಷಿಣ ಹಿಂದೂಸ್ಥಾನ'ವನ್ನೂ ಮುದ್ರಿಸಿದರು. ಕಾಲಾಂತರದಲ್ಲಿ 'ಬಾಲ ಪ್ರಪಂಚ'ವನ್ನು ಸೃಷ್ಟಿಸುವ ವಿಶ್ವಾಮಿತ್ರನಾದರು ; 'ಸಿರಿಗನ್ನಡ ಪಾಠಮಾಲೆ'ಯ ಮಾಲೆಗಾರನಾದರು. ಅವೆಲ್ಲಕ್ಕೂ ಮೂಲ ಪ್ರೇರಣೆ 'ಚಿತ್ರಮಯ ದಕ್ಷಿಣ ಕನ್ನಡ'ವೇ ಆಗಿರಬೇಕೆಂಬುದು ನನ್ನ ಊಹೆ. ಅದೀಗ ಹಲವರ ಕಣ್ಣಿಗೆ ಮರೆಯಾಗಿರುವ ಪುಸ್ತಕ ; ಆದರೆ ಖಂಡಿತವಾಗಿಯೂ ಮರೆಯಲಾರದ ಪುಸ್ತಕ.

# ೨೪. ಆಲೂರರ ' ಗತವೈಭವ '

ಭರ್ತೃಹರಿ ಮಹಾಕವಿಯ 'ವೈರಾಗ್ಯ ಶತಕ'ದ ಈಯೊಂದು ಶ್ಲೋಕವು ಅತ್ಯಂತ ಹೃದಯಸ್ಪರ್ಶಿಯಾದದ್ದು :

ಸಾ ರಮ್ಯಾ ನಗರೀ ಮಹಾನ್ ಸ
 ನೃಪತಿಃ ಸಾಮಂತಚಕ್ರಂ ಚ ತತ್
ಪಾರ್ಶ್ವೇ ತಸ್ಯ ಚ ಸಾ ವಿದಗ್ಧಪರಿಷತ್
 ತಾಶ್ಚಂದ್ರಬಿಂಬಾನನಾಃ ।
ಉದ್ವೃತ್ತಃ ಸ ಚ ರಾಜಪುತ್ರನಿವಹಸ್ತೇ
 ವಂದಿನಸ್ತಾಃ ಕಥಾಃ
ಸರ್ವಂ ಯಸ್ಯ ವಶಾದಗಾತ್ ಸ್ಮೃತಿ
 ಪಥಂ ಕಾಲಾಯ ತಸ್ಮೈ ನಮಃ

'ರಮ್ಯವಾದ ನಗರವು ಹಾಳಾಗಿ, ರಾಜ ಮಹಾರಾಜರೂ ಸಾಮಂತರೂ ಉರುಳಿ, ಚಂದ್ರ ಬಿಂಬಾನನೆಯರೂ ಮದೋನ್ಮತ್ತರಾಜಕುಮಾರರೂ ಅಳಿದು, ಪ್ರಕಾಂಡ ಪಂಡಿತರೂ ವಂಧಿಮಾಗಧರೂ ಸತ್ತು ನೆನಪಿನ ಬೀದಿಯಲ್ಲಿ ಸೇರಿ ಹೋದರಲ್ಲ– ಆಹಾ, ಕಾಲದ ಮಹಿಮೆಯೋ !' ಹೀಗೆಂದು ಉದ್ಗರಿಸಿದ್ದಾನೆ ಭರ್ತೃಹರಿ. ಹೌದು, ಕಾಲಪ್ರವಾಹದ ದಡದಲ್ಲಿ ನಿಂತು ಯಾರಾದರೂ ನೋಡಬಲ್ಲವರಾದರೆ ತೇಲುವ, ಮುಳುಗುವ, ಕೊಚ್ಚಿ ಹೋಗುವ ಬದುಕಿನ ನೂರಾರು ದುರಂತ ಚಿತ್ರಗಳು ಸಾಲುಗಟ್ಟಿ ಗೋಚರಿಸಬಹ ದಲ್ಲವೇ ?– ಇಂತಹ ಅನಿತ್ಯತೆ, ದುರಂತತೆ ಪ್ರಾಣಿ ಮಾತ್ರಕ್ಕೆ ಮೀಸಲಿಲ್ಲ ; ಜಂಗಮ ದಂತೆ ಸ್ಥಾವರವೂ, ಚೇತನದಂತೆ ಜಡವಾದದ್ದೂ ಕಾಲರಥದ ಹೆಗ್ಗಾಲಿಯ ಅಡಿಯಲ್ಲಿ ಸಿಲುಕಿ ನುರಿಯಾಗಿದೆ, ಮರೆಯಾಗಿದೆ. ಸುಮಾರು ಎರಡು ಸಾವಿರ ವರ್ಷಗಳ ಸುದೀರ್ಘ ಇತಿಹಾಸವುಳ್ಳ 'ಅಖಂಡ ಸೌಭಾಗ್ಯದ ಅವಿಶ್ರಾಂತ ಸಾಹಸದ ನೆಲೆ ಬೀಡಾ'ಗಿದ್ದ ಕರ್ನಾಟಕರಾಜ್ಯವು ಕಾಲವಶವಾಗಿ ಶ್ಮಶಾನ ಸದೃಶವೆನಿಸಿತು ಎನ್ನುವಾಗ ಕಾಲದ ಪ್ರಚಂಡತೆಗೆ ಬೆಗಡುಗೊಂಡು ' ತಸ್ಮೈ ನಮಃ ' ಎಂದು ತಲೆಬಾಗಲೇಬೇಕಲ್ಲವೇ ?

ದಿ| ಆಲೂರ ವೆಂಕಟರಾಯರ ' ಕರ್ನಾಟಕ ಗತವೈಭವ 'ವು ಹೆಸರೇ ಸೂಚಿಸು ವಂತೆ, ಕನ್ನಡ ದೇಶದಲ್ಲಿ ಒಮ್ಮೆ ಉಜ್ವಲವಾಗಿ ಹೊಳೆದು, ಈಗ ಮಸುಕಾಗಿರುವಂತೆ ತೋರುವ ಭಾಗ್ಯತಾರೆಯನ್ನು ಕಂಡುಹಿಡಿದು ಜನಕ್ಕೆ ತೋರಿಸುವ ಪ್ರಯತ್ನ. ಅಷ್ಟೇ ಅಲ್ಲ, ಕನ್ನಡಿಗರ ಪರಂಪರೆ ಎಷ್ಟು ದೊಡ್ಡದು, ಸಂಸ್ಕೃತಿ ಎಷ್ಟು ಹುಲುಸಾದದ್ದು, ಇತಿಹಾಸ ಎಷ್ಟು ಭವ್ಯವಾದದ್ದು ಎಂಬುದನ್ನು ತಿಳಿಸುವುದೂ ಅವರ ಉದ್ದೇಶ. ಇಷ್ಟು ದೊಡ್ಡ ಪರಂಪರೆ, ಹಿರಿಯ ಸಂಸ್ಕೃತಿ, ಭವ್ಯ ಇತಿಹಾಸಗಳಿರುವ ಕರ್ನಾಟಕ ದೇಶಕ್ಕೂ– ಜನಕ್ಕೂ ಈಗಿನ ಹೀನಾವಸ್ಥೆ ಹೇಗಾಯಿತು ?–ಇದು ದೈವಾಯತ್ತವೇ ? ಸ್ವಾರ್ಜಿತ

ಕರ್ಮಫಲವೇ ?–ಇಂತಹ ಪ್ರಶ್ನೆಗಳಿಗೂ ಉತ್ತರವಿದೆ 'ಗತವೈಭವ'ದಲ್ಲಿ.

'ಕರ್ನಾಟಕ ಗತ ವೈಭವ'ವು ಪ್ರಕಟವಾಗುವ ಕಾಲಕ್ಕೆ ಎಂದರೆ ಸುಮಾರು ಅರವತ್ತು–ಎಪ್ಪತ್ತು ವರ್ಷಗಳ ಹಿಂದೆ ಕನ್ನಡದ ಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ಸತ್ವ, ಸ್ವತ್ವಗಳ ಪ್ರಜ್ಞೆಯಾಗಲಿ ಭಾರತವರ್ಷದಲ್ಲಿ ಕರ್ನಾಟಕದ ಸ್ಥಾನಮಾನಗಳ ಪರಿಜ್ಞಾನವಾಗಲಿ ಇಲ್ಲದ ಕನ್ನಡ ಜನ ಈಗಿನಂತೆಯೇ ಹಿಂದೆ ಇದ್ದವರು ಮುಂದೆಯೂ ಇರಬೇಕಾದವರು ಎಂಬ ತಂದ್ರಾವಸ್ಥೆಯಲ್ಲಿದ್ದ ಕಾಲ ಅದಾಗಿತ್ತು. ಸೋದರ ದೇಶಗಳಾದ ತಮಿಳು ಆಂಧ್ರಗಳಲ್ಲಾಗಲಿ ನೆರೆಯ ಮಹಾರಾಷ್ಟ್ರ, ಅದರಾಚೆಗೆ ಉತ್ತರದ ಬಂಗಾಳದಲ್ಲಾಗಲಿ ಆದಾಗಲೇ ಎಂತಹ ಜನಜಾಗೃತಿಯುಂಟಾಗಿತ್ತು. ಎಚ್ಚೆತ್ತ ಜನರಲ್ಲಿ ದೇಶ–ಭಾಷಾ ಪ್ರೇಮ ಹೇಗೆ ತುಂಬಿ ತುಳುಕುತ್ತಿತ್ತು ಎಂಬುದನ್ನು ಮನಗಂಡ ಕನ್ನಡಿಗ 'ಛೀ, ನನ್ನದೂ ಒಂದು ನಾಡೇ, ಒಂದು ಬದುಕೇ?' ಎಂದು ನಾಚಿ ತಲೆ ತಗ್ಗಿಸುವಂತಿತ್ತು. ಹೀಗೆ ಕನ್ನಡಿಗರ ಜಾಡ್ಯವನ್ನು, ಕ್ಲೈಬ್ಯವನ್ನು, ಆತ್ಮವಿಸ್ಮೃತಿಯನ್ನು ಕಂಡು ಕನಲಿ ಕೆಂಡವಾದಾಗ ಹಾರಿ ಬಂದ ಕಿಡಿ 'ಕರ್ನಾಟಕ ಗತವೈಭವ' !

'ಪ್ರಬಂಧ ಪರಿಚಯ'ದಲ್ಲಿ ಆಲೂರರು ತಮ್ಮ ಕಾಲಸ್ಥಿತಿ–ಮನಸ್ಥಿತಿಗಳನ್ನು ವಿವರಿಸುತ್ತಾ, ಗ್ರಂಥ ರಚನೆಗೆ ಪ್ರತ್ಯಕ್ಷ ಪ್ರೇರಣೆಯಾದ ಒಂದು ಘಟನೆಯನ್ನು ಉಲ್ಲೇಖಿಸಿದ್ದಾರೆ: ಅದು 1905ರ ಮೇ ತಿಂಗಳಲ್ಲಿ ಆನೆಗೊಂದಿಯ ಆಕಸ್ಮಿಕ ದರ್ಶನ. ಸ್ವರ್ಣ ಭೂಮಿ ವಿಜಯನಗರದ ಶೇಷಾಂಶದಂತಿದ್ದ ಆನೆಗೊಂದಿಯನ್ನು ಅವರ ಹೊರಗಣ್ಣು ಕಂಡಾಗ, ಒಳಗಣ್ಣಿನ ಮುಂದೆ ಹೊಸ ಲೋಕವೊಂದು ತೆರೆಯಿತು. ಆ ಲೋಕವೇ ಕಾಲ ಪಟಲದ ಆಚೆಗೆ, ತಿಮಿರ ಗರ್ಭದಲ್ಲಿ ಮರೆಯಾಗಿದ್ದ ಭವ್ಯ ಕರ್ನಾಟಕ! ಸುಮಾರು ಹತ್ತು ವರ್ಷಗಳ ಅನಂತರ, ಚಿಂತನ-ಮಂಥನಗಳಿಂದ ಆ ದೃಶ್ಯವು ಇನ್ನಷ್ಟು ರಮ್ಯೋಜ್ವಲವೆನಿಸಿದಾಗ ಲೋಕದ ಮುಂದೆ ಅದನ್ನು ಅನಾವರಣಗೊಳಿಸಿದರು–ಅದೇ 'ಗತವೈಭವ.' ವೆಂಕಟರಾಯರು ತಮ್ಮ 'ಗತ ವೈಭವ'ವನ್ನು ಗೀತಾತತ್ವವನ್ನು ಆಧರಿಸಿ ರಚಿಸಿದ್ದಾಗಿ ಹೇಳಿದ್ದಾರೆ. ಗ್ರಂಥ ಪಠನದಿಂದಲೂ ಅದು ಸ್ಪಷ್ಟವಾಗುತ್ತದೆ. 'ಗತ ವೈಭವ'ದ ಕೆಲವು ಪ್ರಕರಣಗಳು ಗೀತೆಯ ನಾಲ್ಕಾರು ಶ್ಲೋಕಗಳ ವಿಸ್ತೃತ ವಿವರಣೆಯಂತಿವೆ. ಕನ್ನಡಿಗರ ಪರಿಸ್ಥಿತಿಯನ್ನು ಅರ್ಜುನನ ಮನಸ್ಥಿತಿಗೆ ಅನ್ವಯಿಸಿ ಹೇಳುವ ಪ್ರಯತ್ನ ಅಲ್ಲಿಯದು. ಮಮಕಾರವಶನಾಗಿ ಶಸ್ತ್ರತ್ಯಾಗ ಮಾಡಿದ್ದ ಅರ್ಜುನ ಶ್ರೀ ಕೃಷ್ಣೋಪದೇಶದಿಂದ ನಷ್ಟಮೋಹ, ಲಬ್ಧಸ್ಮೃತಿ, ಸಂದೇಹ ವಿದೂರನಾಗಿ ಕರ್ತವ್ಯ ಬುದ್ಧಿಯಿಂದ ಶಸ್ತ್ರಗ್ರಹಣ ಮಾಡಿದನಾದರೆ ಮಮಕಾರ ಶೂನ್ಯನಾದ ಕನ್ನಡಿಗನು ಪ್ರಾಚೀನ ಕರ್ನಾಟಕದ ವಿರಾಟ್ ಸ್ವರೂಪದರ್ಶನದಿಂದ ಜಾಗರಿತನಾಗಿ, ಹರ್ಷ ಪುಲಕಿತನಾಗಿ ಪುರುಷಸಿಂಹನಾಗಿ ಮೇಲೆದ್ದು ನಾಡು–ನುಡಿಗಳ ಅಭಿಮಾನವನ್ನು ಮೆಯ್ಗೂಡಿಸಿ ತಲೆಯೆತ್ತಿ ನಿಲ್ಲುವಂತಾಗಲೆಂಬುದೇ ಗ್ರಂಥಕರ್ತರ ಆಶಯವಾಗಿದೆ.

ಹದಿನಾರು ಪ್ರಮುಖ ಹಾಗೂ ಎರಡು ಪೂರಕ ಪ್ರಕರಣಗಳಿಂದ ಕೂಡಿದ ಗ್ರಂಥ 'ಗತ ವೈಭವ.' ಹೊರ ನೋಟಕ್ಕೆ 'ಗತ ವೈಭವ'ವು ಚಾರಿತ್ರಿಕ ಸ್ವರೂಪದ್ದಾಗಿ

ದ್ದರೂ, ಕನ್ನಡ ಅರಸರ ವಂಶಾವಳಿ-ರಾಜ್ಯವಿಸ್ತಾರ-ರಣಪ್ರಸಂಗಗಳನ್ನೆಲ್ಲ ಕಾಲ ಕ್ರಮಾಗತವಾಗಿ ನಿರೂಪಿಸಿದ್ದರೂ ಅವೆಲ್ಲ ಇಲ್ಲಿ ಗೌಣ. ಪ್ರಧಾನವಾದ್ದೆಂದರೆ ಅಲ್ಲಿ ಕಂಡು ಬರುವ ಕನ್ನಡದ ಸಂಸ್ಕೃತಿ ವೈಭವ, ಕಲಾ ಸಂಪತ್ತು, ಪ್ರಾಚೀನತೆ. ಮತ್ತೆ ಮತ್ತೆ ಆ ದೃಶ್ಯಗಳು ವಾಚಕನ ಕಣ್ಣು ಮುಂದೆ ಹಾಯುವುದರಿಂದ, ಅವುಗಳ ವರ್ಣನವು ಕಿವಿದೆರೆಯ ಮೇಲೆ ಬೀಳುವುದರಿಂದ ಕನ್ನಡಿಗನಾದ ತನ್ನ ಹಳಮೆ-ಹಿರಿಮೆಗಳ ಚಿತ್ರವು ಮನಸ್ಸಿನಲ್ಲಿ ಸ್ಪಷ್ಟವಾಗಿ, ದೃಢವಾಗಿ ನಿಲ್ಲಬಹುದು; ಆಗ ನಾಡನ್ನು ಕಟ್ಟುವ, ನುಡಿಯನ್ನು ಬೆಳೆಸುವ ಉತ್ಸಾಹವು ಅವನಲ್ಲಿ ಅಂಕುರಿಸಬಹುದು. ಹೊಯ್ಸಳ-ಚಾಲುಕ್ಯ-ರಾಷ್ಟ್ರಕೂಟರು, ಗಂಗ ಕದಂಬ-ಕಲಚೂರ್ಯರು, ವಿಜಯನಗರದ ರಾಯರು, ಮೈಸೂರಿನ ಒಡೆಯರು ಅವರೆಲ್ಲ ಬೆವರನ್ನು ಸುರಿಸಿ, ನೆತ್ತರನ್ನು ಹನಿಸಿ ಕಟ್ಟಿದ ಈ ನಾಡನ್ನು, ಬೆಳೆಸಿದ ಈ ಸಂಸ್ಕೃತಿ ವೃಕ್ಷವನ್ನು ಬೀಳಗೊಡುವುದಾಗಲೀ, ಬಾಡಗೊಡುವುದಾಗಲೀ ಸಲ್ಲದು. ಅದಕ್ಕಿಂತ ದೊಡ್ಡ ಪಾಪ-ಶಾಪಗಳು ಬೇರಿಲ್ಲ. 'ತ್ಯಕ್ತ್ವೋತ್ತಿಷ್ಠ ಪರಂತಪ' ಎಂದು ಉತ್ತೇಜಿಸಿದನು ಗೀತಾಚಾರ್ಯ. 'ಎದ್ದೇಳು ಕನ್ನಡಿಗ' ಎಂದು ಗುಡುಗಿದ್ದಾರೆ ವೆಂಕಟರಾಯರು.

ಮೇಲೆಯೇ ಹೇಳಿದಂತೆ ಹದಿನಾರು ಪ್ರಮುಖ ಪ್ರಕರಣಗಳ 'ಗತವೈಭವ'ದಲ್ಲಿ, ನಡುವಣ ಆರು ಕರ್ನಾಟಕ ಇತಿಹಾಸ ಕಥನಕ್ಕೆ ಮೀಸಲಾಗಿದೆ. ಮೊದಲ ಐದರಲ್ಲಿ ಕರ್ನಾಟಕವು ಮೃತವಲ್ಲ, ಜೀವಂತರಾಷ್ಟ್ರ; ಮಹಾರಾಷ್ಟ್ರ-ಆಂಧ್ರ-ತಮಿಳು-ಕೇರಳಗಳ ನಡುವಣ ಭಾಗವಷ್ಟೇ ಕರ್ನಾಟಕವಲ್ಲ, ಅದಕ್ಕಿಂತ ವಿಸ್ತಾರವಾದದ್ದು; ಹಲವಾರು ವಿಭೂತಿ ಪುರುಷರಿಂದಲೂ, ಉತ್ತಮೋತ್ತಮ ಕಲಾಕ್ಷೇತ್ರಗಳಿಂದಲೂ ಸಮೃದ್ಧವಾದದ್ದು ಎಂಬುದನ್ನು ಸಾಧಿಸಿದ್ದಾರೆ. ಶಾಸ್ತ್ರ-ಇತಿಹಾಸ ಕಾವ್ಯಗಳಲ್ಲಿ, ಶಿಲಾಲೇಖಗಳಲ್ಲಿ, ದಾನಶಾಸನಗಳಲ್ಲಿ, ವಿದೇಶೀ ಯಾತ್ರಿಕರ ಪ್ರವಾಸ ಪ್ರಬಂಧಗಳಲ್ಲಿ ಕರ್ನಾಟಕದ ವೈಭವ ವರ್ಣನೆ ಹೇಗಿದೆ, ಅಜಂತಾ ಎಲ್ಲೋರ. ಹಂಪೆ, ಹಳೆಬೀಡು-ಬೇಲೂರು ಬಾದಾಮಿಗಳ ಗುಡಿ ಗೋಪುರಗಳಲ್ಲಿ ಪ್ರಕಟವಾಗಿರುವ ಶಿಲ್ಪ ಕಲಾಚಾತುರಿ ಯಾವ ಮಟ್ಟದ್ದು, ನೆರೆಯೂರುಗಳಿಂದ ಬಂದು ಸೇರಿದ ಹತ್ತಾರು ಮತತತ್ವಗಳು ಕನ್ನಡ ನಾಡಲ್ಲೇ ಹುಟ್ಟಿ ಬೆಳೆದವುಗಳೊಂದಿಗೆ ಹೇಗೆ ಹಿತವಾಗಿ ಬೆರೆತು ಜತೆಯಾಗಿ ಬಾಳಿದುವು, ಎರಡು ಸಾವಿರ ವರ್ಷಗಳಷ್ಟು ಆಳದಲ್ಲಿ ತನ್ನ ಬೇರನ್ನು ಬಿಟ್ಟಿರುವ ಕನ್ನಡ ಸಾಹಿತ್ಯ ವೃಕ್ಷವು ಹೇಗೆ ನೂರಾರು ಕವಲೊಡೆದು ಹೂ-ಕಾಯಿ-ಹಣ್ಣುಗಳನ್ನು ಬಿಡುತ್ತ ಬಂದಿದೆ ಎಂಬುದರ ಬಣ್ಣನೆಯಿದೆ, ಕೊನೆಯ ಐದು ಪ್ರಕರಣಗಳಲ್ಲಿ. ಕನ್ನಡ ಇತಿಹಾಸ ಸಂಶೋಧನೆಗೆ ಹೊರಡುವವನು ಯಾವ ದಾರಿ ಹಿಡಿಯಬೇಕು. ಅವರಿಗೆ ದಾರಿದೀಪ ಊರುಗೋಲುಗಳು ಯಾವುವು, ಒಂದು ನಾಡಿನ ಪ್ರಾಚೀನ ಸಂಸ್ಕೃತಿಯನ್ನು ತಿಳಿಯುವಲ್ಲಿ ಅವಶ್ಯಾಂಗಗಳಾಗಿರುವ ಶಿಲಾಲಿಪಿ ತಾಮ್ರ ಶಾಸನಾದಿಗಳನ್ನು ರಕ್ಷಿಸಬೇಕಾದ ವಿಧಾನ ಯಾವುದೆಂಬುದನ್ನು ಪೂರಕ ಪ್ರಕರಣಗಳಲ್ಲಿ ವಿವರಿಸಿದ್ದಾರೆ.

ಈ ಶತಮಾನದ ಆದಿಭಾಗದಲ್ಲಿ ಕನ್ನಡ ಜನಕ್ಕೆ ನವ ದೃಷ್ಟಿಯನ್ನು ನೀಡುವ

ಅಂಜನ, ನವಶಕ್ತಿಯನ್ನು ತುಂಬುವ ಸಂಜೀವಿನಿ, ನವೋತ್ಸಾಹವನ್ನು ಎರೆಯುವ ಅಮೃತಕುಂಡವೆನಿಸಿತು 'ಗತವೈಭವ.' "ಕರ್ನಾಟಕದ 'ಮಾಹಾತ್ಮ್ಯ'ವನ್ನು ಹೊಗಳಿ ಇನ್ನೂ ಎಚ್ಚರಾಗದಿದ್ದ ತರುಣರನ್ನು ಎಚ್ಚರಿಸಬೇಕೆಂದೇ" ಆಲೂರರು ಗ್ರಂಥ ರಚನೆ ಮಾಡಿದ್ದು. ಆದರೆ ಕರ್ನಾಟಕವನ್ನು ಹೊಗಳುವ ಭರದಲ್ಲಿ ಅವರು ಭರತವರ್ಷ ವನ್ನು ಮರೆಯಲಿಲ್ಲ. "ಕರ್ನಾಟಕವು ನನ್ನ ಕರ್ಮಭೂಮಿ, ಭಾರತವು ನನ್ನ ಧರ್ಮ ಭೂಮಿ" ಎಂದೇ ನಂಬಿ ನಡೆದವರು ಅವರು. "Charity begins at home" ಎಂದು ಹೇಳುವುದಿದೆ. ಯಾರಲ್ಲಿ ಹುಟ್ಟುನಾಡು-ತಾಯ್ನುಡಿಗಳ ಬಗ್ಗೆ ಸ್ಪಷ್ಟವಾದ ಕಲ್ಪನೆ, ದೃಢವಾದ ಭಕ್ತಿ, ಸ್ಥಿರವಾದ ವಿಶ್ವಾಸಗಳಿಲ್ಲವೋ ಅವನು ಕೇವಲ ಉಸಿರಾಡುವ ಹೆಣ. ಅಂತಹ ಬೊಂತೆ ಬೆರ್ಚಪ್ಪಗಳು 'ರಾಷ್ಟ್ರ', 'ಸೇವೆ' ಎಂಬಂತಹ ದೊಡ್ಡ ಮಾತುಗಳನ್ನು ಆಡಿದರೆ ಅದಕ್ಕಿಂತ ಹಾಸ್ಯಾಸ್ಪದವಾದದ್ದು ಇನ್ನೊಂದಿಲ್ಲ. ಕರ್ನಾಟಕದ ಪುತ್ರ, ಭರತ ಖಂಡದ ಪ್ರಜೆ ಈ ಕ್ರಮದಲ್ಲಿ ನಡೆಯಬೇಕು ನಮ್ಮ ಬದುಕು, ಭಕ್ತಿ, ಸೇವೆ. ಆದುದರಿಂದಲೇ ಆಲೂರರು ತಮ್ಮ ಗ್ರಂಥವನ್ನು "ಕರ್ನಾಟಕಾಂತರ್ಯಾಮಿಯಾದ ಭಾರತ ಭೂಮಾತೆಗೆ" ಸಮರ್ಪಣೆ ಮಾಡಿದ್ದು. 'ಅಟ್ಟಕ್ಕೆ ಹಾರಿ, ಬೆಟ್ಟ ಹಾರು' ಎಂಬುದೊಂದು ಗಾದೆ. ಕನ್ನಡಿಗನಿಗೆ ಕನ್ನಡವೇ ದಾರಿ ಭಾರತ ಗುರಿ.' "ವಿಶ್ವ ಭಾರತಿ ಶರಣು" ಎನ್ನುವಷ್ಟು ಅವನ ಭಾವವು ವಿಶಾಲವಾದರೆ ಅತ್ಯಂತ ಶ್ಲಾಘನೀಯ.

"ಮೃತವಾದ ಕರ್ನಾಟಕದಿಂದೇನು" ಎಂದು ಕೇಳುವವರಿದ್ದರು ಒಂದು ಕಾಲ ದಲ್ಲಿ. "ಕರ್ನಾಟಕವು ಮೃತ ರಾಷ್ಟ್ರವೇ ? ಹಾಗೆ ಹೇಳುವವರು ಮುಂದೆ ಬರಲಿ" ಎಂದು ಸಡ್ಡು ಹೊಡೆದು ಅವರಿಗೆ ಎದುರಾಗಿ ನಿಂತವರು ಆಲೂರ ವೆಂಕಟರಾಯರು. ಕರ್ನಾಟಕದ ಜೀವಕಳೆಯನ್ನು, ನಾಡೀ ಸ್ಪಂದನವನ್ನು ಅರಿಯಲಾರದವರು ಕಣ್ಣಿದ್ದೂ ಕುರುಡರು, ಕಿವಿಯಿದ್ದೂ ಕಿವುಡರು ಎನ್ನುತ್ತಾರೆ ಅವರು. ಗ್ರಂಥಾರಂಭದ ಎರಡು ಪ್ರಕರಣಗಳು ಆಲೂರರ ಸಾತ್ವಿಕ ಸಂತಾಪದ ಬಿಸಿಯನ್ನು ವಾಚಕನಿಗೂ ಮುಟ್ಟಿಸ ಬಲ್ಲವು. ಆ ಎರಡು ಪ್ರಕರಣಗಳು ಕರ್ನಾಟಕದ ಗತವೈಭವವನ್ನು ಓದುಗನಿಗೆ ಕಾಣಿಸ ಬಲ್ಲ ಬೆಳಕಿನ ಕಿಂಡಿಗಳೆನ್ನಬಹುದು. ಆ ಕಿಂಡಿಯಿಂದ ನೋಡುತ್ತಿದ್ದಂತೆ, "ನಾವು ನಿಮ್ಮ ಕೈಯಲ್ಲಿ ಕಡ್ಡಿ ಕೊಟ್ಟು ಸಾರಿ ದೂರಿ ಹೇಳುವುದೇನೆಂದರೆ ನಮ್ಮ ಕರ್ನಾಟಕವು ಮೃತ ರಾಷ್ಟ್ರವಲ್ಲ; ಅದು ಜೀವಂತ ರಾಷ್ಟ್ರವು" ಎಂಬ ಘರ್ಜನೆಯು ಬಂದು ಕಿವಿ ಯನ್ನು ಅಪ್ಪಳಿಸುತ್ತದೆ. ಆ ಮಾತಿನ ಕಾವು ಮನಸ್ಸಿಗೆ ತಟ್ಟಿದಾಗ ವಾಚಕನೂ ಒಪ್ಪಿ ತಲೆಯಾಡಿಸುತ್ತಾನೆ.

ಗಳಗನಾಥ, ವೆಂಕಟಾಚಾರ್ಯ, ವಾಸುದೇವಯ್ಯ, ಪುಟ್ಟಣ್ಣನವರೇ ಮೊದಲಾದ ವರು "ಹೊಸಗನ್ನಡದ ಹೊಸತಿಲಲ್ಲಿ" ಗ್ರಂಥರೂಪಿಯಾದ ಹಣತೆಗಳನ್ನು ಒಂದೊಂದಾಗಿ ಹಚ್ಚುತ್ತಿದ್ದಾಗಲೇ ಆಲೂರರು ಉರಿಸಿದ ದೀವಿಗೆ 'ಗತವೈಭವ.' ಆಲೂರರು ಹಚ್ಚಿದ್ದು ಅಚ್ಚಗನ್ನಡದ ದೀಪ. ಅದಕ್ಕೆ ಕನ್ನಡವೇ ಎಣ್ಣೆ, ಬತ್ತಿ, ಬುಡ್ಡಿ. ಆ ಬೆಳಕಿನಲ್ಲಿ ಕನ್ನಡಿಗರು ನಾಡ ದೇವಿಯನ್ನು ದರ್ಶಿಸಲೆಂಬುದೇ ಅವರ ಆಸೆ. 'ಗತ

ವೈಭವ ’ವು “ ಬರೀ ಗ್ರಂಥವಲ್ಲ, ಕೇವಲ ಇತಿಹಾಸವಲ್ಲ. ಕನ್ನಡಿಗರ ಮುಂಬೆಳಗಿನ ಕೋಳಿ ಕೂಗು ”-ಎಂದಿದ್ದಾರೆ ದ. ಬಾ ಕುಲಕರ್ಣಿ. ಬೆಳಗಿನ ಆ ಕೂಗು ಕೆಲವರನ್ನು ಬೇಗನೆ, ಕೆಲವರನ್ನು ನಿಧಾನವಾಗಿ ಮುಟ್ಟಿ ಎಬ್ಬಿಸಿತು. ಅದಕ್ಕಾಗಿ ಆಲೂರರು ದೊಡ್ಡ ಗಂಟಲಲ್ಲೇ ಕೂಗಬೇಕಾಯಿತು. ಅವರು ಬಳಸಿದ ಭಾಷೆ ತುಂಬ ಮೊನೆಯಾದದ್ದು. “ ಕನ್ನಡ ತಾಯಿಗೆ ಈಗ ಬಂದೊದಗಿರುವ ವಿಷಮ ಸ್ಥಿತಿಯಲ್ಲಿ ಯಾವಾತನ ಹೃದಯವು ತಲ್ಲಣಿಸುವುದಿಲ್ಲವೋ, ತಳಮಳಿಸುವುದಿಲ್ಲವೋ ರೋಮ ರಂಧ್ರಗಳಲ್ಲಿ ಕೂಡ ‘ಕರ್ನಾಟಕ’ ವೆಂಬ ಸೊಲ್ಲು ಹೊರಡುವುದಿಲ್ಲವೋ, ಅದು ಹೃದಯವಲ್ಲ, ಕಲ್ಲಿನ ಬಂಡೆ! ದೇಹವಲ್ಲ, ಪೋಟುಮರ !....” “....ಕನ್ನಡಿಗರೇ, ‘ ಕರ್ನಾಟಕ ’ವೆಂಬ ಒಂದು ಶಬ್ದದಲ್ಲಿ, ಎಂಥ ಅದ್ಭುತವಾದ ಮಾಂತ್ರಿಕ ಶಕ್ತಿಯು ತುಂಬಿರುತ್ತದೆಂಬುದನ್ನು ಲಕ್ಷ್ಯಕ್ಕೆ ತನ್ನಿರಿ! ಕರ್ನಾಟಕದ ಅರಸರು ಹೋದರು, ಕವಿಗಳು ಹೋದರು, ಸಂಪತ್ತು ಹೋಯಿತು, ವೈಭವವು ಹೋಯಿತು. ಆದರೆ ‘ ಕರ್ನಾಟಕ ’ವೆಂಬ ಶಬ್ದವು ಮಾತ್ರ ಇನ್ನೂ ಉಳಿದಿದೆ. ಅದು ದ್ರೌಪದಿಯ ಅಕ್ಷಯ ಪಾತ್ರೆಯೊಳಗಿನ ಅಗುಳಿನಂತಿರುತ್ತದೆ. ಶ್ರೀ ಕೃಷ್ಣ ಪರಮಾತ್ಮನ ಕೃಪೆಯಿಂದ ನಾವು ಇದೊಂದು ಅಗುಳಿನಿಂದ ಸಾವಿರಾರು ಜನರ ಹಸಿವೆಯನ್ನು ಹಿಂಗಿಸಬಹುದು....” ಇದು ವೆಂಕಟರಾಯರ ಭಾಷಾ ಶೈಲಿಯ ಸ್ಥಾಲೀ ಪುಲಾಕ ನಿರ್ದೇಶನ. ಅತ್ಯಾಧುನಿಕರು ಈ ಭಾಷೆಯನ್ನು ‘ ನಾಟಕೀಯ ’ ಎನ್ನಬಹುದು. ಶೈಲಿಯನ್ನು ‘ affeeted’ ಎನ್ನಬಹುದು, ಶಬ್ದ ಪ್ರಯೋಗಗಳನ್ನು ‘ ಕ್ಲೀಷೆ ’ ಎನ್ನಬಹುದು. ಆದರೆ ಆಲೂರರು ಬರೆದ ಕಾಲ, ಹಿನ್ನೆಲೆ, ಉದ್ದೇಶಗಳನ್ನು ‘ ಸಹೃದಯ ’ ರಾಗಿ ನೋಡಿದರೆ ಅವೆಲ್ಲ ಅನಿವಾರ್ಯ ಅಷ್ಟೇ ಅಲ್ಲ ಆವಶ್ಯಕವೆಂದೂ ಗೊತ್ತಾಗದಿರದು. ಕ್ಲೀಷೆ, ನಾಟಕೀಯತೆಗಳೆಲ್ಲ ಇತ್ತೀಚೆಯ ಕಳೆಗಳು. ಆಲೂರರ ಕಾಲದಲ್ಲಿನ್ನೂ ಭಾಷೆಯು ಹೊಸತಾಗಿಯೇ ವಿಕಾಸಲಾಗಿಯೇ ಇತ್ತು !

‘ಗತವೈಭವ’ವು ಪ್ರಕಟವಾಗಿ ಸುಮಾರು ಅರವತ್ತು ವರ್ಷಗಳು ಸಂದಿವೆ. ‘ ಕರ್ನಾಟಕ ’ವೆಂಬ ಬೀಜ ಮಂತ್ರವನ್ನು ಕನ್ನಡಿಗರೆಲ್ಲರೂ ಜಪಿಸುವಂತೆ ಮಾಡಿದ ಅನನ್ಯ ಸಾಧಾರಣ ಕೃತಿ ‘ ಗತವೈಭವ.’ ಕನ್ನಡದ ಪ್ರಸಿದ್ಧ ಲೇಖಕರನೇಕರಿಗೆ ಈ ಗ್ರಂಥವು ನೀಡಿದ ಪ್ರೇರಣೆ ಅಸಾಮಾನ್ಯ. ಆಲೂರ ಎಂದರೆ ಕರ್ನಾಟಕ, ಕರ್ನಾಟಕವೆಂದರೆ ‘ ಗತವೈಭವ ’ ಎಂದು ಸಮೀಕರಿಸಬಹುದಾದಷ್ಟು ವರ್ಚಸ್ವಿಯಾದ ಕೃತಿ ಅದು. ಈವೊತ್ತಿನ ವಿಭಿನ್ನ ಪ್ರಕಾರಗಳ ಸಮೃದ್ಧ ಸಾಹಿತ್ಯವನ್ನಷ್ಟೇ ಕಾಣುತ್ತಿರುವವನಿಗೆ ಈ ಸಾಹಿತ್ಯಸೃಷ್ಟಿಗೆ ಮಣ್ಣು ಯಾವುದು, ನೀರು ಯಾವುದು, ಗಾಳಿ-ಬೆಳಕು-ಗೊಬ್ಬರಗಳು ಯಾವುವು ಎಂಬುದು ಅರ್ಥವಾಗುವುದು ಕಷ್ಟ. ‘ಕನ್ನಡ ಕುಲಪುರೋಹಿತ’ ಆಲೂರ ವೆಂಕಟರಾಯರಂತಹ ಲೇಖಕರು, ಅವರ ‘ ಗತವೈಭವ ’ದಂತಹ ಗ್ರಂಥಗಳು ಆಧುನಿಕ ಸಾಹಿತ್ಯಕ್ಕೆ ಹಾಗೆ ಪೋಷಕ ವಸ್ತುಗಳಾಗಿ ಇದ್ದದ್ದರಿಂದಲೇ ನಮ್ಮ ಹೊಸ ಸಾಹಿತ್ಯದಲ್ಲಿ ಅಷ್ಟಿಷ್ಟಾದರೂ ‘ ಕನ್ನಡತನ ’, ‘ ಮಣ್ಣಿನ ವಾಸನೆ ’ ಇವೆ. ಇಲ್ಲವಾದರೆ, ಉಳಿದೆಲ್ಲವುಗಳಂತೆ ಕನ್ನಡವೂ ಎಂದೋ ‘ ಪರದೇಶಿ ’ಯಾಗಿ ಬಿಡುತ್ತಿತ್ತೋ ಏನೋ !

## ೨೫. ಕೆ. ವಿ. ಅಯ್ಯರರ ' ದೆಯ್ಯದ ಮನೆ '

ಕೆ. ವಿ. ಅಯ್ಯರರು ಗರಡಿ ಮನೆಯ ಗಾರುಡಿಗ. ವ್ಯಾಯಾಮ ಶಾಲೆಯ ಶಿಕ್ಷಕನೊಬ್ಬ ಸಾಹಿತ್ಯ ಶಾರದೆಯ ಉಪಾಸಕನಾಗಿ ಗದೆಯೊಂದಿಗೆ ಲೆಕ್ಕಣಿಕೆಯನ್ನೂ ಎತ್ತಿಕೊಂಡು, ದೈಹಿಕ ಶಿಕ್ಷಣದೊಂದಿಗೆ ಆತ್ಮ ಸಂಸ್ಕರಣಕ್ಕೂ ಹೊರಡುವುದು ಒಂದು ಚೋದ್ಯವಲ್ಲವೇ ? ಅಯ್ಯರ್ ನಿರ್ಮಿಸಿದ ಕೃತಿ ಶ್ರೇಣಿಯಲ್ಲಿ ' ದೆಯ್ಯದ ಮನೆ ' ಅಥವಾ ' ಆಷಾಢ ಬಹುಳ ಅಮಾವಾಸ್ಯೆ ' ಮೊದಲ ಮೆಟ್ಟಲು. ಅದನ್ನು ಮೆಟ್ಟಿಯೇ ಅವರು ಕೀರ್ತಿ ಶಿಖರವನ್ನು ಆರೋಹಿಸಿದುದು. 1949ರಲ್ಲಿ ಪ್ರಕಟವಾಗಿ, ಸಾಹಿತ್ಯ ರಸಿಕರ ದೃಷ್ಟಿ ಅಯ್ಯರರ ಗರಡಿಮನೆಯತ್ತ ತಿರುಗುವಂತೆ ಮತ್ತೆ ಅಲ್ಲೇ ನೆಲೆಯೂರುವಂತೆ ಮಾಡಿದ ಸಮರ್ಥ ಕೃತಿ–' ದೆಯ್ಯದ ಮನೆ '.

' ದೆಯ್ಯದ ಮನೆ ' ಅರುವತ್ತನಾಲ್ಕು ಪುಟಗಳ ಒಂದು ನೀಳ್ಗತೆ ಅಥವಾ ಕಿರು ಕಾದಂಬರಿ. ಕನ್ನಡದಲ್ಲಿ ಭೂತ–ಪ್ರೇತ, ಮಂತ್ರ ಮಾಟಗಳನ್ನೂ ಅವುಗಳ ಕಾಟ ಕಾರಣಿಕಗಳನ್ನೂ ಕುರಿತ ಕತೆಯೋ ಕಾದಂಬರಿಯೋ ಇಲ್ಲವೆಂದಲ್ಲ, ಆದರೆ ಹೆಚ್ಚಿಲ್ಲ. ಅಂತಹವುಗಳಲ್ಲಿ ' ದೆಯ್ಯದ ಮನೆ ' ವಿಶಿಷ್ಟವಾದದ್ದು. ಅಲ್ಲಿರುವ ಸಂಗತಿಗಳೆಲ್ಲ ದಿಟವೆಂಬ ನಂಬಿಕೆಯನ್ನು ಬಲಿಸುವಂತಹದ್ದು ' ಮಣ್ಣಿನ ವಾಸನೆ ' ಹೊಡೆಯುವಂತಹದ್ದು. ಓದುಗನನ್ನು ದೆಯ್ಯದ ಮನೆಯೊಂದಕ್ಕೆ ಹೋಗಿಸಿ, ಭಯಾನಕ ಆವರಣವೊಂದರಲ್ಲಿ ಅವನನ್ನು ಸುತ್ತಾಡಿಸಿ ' ಅಬ್ಬಾ ' ಎಂದು ಬೆರಗಾಗಿಸಬಲ್ಲ ಸತ್ವಪೂರ್ಣ ಕಥೆ ದೆಯ್ಯದ ಮನೆ. ಇಂದಿಗೆ ಸುಮಾರು 70 ವರ್ಷಗಳ ಬೆಂಗಳೂರೇ ಇಲ್ಲಿಯ ಕಥೆಯ ಬಳ್ಳಿಗೆ ಚಪ್ಪರ. ಆ ಹಂದರಕ್ಕೆ ದೆಯ್ಯದ ಮನೆಯೇ ಕಂಬವಾದರೂ ಅದನ್ನು ಸುತ್ತಿಬೆಳೆದ ಇನ್ನೂ ಮೂರು ನಾಲ್ಕು ಕಥಾವಲ್ಲರಿಗಳೂ ಇಲ್ಲಿವೆ. ಚಪ್ಪರ–ಕಂಬ–ಬಳ್ಳಿ ಎಲ್ಲವನ್ನೂ ಸರಿಯಾಗಿ ತಿಳಿದುಕೊಂಡರೆ ಮಾತ್ರ ಒಟ್ಟು ಕಥೆಯ ಸೌಂದರ್ಯ, ವರ್ಚಸ್ಸು ವಾಚಕನ ಚಿತ್ತಫಲಕದ ಮೇಲೆ ಬಿಂಬಿಸಿ, ಮುದ್ರಿತವಾಗುವುದು ಸಾಧ್ಯ. ಕಥೆಯನ್ನು ಕೇಳುವವರು ಕತೆಯನ್ನು ಹೇಳುವವರಂತೆಯೇ ಸಾವಧಾನಿಗಳೂ ಸಾನುಕ್ರೋಶರೂ ಆಗಿರುವುದು ತೀರ ಅವಶ್ಯಕ.

ಕಥಾಭೂಮಿಕೆ ಬೆಂಗಳೂರು ಆಗಿರುವುದರಿಂದ ' ಹಳೆ ಬೆಂಗಳೂರಿನ ' ಒಂದು ಚಿತ್ರಣ–ಮುನ್ನುಡಿಯಂತೆ–ಮೊದಲಲ್ಲಿದೆ. " ಜನಾಕೀರ್ಣಮನ್ಯೇ ಹುತವಹ ಪರೀತಂ ಗೃಹಮಿವ " ಎಂದು ರಾವು ಬಡಿಸುವ ಬೆಂಗಳೂರಲ್ಲ ಆಗಿನದು. ತಂಪು ನೀರು, ಕಂಪು ಗಾಳಿಯ ಧರ್ಮಾಂಬುಧಿ ಕೆರೆ, ವಾದ್ಯಮೇಳಗಳ ಚಿಕ್ಕ ಲಾಲ್‌ಬಾಗ್, ಪರವೂರವರಿಗೂ ಪರದೇಶಿಗಳಿಗೂ ಆಶ್ರಯವಾದ ಪೂರ್ಣಯ್ಯನ ಛತ್ರ, ಬೀದಿ ಬೀದಿಗೂ ಒಂದೊಂದರಂತೆ ತಲೆಯೆತ್ತಿ ನಿಂತಿರುವ ಗರಡಿಮನೆ, ಹತ್ತಾರು ಮಂದಿಗೆ ' ನೀರು ಕುಡಿಸಿದ ' ಗೋವಿಂದ ಶೆಟ್ಟಿ ಬಾವಿ, ದೊಡ್ಡದೊಂದು ಗೋಣಿಮರ, ಅದರ ಪಕ್ಕದಲ್ಲೇ ಹಾಳುಬಿದ್ದ ಮಹಡಿಮನೆ ಹೀಗಿದೆ ಹಳೆಯ ಬೆಂಗಳೂರಿನ ಆ ಚಿತ್ರ. ಜನ ಬಾಹುಳ್ಯವೂ ಈಗಿನಂತಲ್ಲ. ಊರ

ಜನ ಒಬ್ಬರನ್ನೊಬ್ಬರು ಚೆನ್ನಾಗಿ ಬಲ್ಲವರು–ಹುಲ್ಲುಗಾವಲು, ಹೂವಿನ ತೋಟ, ಕೆರೆಯ ಕಟ್ಟೆಗಳಲ್ಲಿ ಕುಳಿತು ತಿಂಡಿ ತಿನ್ನುತ್ತಾ ಧಾರಾಳವಾದ ಮಾತುಕತೆ ಆಡುವವರು. ನೂಕು ನುಗ್ಗಲು, ಗಡಿಬಿಡಿ, ಗದ್ದಲಗಳಿಲ್ಲದ ದಿನಚರ್ಯೆ ಆಗಿನದು. "ಶಾಂತಮಿದಂ ಆಶ್ರಮ ಪದಂ" ಎಂಬಂತಹ ಬೆಂಗಳೂರು!"ಅಂಥ ಕಾಲ ಮತ್ತೆ ಯಾವಾಗ ಬಂದೀತು ?" ಎಂದು ಕೇಳುತ್ತಾನೆ ಲೇಖಕ. "ತೇಹಿ ನೋ ದಿವಸಾ ಗತಾಃ" ಎನ್ನುತ್ತಾನೆ ವಾಚಕ.

'ದೆಯ್ಯದ ಮನೆ'ಯ ಒಳಹೋಗುವುದಕ್ಕೆ ಓದುಗನಿಗೆ ಸುಭದ್ರವಾದ, ಸುಸ್ಪಷ್ಟವಾದ ನೆಲಗಟ್ಟು-ಮೆಟ್ಟಲು ನಿರ್ಮಿಸಿ ಕೊಟ್ಟಿದ್ದಾರೆ ಅಯ್ಯರ್. ಮುಂದೆ ಅವನೆದುರಲ್ಲಿ ಒಂದೊಂದಾಗಿ ತೆರೆಯುವ ಸೊಗಸುಗಳನ್ನು ಮನಗಂಡು ಸವಿಯಬೇಕಾದರೆ ಈ ನೆಲಗಟ್ಟು ಮೆಟ್ಟಲುಗಳ ಆಧಾರ ಬೇಕೇ ಬೇಕು. ಅದರಲ್ಲೂ ಆ 'ಗೋಣೀ ಮರ ಮತ್ತು ಹಾಳು ಬಿದ್ದ ಮಹಡಿ ಮನೆ'ಗಳು 'ಯಮುಗುಂಡಿಗೆ'ಯ ಗಂಡಾಳು ಪುಟ್ಟಮಲ್ಲನ 'ಪರಾಣ' ಹೋದ ಕರುಣ ಕಥೆಗೆ ಜೀವಾಧಾರ. ಪುಟ್ಟಮಲ್ಲನ 'ಪರಾಣ' ಹಾರಿದ ಮುಖ್ಯ ಕಥೆಗಿಂತ ಮೊದಲು 'ಕಾಮನ ಹುಣ್ಣಿಮೆ'ಯ ದುರಂತವೂ ದೆಯ್ಯದ ಮನೆಯ ಎರಡು ಭಯಾನಕ ಪ್ರಸಂಗಗಳೂ ವಿಸ್ತೃತವಾಗಿವೆ. ಗರಡಿ ಮನೆಯ 'ವಸ್ತಾದ'ರ ಕಥೆ- 'ಕಾಮನ ಹುಣ್ಣಿಮೆ'. 'ತುರಾ' ಮತ್ತು 'ಕಲ್ಕಿ' ಎಂಬೆರಡು ತಂಡಗಳು ಕಾಮನ ಹಬ್ಬದ ಹೆಸರಲ್ಲಿ 'ಝುಂಡಾ' ಎತ್ತಿ ಕಟ್ಟಿ ನಾ ಮೇಲು ತಾ ಮೇಲು ಎಂದು ಹಠ ಹಿಡಿಯುತ್ತವೆ; ಪರಿಣಾಮವಾಗಿ 'ಲಾವಣಿ ಹೇಳುವ ಮೇಳ' ಕೂಡುತ್ತದೆ. ಅದರಲ್ಲಿ 'ಕಲ್ಕಿ' ತಂಡದ ರಂಗ ಸಾಮಪ್ಪ ಎದುರಾಳಿ 'ಸಿವಾಚಾರ'ದ ನಿಜನಿಂಗಪ್ಪನ ಶಾಪದಿಂದೆಂಬಂತೆ ಸಾಯುತ್ತಾನೆ. ಈ ದುರಂತ ಸಾಲದೆಂಬಂತೆ ಜತೆಯಾಗಿ ಮತ್ತೊಂದು ಅನಾಹುತ: ಊರಿನ ಪಡ್ಡೆ ಹುಡುಗರು ಸೇರಿಕೊಂಡು ಅಂಕಮ್ಮನ ಮಗ 'ಎಳೇ ನಿಂಬೆಕಾಯಿ' ಗೋವಿಂದನನ್ನು ಚಟ್ಟದಲ್ಲಿ ಮಲಗಿಸಿ 'ಮನ್ಮಥ ಸತ್ತೋದ್ನೊ'ಂತ ಬಾಯಿ ಬಡಕೊಂಡು ಮೆರವಣಿಗೆ ಹೊರಡುತ್ತಾರೆ. ಚಟ್ಟ ಬಿಚ್ಚಿ ನೋಡುವಾಗ ಗೋವಿಂದ ನಿಜವಾಗಿಯೂ 'ಗೋವಿಂದ' ಎಂದಿರುತ್ತಾನೆ !–ಇದು 'ಕಾಮನ ಹುಣ್ಣಿಮೆಯ' ಕಥೆ. ಈ ಕಥೆ ಹೇಳುವವನು ಗರಡಿಯಾಳು ಚಿಕ್ಕರಂಗಪ್ಪ.

'ಕಾಮನ ಹುಣ್ಣಿಮೆ' ಕಥೆಯ ಮುಗಿತಾಯದಲ್ಲಿ 'ದೆಯ್ಯದ ಮನೆ' ಮೊದಲಾಗುತ್ತದೆ. ಚಿಕ್ಕರಂಗಪ್ಪನ ಕತೆ ಕೇಳುತ್ತಿದ್ದವರಲ್ಲಿ ಒಬ್ಬನಾದ ವೆಂಕಟೇಶ (ಎಂದರೆ ಲೇಖಕ. ಲೇಖಕ ಆ ಕಾಲಕ್ಕಿನ್ನೂ ಬಾಲಕನೆಂಬಂತೆ ಚಿತ್ರಿತರಾಗಿದ್ದಾರೆ) 'ಗೋಣಿ ಮರದ ಹಿಂದಿರೋ ಹಾಳುಬಿದ್ದ ಕಲ್ಮನೆ' ವೃತ್ತಾಂತವನ್ನು ತಿಳಿಯುವ ಕುತೂಹಲವನ್ನು ವ್ಯಕ್ತಪಡಿಸುತ್ತಾನೆ. ಉಳಿದವರೂ ಕತೆಯನ್ನು ಬಲ್ಲ 'ಕಾವಲು ಚೆನ್ನಯ್ಯ'ನನ್ನು ಒತ್ತಾಯಿಸುತ್ತಾರೆ; ಜಾಂಗೀರು ಮಸಾಲೆ ವಡೆಗಳ ಆಸೆ ತೋರಿಸುತ್ತಾರೆ. ಅಂತು ಹೇಳಬಾರದ ಕೇಳಬಾರದ ಕತೆ ಅದೆಂದು ಕೇಳುಗರ ಉತ್ಸಾಹಕ್ಕೆ ಮತ್ತೊಂದು ಹುರಿ ಸೇರಿಸಿ ತೊಡಗುತ್ತಾನೆ ಚೆನ್ನಯ್ಯ.—'ಜೈನ್ರ ಪದ್ಮಯ್ಯ' ಕಟ್ಟಿಸಿದ ಮನೆ ಅದು; ಕಾರಣಾಂತರದಿಂದ ಹಾಳುಬಿತ್ತು. ಕಾಲಾಂತರದಲ್ಲಿ ಯಾರೋ 'ಮದ್ರಾಸಿ' ಗಂಡ ಹೆಂಡತಿ ಮತ್ತವರ

ಕೈಗೂಸಿಗೆ ಅಸರೆಯಾಗುತ್ತದೆ ಆ ಮನೆ. ಕೆಲವೇ ತಿಂಗಳಲ್ಲಿ ಎಳೆಮಗು ಜ್ವರ ಬಂದು ತೀರಿಕೊಳ್ಳುತ್ತದೆ. ದುಃಖವನ್ನು ಸಹಿಸಲಾಗದೆ ತಾಯ್ತಂದೆಗಳಿಬ್ಬರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಅದು ಆಷಾಢಮಾಸ ಅಮಾವಾಸ್ಯೆಯ ದಿನ. ಅದಾದ ಮೇಲೆ ಎರಡು ವರ್ಷಗಳ ಬಳಿಕ ಊರನ್ನೆಲ್ಲಾ ಪ್ಲೇಗು ಮಾರಿ ತುತ್ತುಗೊಂಡಾಗ ಅಣ್ಣ-ತಮ್ಮಂದಿರಿಬ್ಬರು ಆ ಹಾಳ್ಮನೆ ಸೇರುತ್ತಾರೆ. ಅಂದೂ ಆಷಾಢಮಾಸ ಅಮಾವಾಸ್ಯೆ. ಮಧ್ಯರಾತ್ರಿ ಅವರಿಬ್ಬರೂ ಪ್ರೇತಸಂಚಾರದಿಂದ ಭಯಗ್ರಸ್ತರಾಗಿ ಮನೆಬಿಟ್ಟು ಓಡುತ್ತಾರೆ. ಈ ಸುದ್ದಿ ಊರಲ್ಲೆಲ್ಲ ಹಬ್ಬಿ, ಬೆಳೆದು ಜನ ರಾತ್ರಿಕಾಲದಲ್ಲಿ ಆ ಮನೆ ಹತ್ತಿರವಿರಲಿ ಬೀದಿ ಕಡೆಗೂ ಸುಳಿದಾಡಲು ಹಿಂಜರಿಯುವಂತಾಗುತ್ತದೆ—ಇಲ್ಲಿಗೆ ಚಿನ್ನಯ್ಯನ ಕತೆ ಮುಗಿಯುತ್ತದೆ. ಮತ್ತೊಂದು ವ್ಯಥೆಯ ಕತೆ ಮೊಳಕೆಯೊಡೆಯುತ್ತದೆ. ಅದೇ ಕೊನೆಯದು, 'ಆಷಾಢ ಬಹುಳ ಅಮಾವಾಸ್ಯೆ'.

ಚಿನ್ನಯ್ಯನ ಹೇಳಿಕೆಯ ಮೇಲೆ ಟೀಕೆ ಟಿಪ್ಪಣಿಗಳಾಗುತ್ತಿರುವಾಗ ಗುಂಪಿನಲ್ಲಿ ಒಬ್ಬನಾದ ಬಿಸಿ ರಕ್ತದ ಪುಟ್ಟಮಲ್ಲ ಅದನ್ನು 'ಕತೆ' ಎಂದು ಕರೆದದ್ದು ಮಿಕ್ಕವರಿಗೆ ಒಪ್ಪಿಗೆಯಾಗುವುದಿಲ್ಲ. ಅದು ಕತೆಯಲ್ಲ ನಿಜಸಂಗತಿಯೆಂದು ಅವರ ವಾದ. ಹೀಗೆ ವಾದ-ಪ್ರತಿವಾದ ಬೆಳೆದು ಪುಟ್ಟಮಲ್ಲ ಆಷಾಢ ಬಹುಳ ಅಮಾವಾಸ್ಯೆಯ ಮಧ್ಯರಾತ್ರಿ ಏಕಾಕಿಯಾಗಿ ಆ ದೆಯ್ಯದ ಮನೆ ಹೊಕ್ಕು, ಕತ್ತಲಲ್ಲೇ ಎರಡು ಕಡೆ ಮೊಳೆ ಹೊಡೆದು ಬರುವ 'ಪಂತ' ಏರ್ಪಡುತ್ತದೆ. ಅಮಾವಾಸ್ಯೆ ಬಂತು ; ಜತೆಗೆ ಸೂರ್ಯಗ್ರಹಣ. ಪೂರ್ವ ನಿರ್ಧಾರದಂತೆ ಎಲ್ಲವೂ ನಡೆಯಿತು. ಆದರೆ ಆ ಇರುಳು ಕಳೆದು ಬೆಳಗಾಗುವುದನ್ನು ಗಟ್ಟಿಎದೆಯ ಪುಟ್ಟಮಲ್ಲ ಕಾಣಲಿಲ್ಲ. ದೆಯ್ಯದ ಮನೆಯಲ್ಲಿ ಅವನ ಹೆಣ ತೂಗುತ್ತಿರುತ್ತದೆ! ಆ ಧೀರನಿಗೆ ಈ ದುರ್ಗತಿ ಹೇಗೆ ಬಂತು ? ವಿಚಾರಾಂತ್ಯದಲ್ಲಿ ಜನರು ಅನುಮೇಯಿಸಿದ್ದು ಇದು: ಪುಟ್ಟಮಲ್ಲನೇ ಗೋಡೆಗೆ ಬಡಿದಿರಬಹುದಾದ ಮೊಳೆಯೊಂದಕ್ಕೆ ಅವನ ಅಂಗಿಯ ಒಂದು ಚುಂಗು ಸಿಕ್ಕಿಕೊಂಡದ್ದು ತಿಳಿಯದೆ 'ಹೊರಡುತ್ತೇನೆ' ಎನ್ನುವಾಗ ಹಿಂದಿನಿಂದ 'ಯಾರೋ ಅಥವಾ ಯಾವುದೋ' ಜಗ್ಗಿದಂತಾಗಿ 'ಅಯ್ಯಯ್ಯೋ' ಎಂದು ಗಟ್ಟಿಯಾಗಿ ಅರಚಿ ಅವನು ಪ್ರಾಣಬಿಟ್ಟಿರಬೇಕು !–ಇದು ಕೇವಲ ಅಸ್ಥಿಪಂಜರ. ರಕ್ತಮಾಂಸ ತುಂಬಿಕೊಂಡಿರುವ ಮೂಲ ಬೇಕಿದ್ದರೆ ಅಯ್ಯರ್‌ಗೆ ಶರಣಾಗಬೇಕು. ಪುಸ್ತಕದ ಪುಟಪುಟಗಳನ್ನು ತಿರುವಿ ಪಾರಾದಂತೆ,—ಎಳೆಯ ವೆಂಕಟೇಶನಿಗೆ ಆದಂತೆ—ಓದುಗನ ಎದೆಯೂ ಢವ್ ಢವ್ ಎಂದು ಬಡಿಯುತ್ತಿರುತ್ತದೆ. ಅಷ್ಟೊಂದು ಸಜೀವವಾಗಿ, ಸಹಜವಾಗಿ, ಕ್ಷಣ ಕ್ಷಣಕ್ಕೂ ವಿಸ್ಮಯಕಾರಿಯಾಗಿ ಬೆಳೆಯುತ್ತದೆ ಕತೆ. ಆಷಾಢ ಬಹುಳ ಅಮಾವಾಸ್ಯೆಯ ಕತ್ತಲಲ್ಲಿ ವಾಚಕನ ಕಣ್ಣು ಕಟ್ಟಿ, ಉಸಿರು ತಡೆದು ಪುಟ್ಟಮಲ್ಲನಂತೆ ಅವನೂ 'ಅಯ್ಯಯ್ಯೋ' ಎಂದು ಚೀರಿಕೊಂಡಾಗಲೇ ಕತೆಯ ಮುಗಿತಾಯ ! ಇರುಳಿನ ಹೊತ್ತು ಈ ಕತೆ ಓದಿ ಬಹಿರ್ದೇಶಕ್ಕೆ ಹೋಗಲು ಹೆದರಿಕೊಂಡವರುಂಟಂತೆ !—ನಿರೂಪಣೆಯ ಕುಶಲತೆಗೆ ವಸ್ತುವಿನ ಜೀವಂತಿಕೆಗೆ ಒಟ್ಟಿನಲ್ಲಿ ಸಾಹಿತ್ಯದ ಸಾರ್ಥಕತೆಗೆ ಇದಕ್ಕಿಂತ ಬೇರೆ ಸಾಕ್ಷ್ಯ ಬೇಕೆ ? ಹಳೆ ಬೆಂಗಳೂರಿನ ಕೆರೆ-ಕಟ್ಟೆ, ಗಲ್ಲಿ-ಗರಡಿಗಳನ್ನು

'ಕಲ್ಕಿ' ಮತ್ತು 'ತುರಾ' ತಂಡಗಳ ಲಾವಣಿ ಜಿದ್ದನ್ನು ಕಾಮನ ಹಬ್ಬದಲ್ಲಿ ಗೋವಿಂದನ ದಹನವನ್ನು ಜನರೆದೆಯಲ್ಲಿ ಭೀತಿಯ ಭೂತ ಸಂಚಾರಕ್ಕೆ ಎಡೆ ಮಾಡಿದ ದೆಯ್ಯದ ಮನೆಯನ್ನು ಪಂತದಲ್ಲಿ ಗೆದ್ದರೂ ಪ್ರಾಣ ಕಳಕೊಳ್ಳುವ ಪುಟ್ಟಮಲ್ಲನ ದುರಂತವನ್ನು, ಅಮಾವಾಸ್ಯೆಯ ಕಾರ್ಗತ್ತಲು, ಕುಳಿರ್ಗಾಳಿ, ಸೋನೆ ಮಳೆಗಳನ್ನು-ಒಂದೊಂದಾಗಿ ಕಣ್ಣಿಗೆ ಕಟ್ಟುವಂತೆ ಕಡೆದು ನಿಲ್ಲಿಸಿರುವ ಅಯ್ಯರ್ ಇದು ಹಳೇ ಬೆಂಗಳೂರಲ್ಲಿ ಎಪ್ಪತ್ತು ವರ್ಷಗಳ ಹಿಂದೆ ನಡೆದ ಕತೆಯಲ್ಲ ನಮ್ಮ ಹತ್ತಿರದಲ್ಲೇ, ಕಣ್ಣೆದುರಲ್ಲೇ ನಡೆದ ಪ್ರಕರಣ ಎಂಬಂತೆ ಓದುಗನಿಗೆ ಮೋಡಿ ಹಾಕಿದ್ದಾರೆ. ಉಕ್ತವಾದ ಒಂದೊಂದು ಸಂಗತಿಯೂ "ಸೋಜಿಗದ ಸೂಜಿಮೊನೆ'' ನಿಮಿರಿಸುವಂತಿದೆ. "ವಾತಾವರಣ ಸೃಷ್ಟಿಪಾತ್ರ ರಚನೆಯಷ್ಟೇ ಮಹತ್ವವನ್ನು ಪಡೆದ ಮೊದಲ ಕಾದಂಬರಿ ಇದು" ಎಂದು ಕೀರ್ತಿನಾಥ ಕುರ್ತುಕೋಟಿಯವರು ಹೇಳಿದುದರಲ್ಲಿ ಅತ್ಯುಕ್ತಿಯೇನೂ ಇಲ್ಲ. ಅಷ್ಟೊಂದು ಅದ್ಭುತವಾದ ಅನ್ಯಾದೃಶವಾದ ವಾತಾವರಣ ಸೃಷ್ಟಿ ಇಲ್ಲಿನದು.

ಈ ಕಿರು ಹೊತ್ತಗೆಯ ಹೆಚ್ಚುಗಾರಿಕೆಯ ಇನ್ನೆರಡು ಅಂಶಗಳೆಂದರೆ ಚರಿತ್ರ ಚಿತ್ರಣ ಮತ್ತು ಭಾಷಾ ಪ್ರಯೋಗ. ಪುಸ್ತಕದ ಪ್ರಕರಣಗಳೆಲ್ಲ ಒಂದೊಂದು ವಿಧದಲ್ಲಿ ಅದ್ಭುತ ರಮ್ಯವಾಗಿದ್ದರೂ 'ಪುಟ್ಟಮಲ್ಲನ ಪರಾಣ' ಹಾರುವ ಪ್ರಸಂಗ ಎಲ್ಲಕ್ಕೂ ಮಿಗಿಲಾದದ್ದು. ಪುಟ್ಟಮಲ್ಲ ತನ್ನ ಗತ್ತು-ಗೈರತ್ತುಗಳಿಂದ ನಡೆ-ನುಡಿಗಳಿಂದ ಗುಂಪಿನ ಗೆಳೆಯರಿಗೆಷ್ಟೋ ವಾಚಕರಿಗೂ ಅಷ್ಟೇ ಪ್ರಿಯನಾಗಿರುತ್ತಾನೆ. ಅಷ್ಟೊಂದು ಆಕರ್ಷಕವಾಗಿ ಚಿತ್ರಿತವಾಗಿದೆ ಅವನ ವ್ಯಕ್ತಿತ್ವ. "ಪುಟ್ಟಮಲ್ಲ ಹೆಸರಿಗೆ ತಕ್ಕ ಮಲ್ಲನೇ ಹೌದು. ಸರಸಿ, ಒಳ್ಳೆಯ ಸ್ನೇಹಿತ" (ಪುಟ 16). "ಅಖಾಡಕ್ಕಿಳಿದು ತೊಡೆ ರಟ್ಟೆ ತಟ್ಟಿ ಜೈ ಹನುಮಾನ್ ಅಂದಾಗ......ಎದುರಾಳಿಯ ಗುಂಡಿಗೆ 'ಝಿಲ್' ಅಂತ......(ಪುಟ 17) ಅಂತಹವನು ಪುಟ್ಟಮಲ್ಲ. ಅವನ ಗರಡಿಯ ಯಜಮಾನ್ರು ಅವನಿಗೆ ಕೊಟ್ಟ ಶಿಫಾರಸು ಇದು–"ಛಾತಿ ಐತೋ ಪುಟ್ಟಮಲ್ಲಂಗೆ! ದಿಲ್ ಕಚ್ಚಾ ಅಲ್ಲ" (ಪುಟ 50). ಗೆಳೆಯ ಚಿಕ್ಕರಂಗಪ್ಪ ಹೊಗಳುತ್ತಾನೆ "ಯಮಗುಂಡಿಗ್ಗೆ ಕಣಪ್ಪಾ ಪುಟ್ಟಮಲ್ಲಂದು......" (ಪುಟ 48). ಇಂತಹ ಪುಟ್ಟಮಲ್ಲನೂ ಹೆದರಿ ಎದೆಯೊಡೆದು ಸತ್ತ ಎಂದಾಗ ಚಿಕ್ಕರಂಗಪ್ಪನಿಗೆ ಆದಂತೆ ನಮಗೂ "ಎದೆಯಲ್ಲಿ ಹೇಗೇಗೋ ಆಗು"ತ್ತದೆ. ಯಜಮಾನರಂತೆ ನಾವೂ ಕಣ್ಣುಗಳಲ್ಲಿ ನೀರು ತುಳುಕಿಸುತ್ತೇವೆ. ಈ ದುರಂತ ಪ್ರಕರಣ ಅಯ್ಯರರ ಕಥನ ಕುಶಲತೆಗೆ ಒಂದು ಒಳ್ಳೆಯ ಉದಾಹರಣೆ. ಪುಟ್ಟಮಲ್ಲ ಎದೆಗಾರನೇ ಆಗಿದ್ದರೂ ಅವನ ಮನಸ್ಸೇ ಅವನನ್ನು ಹೇಗೆ ವಂಚಿಸಿತು ಎಂಬುದು ಇಲ್ಲಿ ವಿಚಾರಣೀಯ ಸಂಗತಿ. ಇದು ಮನಶ್ಶಾಸ್ತ್ರ ಸಮ್ಮತವೆಂದೂ ತೋರುತ್ತದೆ.

ಕಾವಲು ಚಿನ್ನಯ್ಯನ ಚಿತ್ರಣವೂ ಹೀಗೆಯೇ–ನೈಜತೆ ಉಚಿತತೆಗಳಿಂದ ಪ್ರಭಾವಿಯಾದದ್ದು. ಅವನೆಷ್ಟೋ ಮಳೆಗಾಲವನ್ನು ಕಳೆದಿದ್ದಾನೆ. ಬದುಕಿನ ಏಳು–ಬೀಳುಗಳನ್ನು ಕಂಡಿದ್ದಾನೆ. ಚಿನ್ನಯ್ಯನು ಹೇಳುವ ಕತೆಗಳೆಂದರೆ ಅವನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತಿವೆ. 'ಅವನಿಗೆ ನೋಟವೆಂದರೆ ನಂಬಿಕೆ'ಯೇ ಸರಿ. ಮದ್ರಾಸಿ ದಂಪತಿ

ಗಳ ಕತೆ ಹೇಳುತ್ತಾ ತಾನೂ ಕಣ್ಣೀರಿಕ್ಕಿ, ಕೇಳುಗರನ್ನೂ ಕರಗಿಸಿ ಬಿಡುತ್ತಾನೆ. ದೆಯ್ಯದ ಮನೆಯನ್ನು ಬಣ್ಣಿಸುತ್ತಾ, ಓದುಗರ ಮೈನವಿರೇಳಿಸುತ್ತಾನೆ. ಕರುಳಿನ ಕುಡಿಯನ್ನು ಕಳಕೊಂಡು ಗೋಳಾಡುವ ಇಬ್ಬರು ವೃದ್ಧ ಮಾತೆಯರ ಭಗ್ನ ಮೂರ್ತಿಗಳೂ ನಮ್ಮೆದೆಯನ್ನು ಹಿಂಡುತ್ತವೆ. ಅವರಲ್ಲಿ ಒಬ್ಬಾಕೆ ಗೋವಿಂದನ ತಾಯಿ ಅಂಕಮ್ಮನಾದರೆ ಮತ್ತೊಬ್ಬಳು ಪುಟ್ಟಮಲ್ಲನ, ತಾಯಿ. ಇಬ್ಬರಿಗೂ ಇದ್ದದ್ದು ಒಬ್ಬೊಬ್ಬರೇ ಮಕ್ಕಳು. ಕೊಟ್ಟ ಶಿವನೇ ಅವರನ್ನು ಕೊಂಡೊಯ್ದಾಗ ಆ ತಾಯಂದಿರ ಗೋಳು ಕೈಲಾಸವನ್ನು ಮುಟ್ಟುತ್ತದೆ. ಮಾತೃ ಹೃದಯದ ಅಗಾಧತೆಯನ್ನಿಲ್ಲಿ ಕಾಣುತ್ತೇವೆ. ಆ ಇಬ್ಬರಲ್ಲಿ “ ಯಾರಿಗಿಂತ ಯಾರು ಹೆಚ್ಚು ? ತಾಯಿಗಿಂತ ಯಾರು ಹೆಚ್ಚು ?”

ಉಳಿದ ಚಿತ್ರಗಳೂ ಕತೆಯ ಚೌಕಟ್ಟಿನ ಮಿತವಾದ ಅವಕಾಶದಲ್ಲಿ ಅಡಕವಾಗಿ ನಿಲ್ಲುತ್ತವೆ. ಚಿಕ್ಕರಂಗಪ್ಪ, ಸುಬ್ಬಯ್ಯ, ತಿಮ್ಮಪ್ಪ, ಯಜಮಾನ್ ಮುನಿಸ್ವಾಮಪ್ಪ ಅವನ ತಮ್ಮ ರಂಗಸ್ವಾಮಪ್ಪ, ಶಿವಾಚಾರದ ನಿಜನಿಂಗಪ್ಪ, ಮದ್ರಾಸಿ ಗಂಡು–ಹೆಣ್ಣು, ಚಿನ್ನಯ್ಯನನ್ನು ‘ ತಾತ–ತಾತಾಂತ ’ ಕರೆದು ಓಡಾಡುತ್ತಿದ್ದ ಅವರ ಮುದ್ದುಮಗು ದೆಯ್ಯದ ಮನೆಯಲ್ಲಿ ಎಡೆಗೆಟ್ಟ ಅಣ್ಣ-ತಮ್ಮ ಇವರೆಲ್ಲ ಒಟ್ಟು ಕತೆಯ ಜೊಂಪಕ್ಕೆ, ಸುತ್ತಲೂ ಊರಿದ ತಾಂಗುಗಳಾಗುತ್ತಾರೆ.

ಇನ್ನುಳಿದದ್ದು ಭಾಷಾಶೈಲಿ. ಆಡು ಮಾತಿನ ಬಿಗಿ ಬನಿಗಳನ್ನು ಕಂಡು ಕೇಳಬೇಕಾದರೆ ಈ ಪುಸ್ತಕ ನೋಡಬೇಕು, ಓದಬೇಕು. ವಾಕ್ ಮತ್ತು ಅರ್ಥಗಳಿಗೆ ಅವಿನಾಭಾವವಿರುವಂತೆ ಪಾತ್ರ ಮತ್ತು ಭಾಷೆಗೂ ಇದೆ ಎಂಬುದು ಇಲ್ಲಿ ಸ್ಥಿರವಾಗುತ್ತದೆ. ಪುಸ್ತಕದಲ್ಲಿ ಲೇಖಕರೇ ನೇರವಾಗಿ ಕಥೆಯನ್ನು ನಿರೂಪಿಸುವ ಪ್ರಕರಣಗಳು ಎರಡು ಮಾತ್ರ. ಉಳಿದ ಕಥನಗಳೆಲ್ಲಾ ಬೇರೆ ಬೇರೆ ವ್ಯಕ್ತಿಗಳ ಆಡುಮಾತಿನಲ್ಲೇ ಇವೆ. ಒಂದು ಮಾತು ಎಂದರೆ ಒಂದು ಅರ್ಥ ಅಥವಾ ಒಂದು ಚಿತ್ರ. ಆ ಚಿತ್ರ ಕಣ್ಣಿಗೆ ಕಟ್ಟಿದಷ್ಟೂ ಅರ್ಥ ಉಜ್ವಲ, ಶಬ್ದ ಸಮುಚಿತ. ಚಿಕ್ಕರಂಗಪ್ಪ ಸ್ಪರ್ಧೆಯನ್ನು ವಿವರಿಸುತ್ತಾ, “ ನಿಜನಿಂಗಪ್ಪ ಏನು ಕಮ್ಮಿ ಪಿಂಡಾನಾ ! ಆಕ್ದಾ ಛಡಾ ಸವಾಲ್ ! ಆಲ್ಲಾಡೋಯ್ತು ಜನ ! ಸಾಸ್ತ್ರಿಗಳೆಲ್ಲಾ ಮೂಗಿನ್ ಮ್ಯಾಗ್ ಬೆಳ್ಳಿಟ್ಕೊಂಬುಟ್ರು......” ಎನ್ನುವಾಗ ಪಾಠಕರ ಕಿವಿ ನಿಗುರಿ ಕುಳಿತಲ್ಲಿಂದ ಎಗರಿ ಬಿಡುವಂತಾಗುತ್ತದೆ. ಕಾವಲು ಚಿನ್ನಯ್ಯ ಎಳೆಮಗುವಿನ ದುರ್ಮರಣವನ್ನು ‘ ಆ ಪೊತ್ತು ನನಗ್ಗೆ ಊಟ ಸೇರ್ನಿಲ್ಲಾಪ್ಪ. ರಾತ್ರ ಮನೀಕ್ಕಂಡ್ರೆ ನಿದ್ದೆ ಬರೊಲ್ದು. ಆ ಮಗೂನ ಗ್ಯಾಪ್ಕಾನೇ ಬರ್ತಿತ್ತಪ್ಪ......”(ಪುಟ 36) ಎಂದು ಮುಂತಾಗಿ ವರ್ಣಿಸುವಲ್ಲಿ ಆ ಭಾಷೆಯ ವ್ಯಂಜಕ ಶಕ್ತಿ ಎಷ್ಟೆಂಬುದು ಅನುಭವ ವೇದ್ಯ. ಚಿನ್ನಯ್ಯನೇ ಮುಂದೆ ಪ್ರೇತ ಸಂಚಾರವನ್ನು ವಿವರಿಸುವಾಗ (ಪುಟ : 44) ಆ ಪ್ರೇತ ನನ್ನ ತಲೆಯ ಬಳಿಯಲ್ಲೇ ಕಾಲು ಹಾಕುತ್ತಿದೆಯೋ ಎಂಬ ಭ್ರಮೆಯಾಗಿ ಬೆವರಿದರೂ ಆಶ್ಚರ್ಯವಿಲ್ಲ !“ ಈ ಕಾದಂಬರಿಯ ಜೀವಾಳವಾಗಿರುವ ಭಾಷೆಯ ಚೆಲುವು ಇನ್ನೆಲ್ಲಿಯೂ ಕಾಣಲಾರದೆಂಬಷ್ಟು ತಾಯ್ನೆಲದ ಶಕ್ತಿಯನ್ನು ಪಡೆದಿವೆ...ಅಯ್ಯರ್ ಈ ಕಾದಂಬರಿಯನ್ನು ಬರೆದು ದಿನದಿನಕ್ಕೆ ರಕ್ತಹೀನವಾಗುತ್ತಾ ನಡೆದಿದ್ದ ಕನ್ನಡ ಕಾದಂಬರಿಗೆ ಹೊಸ ಜೀವ

ವನ್ನು ತುಂಬಿದ್ದಾರೆ." ಎಂದು ಕುರ್ತುಕೋಟಿಯವರು ಹೇಳಿದುದು ನೂರಕ್ಕೆ ನೂರು ಸತ್ಯ.

'ದೆಯ್ಯದ ಮನೆ'—ಅಯ್ಯರ್ ಕನ್ನಡಿಗರಿಗೆ ಕೊಟ್ಟ ಮುಂಗಡ. ಅದನ್ನು ಕೊಂಡು ಆಶೆ, ಭರವಸೆಗಳಿಂದ ಕಾಯುತ್ತಿದ್ದ ಕನ್ನಡಿಗರಿಗೆ ಕಾಲಾಂತರದಲ್ಲಿ ಅಯ್ಯರ್ ಮುತ್ತುಗಳಂತಹ ಮೂರು—ರೂಪದರ್ಶಿ, ಶಾಂತಲಾ, ಸಮುದ್ಯತಾ—ಕಾಣಿಕೆಗಳನ್ನು ನೀಡಿ ಅವರ ಕೊಂಡಾಟಕ್ಕೆ ತಕ್ಕವರಾದರೆಂಬುದನ್ನು ಮತ್ತೆ ಹೇಳಬೇಕಿಲ್ಲ.

# ತಿದ್ದುಪಡಿ

| ಪುಟ–ಪಂಕ್ತಿ | ತಪ್ಪು | ಒಪ್ಪು |
|---|---|---|
| ೧–೧೩ | ಅನನ್ಯ ಸಾಧಾರಣತೆ | ಅನನ್ಯಸಾಧಾರಣತೆ |
| ೩–೨೧ | ಸಾಹಿತ್ಯ | ಸಾಹಿತ್ಯದ |
| ೪–೪ | Great, Sentinel | Great Sentinel |
| ೪–೫ | ಮುಂತಾದುವು ನಮ್ಮ ನುಡಿಯ | ಮುಂತಾದುವು ಗಾಂಧೀಜಿ ನಮ್ಮ ನುಡಿಯ |
| ೮–೩ | ಹರಿಕತೆ | ಹರಿಕಥೆ |
| ೮–೪ | ಜನಸಾಮಾನ್ಯರು | ಜನಸಾಮಾನ್ಯರನ್ನು |
| ೧೦–೭ | ಕೊಟಿದಾರೆ | ಕೊಟ್ಟಿದ್ದಾರೆ |
| ೧೨–೪, ೫ | ಗ್ರಂಥಧ್ವಯಗಳು ಸಿದ್ಧಪಡಿಸಿವೆ | ಗ್ರಂಥದ್ವಯ ಸಿದ್ಧಪಡಿಸಿದೆ |
| ೧೨–೧೫ | ಅಚಾರ್ಯರು | ಅಚಾರ್ಯರು |
| ೧೫–೧೫ | Prvieous | Precious |
| ೨೦–೧೮ | ಶ್ಲೇಷಾರ್ಥವಾದ | ಶ್ಲೇಷಾರ್ಥಕವಾದ |
| ೨೦–೨೬ | ಬದ್ಧಿ | ಬುದ್ಧಿ |
| ೨೪–೨ | ತಮ್ಮಿಬ್ಬರ | ತಮ್ಮಿಬ್ಬರ |
| ೩೧–೨೨ | ಅಯಾಚಿತವಾದ | ಅಯಾಚಿತವಾಗಿ |
| ೩೫–೪ | ಆಗಬೇಕಾದ್ದಿದೆ | ಆಗಬೇಕಾದದ್ದಿದೆ |
| ೩೫–೫ | ಅಂಟಿಕೊಳು | ಅಂಟಿಕೊಳ್ಳು |
| ೩೫–೬ | ಓದುವ್ವ | ಓದುವ |
| ೩೮–೨೯ | ಮೆಚ್ಚಿಬಹುದಾದ | ಮೆಚ್ಚಬಹುದಾದ |
| ೩೯–೧ | ಸಹಜಕವಿತ್ವು | ಸಹಜಕವಿತ್ವ |
| ೩೯–೨೪ | 'ಕೋಡಬಳೆ' | 'ಕೋಡುಬಳೆ' |
| ೩೯–೩೦ | ಓಡಲೇಳಿಸಿ | ಓಡಲೆಳಸಿ |
| ೪೪–೧೭ (ಪದ್ಯ) | ಕೋಡಿವರೆ | ಕೋಡಿವರಿ |
| ೪೫–೨೭ | ಅಳರಿನ | ಅಳಲಿನ |
| ೪೯–೧೧ | ವಿಡವೆ | ವಿಧವೆ |
| ೫೨–೧ | ಬಣ | ಬಣ್ಣ |
| ೫೧–೪ | ಚೆಲವು | ಚೆಲುವು |
| ೫೧–೧೮ | ಸಾಮಾನ್ಯವಾಗೆ | ಸಾಮಾನ್ಯವಾಗಿ |
| ೫೧–೨೪ | ಅಗೊಳಿಮಂಜಣಂ | ಅಗೊಳಿಮಂಜಣ |

| | | |
|---|---|---|
| ೫೧–೩೧ | ಬಾಷನೂರು | ಬಾಕಿನೂರು |
| ೫೩–೧೫ | ಸಹಜವಾಗಿದ | ಸಹಜವಾಗಿದ್ದ |
| ೫೪–೧೨ | ತುರಾಂಚೆ | ತುದುಚೆ |
| ೫೫–೫ | ಪರಿಷ್ಕರಣಾಪುರದ | ಪರಿಷ್ಕರಣಾತುಕದ |
| ೫೫–೨೦ | " ರಂಗಣ್ಣನ ಕನಸುಗಳು " | " ರಂಗಣ್ಣನ ಕನಸಿನದಿನಗಳು " |
| ೬೦–೨೭ | ಪರಿದಾದೊಡಂ | ಪಿರಿದಾದೊಡಂ |
| ೬೩–೩ | ಫೋಷವು | ಘೋಷವು |
| ೬೮–೭ | ಅವುಗಳ | ಅವುಗಳ |
| ೭೨–೧೦ | ಮೂಲಗಳಿಂದಲೂ | ಮೂಲಗಳಿಂದ |
| ೭೨–೨೫ | ಸಂಗ್ರಿಹವೇ | ಸಂಗ್ರಹವೇ |
| ೭೨–೩೦ | ಎಲ್ಲರೂ | ಎಲ್ಲರೂ) |
| ೭೩–೨ | ಕೃತಿಗೆಳೆಂಬುದೂ | ಕೃತಿಗಂಳೆಬುದೂ |
| ೮೫–೨೬ | ಸ್ವಭಾವಗಳ | ಸ್ವಭಾವಗಳನ್ನು |
| ೮೮–೧೨ | ಪತ್ರಿಕೆಗೂ | ಪತ್ರಿಕೆಗಳೂ |
| ೯೨–೪ | ವ್ಯಂಗ್ಯಚಿತ | ವ್ಯಂಗ್ಯಚಿತ್ರ |
| ೯೫–೩ | till | tell |
| ೯೭–೨೩ | ಹೇಳಿಕೊಂಡನಂತೆ | ಕೇಳಿಕೊಂಡನಂತೆ |
| ೧೦೦–೩೧ | ಇಂಗ್ಲಿಷಿ | ಇಂಗ್ಲಿಷಿನಲ್ಲಿ |
| ೧೧೪–೩೩ | ಮರೆಯುಲಾರದ | ಮರೆಯಬಾರದ |
| ೧೧೫–೧೮ | ವಿಹಾಸಲಿಲ್ಲ | ವಿಹಾಸಲಲ್ಲ - |



ಎಂ. ರಾಮಚಂದ್ರ

5-6-1939 ರಲ್ಲಿ ಸುಳ್ಯ ತಾಲೂಕಿನ ಒಂದು ಹಳ್ಳಿಯಲ್ಲಿ ಜನಿಸಿದ ಶ್ರೀ ಎಂ. ರಾಮಚಂದ್ರ 1960 ರಲ್ಲಿ ಮಂಗಳೂರಿನ ಸೇಂಟ್ ಅಲೋಸಿಯಸ್ ಕಾಲೇಜಿನಿಂದ ಬಿ.ಎ., ಪದವಿಯನ್ನೂ 1962 ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಎಂ.ಎ., ಪದವಿಯನ್ನೂ ಪಡೆದರು. 1962ರಿಂದಲೂ ಕಾರ್ಕಳದ ಶ್ರೀ ಭುವನೇಂದ್ರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

ಶ್ರೀ ಸೇಡಿಯಾಪು ಕೃಷ್ಣಭಟ್ಟರಿಗರ್ಪಿಸಿದ ಸಂಭಾವನಾ ಗ್ರಂಥ 'ಒಸಗೆ'ಯ ಸಹ ಸಂಪಾದಕರಾಗಿದ್ದ ಇವರು ಹಲವಾರು ಸ್ವತಂತ್ರ ಕೃತಿಗಳನ್ನೂ ಲೇಖನಗಳನ್ನೂ ಪ್ರಕಟಿಸಿದ್ದಾರೆ. 'ಶಿಲ್ಪಶ್ರೀ', 'ಪುಷ್ಪಾಂಜಲಿ', 'ಉಪಹಾರ', 'ಬಾಸಿಗ'—ಇವು ಕೆಲವು ಸಂಪಾದಿತ ಕೃತಿಗಳು. 'ಸೇಡಿಯಾಪು ಕೃಷ್ಣಭಟ್ಟ' ಎಂಬ ಕಿರುಕೃತಿಯನ್ನು ಉಡುಪಿಯ ಎಂಜಿಎಂ ಕಾಲೇಜು ಪ್ರಕಟಿಸಿದೆ.



● ಪರ್ಣಕುಟಿ ● ಬಾಳಿಗೊಂದು ನಂಬಿಕೆ ● ನೆನಪುಗಳು
● ನಂದಾದೀಪ ● ಮುಗುದೆಯರ ಪತ್ರಗಳು ● ಗದಾಯುದ್ಧ
● ಸತ್ಯವಿಜಯ ● ನೀತಿಚಿಂತಾಮಣಿ ● ಮಕ್ಕಳ ಗೀತಗಳು
● ಚೆಂಗಲವೆ ● ಕೋಟಿ-ಚೆನ್ನಯ ● ರಂಗಣ್ಣನ ಕನಸಿನ
ದಿನಗಳು ● ಗಂಡುಗೊಡಲಿ ● ಮಯೂರ ● ಒಲುಮೆ
● ಪಂಪಾಯಾತ್ರೆ ● ತಪಸ್ವಿನೀ ● ಹೂಬಾಣಗಳು ● ಹಕ್ಕಿ
ೋಟ ● ಆರ್ಯಕೀರ್ತಿ ● ಹಗಲುಗನಸುಗಳು ● ಕಾಣಿಕೆ
ಿತ್ರಮಯ ದಕ್ಷಿಣ ಕನ್ನಡ ● ಕರ್ನಾಟಕದ ಗತ ವೈಭವ
ಲ್ಯದ ಮನೆ